# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಮೋನಪ್ಪ, ವೇಲ್, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ, ವಿವೇಕಾನಂದ

ಮುಖಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಒಂದು ಮನೆಯ ಪಕ್ಕದಲ್ಲಿ ಉದ್ಯಾನವಿದ್ದರೆ ಅಲ್ಲಿ ಜರುಗುವ ದುಷ್ಕೃತ್ಯ ಮತ್ತು ಅಪಘಾತಗಳಿಗೆ ಆ ಮನೆಯವರೇ ಜವಾಬ್ದಾರರು, ಅವರೇ ಅಪರಾಧಿಗಳು ಎಂಬ ಹೊಸ ಸೂತ್ರವನ್ನು ಗುಲ್ಬರ್ಗದ ಪೊಲೀಸರು ಹಾಗೂ ಜಿಲ್ಲಾಧಿಕಾರಿ ರೂಪಿಸಿದ್ದಾರೆ. ಅವರ ಉದ್ಧಟತನಕ್ಕೆ ಪಾರವಿಲ್ಲವೆಂದು ಮಾತ್ರ ಇದರರ್ಥವಲ್ಲ, ಆರೆಸ್ಸೆಸ್ ಮತ್ತು ಬಿಜೆಪಿ ದಾಂಧಲೆಕೋರರ ಜೊತೆ ಶಾಮೀಲಾಗಿ ಅವರು ಪ್ರೊ॥ ಆರ್. ಕೆ. ಹುಡಗಿ ಮತ್ತು ಶ್ರೀ ಸುನಿಲ್ ಹುಡಗಿಯವರನ್ನು ಜಾಮೀನುರಹಿತ ವಾರಂಟಿನಡಿ ಬಂಧಿಸಿ ಮೂರು ದಿನ ಪೊಲೀಸ್ ಠಾಣೆಯಲ್ಲೇ ಕೂಡಿಹಾಕಿದ್ದರು ಎಂಬುದು ಈಗ ಬಹುಮಟ್ಟಿಗೆ ಸಾಬೀತಾಗಿದೆ. ಪುಂಡರನ್ನು ಹಿಡಿದು ಶಿಕ್ಷಿಸುವ ಬದಲು ಅವರ ಕ್ಷುದ್ರ ರಾಜಕೀಯಕ್ಕೆ ಮಣಿಯುವುದು ಶಿಸ್ತು ಮತ್ತು ಕಾನೂನು ಪಾಲನೆಯ ಲಕ್ಷಣವಲ್ಲ. ದಾಂಧಲೆ ನಡೆಸುವವರ ವಿರುದ್ಧ ಕ್ರಮ ಕೈಗೊಂಡರೆ ಅವರು ಇನ್ನೂ ಹೆಚ್ಚು ದಾಂಧಲೆ ನಡೆಸುತ್ತಾರೆಂದು ಬೆದರಿ, ಎಂದೂ ದಾಂಧಲೆಗೆ ಕುಮ್ಮಕ್ಕು ನೀಡದ ಪ್ರೊ॥ ಹುಡಗಿಯಂಥವರನ್ನು ದಸ್ತಗಿರಿ ಮಾಡುವುದು ಇಂದಿನ ಗೃಹಮಂತ್ರಿಯವರ ನೂತನ ಪ್ರಯೋಗದಂತೆ ಕಾಣುತ್ತದೆ. ಅವರು ಮುಖ್ಯ ಮಂತ್ರಿಗಳೂ ಆಗಿದ್ದು, ಅವರ ಪಕ್ಷದೊಳಗಿನ ತಿಕ್ಕಾಟಗಳನ್ನು ಈ ರೀತಿ ಬಗೆಹರಿಸಿಕೊಳ್ಳಲು ಬಯಸಿದ್ದರೆ ಅದು ಸರ್ವಥಾ ಯೋಗ್ಯವಲ್ಲ. ಖರ್ಗೆಯವರ ಜಿಲ್ಲೆಯೂ ಗುಲ್ಬರ್ಗ. ಇಬ್ಬರು 'ಮಹಾ ನಾಯಕರು' ಇದ್ದಾಗ್ಯೂ, ಗುಲ್ಬರ್ಗದಲ್ಲಿ ಬಿಜೆಪಿಯ ಹಾವಳಿ ಎಲ್ಲೆ ಮೀರುತ್ತದೆಂದರೆ ಏನರ್ಥ ? ದಾಂಧಲೆ ಮಾಡುವವರನ್ನು ಹತ್ತಿಕ್ಕದೆ ಬೆಳೆಯಗೊಡುವುದು ಫ್ಯಾಸಿಸ್ಟ್ ಮನೋಧರ್ಮವೆಂಬ ಬೆಂಕಿಗೆ ತುಪ್ಪ ಸುರಿದಂತೆ ಎಂಬುದನ್ನು ಈ ಇಬ್ಬರು ಸಚಿವರೂ ಅರಿತುಕೊಳ್ಳಬೇಕು.

ಸಾಮಾನ್ಯವಾಗಿ ದೇವರು ಮಾನವನ ರಕ್ಷಕನೆಂದು ಭಾವಿಸುವುದು ವಾಡಿಕೆ. ಗುಲ್ಬರ್ಗದಲ್ಲಿ ಅದೇಕೋ ಪಾಪ ದೇವರಿಗೆ ಮಾನವ ರಕ್ಷಕರು ಬೇಕಾಗಿದ್ದಾರೆ. ಎಲ್ಲೆಂದರಲ್ಲಿ ದೇವಸ್ಥಾನ, ಮಸೀದಿ, ಚರ್ಚು ಮುಂತಾದ ಮಂದಿರಗಳು ಅಸ್ತಿತ್ವಕ್ಕೆ ಬರುತ್ತವೆಂದರೆ ಸಾರ್ವಜನಿಕ ಆಸ್ತಿಯನ್ನು ಖಾಸಗಿಯನ್ನಾಗಿ ಮಾಡಿಕೊಳ್ಳುವ ಪ್ರಚಂಡ ಹುನ್ನಾರ ನಡೆದಿದೆಯೆಂದರ್ಥ. ಉದ್ಯಾನಗಳಂತೂ ಈ ರೀತಿಯ ದೇವರ ಭಕ್ತರ ಹಲ್ಲೆಗೆ ಮೊದಲ ಗುರಿ. ರಾತ್ರೋರಾತ್ರಿ ದೇವರನ್ನು ಸ್ಥಾಪಿಸುವವರು ಬೇರೆಯವರಿಗಿಂತ ಶ್ರೇಷ್ಠ ಭಕ್ತರೇನೂ ಆಗಿರುವುದಿಲ್ಲ. ದೇವರನ್ನು ಮುಂದುಮಾಡಿ ಅವರು ನಡೆಸುವುದು ಆಸ್ತಿಗಾಗಿ, ಪ್ರಭಾವಕ್ಕಾಗಿ ಮತ್ತು ಕೆಟ್ಟ ರಾಜಕೀಯಕ್ಕಾಗಿ ಎಂಥವೋ ಕುತಂತ್ರಗಳು. ನಿಜಭಕ್ತರಾದರೆ ಇರುವ ಮಂದಿರಗಳು ಸಾಕು, ಮನೆಯ ಪೂಜಾಗೃಹ ಸಾಕು, ವಿಶೇಷವಾಗಿ ಹೃದಯಮಂದಿರ ಸಾಕು. ಗುಲ್ಬರ್ಗದ ಉದ್ಯಾನವನ್ನು ದೇವರಿಗಾಗಿ ಕಬಳಿಸಲು ಹೊರಟ "ನಾಗರಿಕ"ರನ್ನು ಪ್ರೊ॥ ಹುಡಗಿ ಮತ್ತಿತರರು ವಿರೋಧಿಸಿದ್ದು, ನಗರಸಭೆ ಮಧ್ಯಪ್ರವೇಶ ಮಾಡಿ ಕಬಳಿಕೆಯನ್ನು ಹುಸಿಗೊಳಿಸಿದ್ದು, ನಂತರ ಭಕ್ತರು ಆವೇಶದಿಂದ ನಗರಸಭೆಯ ಕಚೇರಿಯನ್ನು ಪುಡಿಪುಡಿ ಮಾಡಿದ್ದು, ಜಿಲ್ಲಾಧಿಕಾರಿಯು ಭಕ್ತರಿಗೆ ಶರಣಾಗತನಾದ್ದು, ಇವೆಲ್ಲಾ ಈಗಾಗಲೇ ಸಾರ್ವಜನಿಕರಿಗೆ ತಿಳಿದಿದೆ. ಪುಡಿಮಾಡಿದವರ ಮನಸ್ಸನ್ನು ಗೆಲ್ಲಲು ಪ್ರೊ॥ ಹುಡಗಿಯವರ ಮೇಲೆ ಆರೋಪ ಹೊರಿಸಿ ದಸ್ತಗಿರಿ ಮಾಡಲಾಯಿತೆ, ಎಂಬುದು ಪ್ರಶ್ನೆ. ಕಾಲೇಜಿನಲ್ಲಿ ಈವರೆಗೆ ಒಬ್ಬ ವಿದ್ಯಾರ್ಥಿಗೂ ಸಹ ಒಂದೇಟು ಹಾಕಿರದ ಹುಡಗಿಯವರು ಹನುಮಂತನ ಮೂರ್ತಿಯ ಮೂತಿಯನ್ನು ಮಗನೊಡನೆ ಸೇರಿ ಮುರಿದುಹಾಕಿರಬಹುದೆಂದು ಗುಲ್ಬರ್ಗದಲ್ಲಿಯಾಗಲಿ ರಾಜ್ಯದಲ್ಲಿಯಾಗಲಿ ಯಾರಾದರೂ ನಂಬುತ್ತಾರೆಯೆ ? ಕೋಮು ಸಾಮರಸ್ಯಕ್ಕಾಗಿ ಅಹರ್ನಿಶಿ ಕೆಲಸ ಮಾಡುವ ಈ ಪ್ರಾಧ್ಯಾಪಕರು ಪ್ರಕ್ಷುಬ್ಧ ಪರಿಸ್ಥಿತಿ ನಿರ್ಮಾಣವಾಗುವಂತಹ ಕೆಲಸಕ್ಕೆ ಕೈಹಾಕಿಯಾರೆ ? ಧರ್ಮಸಿಂಗ್ ಅವರು ಈ ಪ್ರಶ್ನೆಗಳಿಗೆ ಉತ್ತರ ನೀಡಬೇಕು. ನಂತರದಲ್ಲಿ ದಾಂಧಲೆ ನಡೆಸಿದ್ದವರನ್ನು ಬಂಧಿಸಲಾಯಿತೆಂಬುದು ಬೇರೆ ವಿಷಯ. ಮೊದಲು ಪ್ರೊ॥ ಹುಡಗಿ ಮತ್ತು ಸುನಿಲ್ ಹುಡಗಿಯವರ ವಿರುದ್ಧದ ಆಪಾದನೆಯನ್ನು ಸರ್ಕಾರ ರದ್ದುಗೊಳಿಸಬೇಕು, ಯಾವ ಉದ್ಯಾನದಲ್ಲೂ ದೇವರ ಹೆಸರಿನಲ್ಲಿ ರಾಜಕೀಯಕ್ಕೆ ಅವಕಾಶ ನೀಡಕೂಡದು ಮತ್ತು ದಾಂಧಲೆಕೋರರನ್ನು ಶಿಕ್ಷಿಸಬೇಕು. ಗುಲ್ಬರ್ಗದ ಜಿಲ್ಲಾಧಿಕಾರಿ ಮತ್ತು ಪೊಲೀಸ್ ಅಧಿಕಾರಿಗಳ ವರ್ತನೆಯನ್ನು ತನಿಖೆಗೆ ಒಳಪಡಿಸಿ ತೀರ್ಮಾನವನ್ನು ಬಹಿರಂಗಪಡಿಸಬೇಕು ಮತ್ತು ಶಿಸ್ತು ಕ್ರಮ ಕೈಗೊಳ್ಳಬೇಕು. ಫ್ಯಾಸಿಸ್ಟ್ ದುರ್ಮಾರ್ಗಕ್ಕೆ ಕಡಿವಾಣ ಹಾಕಲು ಇವೆಲ್ಲಾ ಅವಶ್ಯಕ.

* * *

ಕನ್ನಡವು ಶಾಸ್ತ್ರೀಯ ಭಾಷೆ ಹೌದೆ, ಅಲ್ಲವೆ, ಎಂಬುದನ್ನು ದೆಹಲಿಯಲ್ಲಿ ಯಾವನೋ ಸರ್ಕಾರದ ಉಪಕಾರ್ಯದರ್ಶಿಯು ತೀರ್ಮಾನಿಸಬೇಕೆ ಎಂಬ ಚರ್ಚೆ ಬಿರುಸಿನಿಂದ ನಡೆಯುತ್ತಿದೆ. ಆ ಭಾಷೆಯಲ್ಲಿರುವ ಮೂಲದ್ರವ್ಯವನ್ನು ಜನಗಳಿಗೆ ತಲುಪಿಸುವುದಕ್ಕಿಂತಲೂ ಹೆಚ್ಚಾಗಿ ಒಂದೆರಡು ಪ್ರಶಸ್ತಿಗಳನ್ನು ಗಳಿಸಿಕೊಳ್ಳುವುದು ಆದ್ಯತೆ ಪಡೆಯಬಾರದೆಂಬುದು ಸಾಮಾನ್ಯ ವಿವೇಕ. ಯಾರೋ ಮರೈಮಲೈ ಎಂಬ ತಮಿಳು ಪ್ರಾಧ್ಯಾಪಕನು ತಮಿಳು ಭಾಷೆ

೭ನೇ ಪುಟಕ್ಕೆ




ಸಂಪುಟ-೭ ಸಂಚಿಕೆ-೭ ಫೆಬ್ರವರಿ ೨೦೦೬

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : nkp@bgl.vsnl.net.in
website : www.navakarnatakabooks.com


# ರಾಮಬಾಣದ ಭ್ರಮೆಯಲ್ಲಿ

**ಸಂಪಾದಕೀಯ**

ಆರೋಗ್ಯದ ಬಗೆಗಿನ ಕಾಳಜಿ ಸಹಜವಾದ್ದು. ಶರೀರವು ಜರ್ಜರವಾಗಿ, ವ್ಯಾಧಿಗೆ ತುತ್ತಾಗಿ, ಇನ್ನೇನೂ ಪರಿಹಾರವಿಲ್ಲವೆಂದು ಖಚಿತವಾದಾಗ ಗಂಗಾಜಲವೇ ಔಷಧಿ, ಹರಿ ನಾರಾಯಣನೇ ವೈದ್ಯ ಎಂಬ ಶ್ಲೋಕವೊಂದಿದೆ. ಅಂದರೆ, ನಿಸೂರಾಗಿ ಸಾವನ್ನು ಬರಮಾಡಿಕೊಳ್ಳಬೇಕು. ಹಾಗಿಲ್ಲದಿದ್ದಾಗ ಶರೀರದ ಲಾಲನೆ - ಪೋಷಣೆ ಅಗತ್ಯ, ಸ್ವಾಗತಾರ್ಹ. ಶರೀರದ ಜೊತೆಗೆ ಮನಸ್ಸನ್ನೂ ಶುದ್ಧೀಕರಿಸಿದರೆ ಇನ್ನೂ ಹೆಚ್ಚಿನ ಶ್ರೇಯಸ್ಸು ದೊರೆಯುತ್ತದೆ. ಆದರೆ ಇದನ್ನೆಲ್ಲಾ ಹೇಗೆ ಸಾಧಿಸುವುದು ? ಕೆಲವು ವರ್ಷಗಳ ಹಿಂದೆ ಎಣ್ಣೆಯನ್ನು ಬಾಯಿಯಲ್ಲಿ ಹಾಕಿಕೊಂಡು ಒಂದಷ್ಟು ಕಾಲ ಮುಕ್ಕಳಿಸುವುದು ಸರ್ವರೋಗಾಪಹಾರಕವೆಂಬ ಐತಿಹ್ಯವು ಪ್ರಚಾರಕ್ಕೆ ಬಂದಿತ್ತು. ''ಆಯಿಲ್ ಪುಲಿಂಗ್'' ಎಂದು ಕರೆಯಲಾದ ಈ ವಿಧಾನದ ಬಗ್ಗೆ ಹಲವು ಪುಸ್ತಕಗಳು ಬಂದುವು. ಈಗ ಅದರ ಕಾವು ಅಷ್ಟಾಗಿ ಉಳಿದಿಲ್ಲ. ಆದರೂ ಒಂದು ಭ್ರಮೆ ಉಳಿದಿದೆ. ಎಲ್ಲ ರೋಗಗಳಿಗೂ ಮದ್ದಾಗಿ ಪ್ರಭಾವ ಬೀರುವ ಯಾವುದೋ ಒಂದು ವಿಧಾನವಿದೆಯೆಂಬುದು ಆ ಭ್ರಮೆ. ಮಾನವ ಶರೀರ ಮತ್ತು ಮನಸ್ಸುಗಳ ಅಗಾಧ ಸಂಕೀರ್ಣತೆಯನ್ನು ತಿಳಿದಿರುವಾಗಲೂ ಯಾವುದೋ ಒಂದು ಮದ್ದು ಎಲ್ಲ ರೋಗಗಳನ್ನೂ ನಿವಾರಿಸಬಹುದೆಂಬ ನಿರೀಕ್ಷೆಯೇ ಅಪಕ್ವವಾದ್ದು. ಹಾಗೇನಾದರೂ ಒಂದು ಮದ್ದು ಇದ್ದಿದ್ದರೆ ಬೇರೆ ಮದ್ದುಗಳನ್ನು ಕಂಡುಹಿಡಿಯುವ ಪ್ರಯೋಗ-ಪ್ರಯತ್ನಗಳು ನಿರರ್ಥಕವಾಗಿರುತ್ತಿದ್ದುವು. ಎಲ್ಲದಕ್ಕೂ ಪ್ರಾಣಾಯಾಮವು ಪರಿಣಾಮಕಾರಿ ಮದ್ದೆಂದು ಹೇಳುವ ಹರಿದ್ವಾರದ ರಾಮದೇವ ಸಹ ಆ ಆಯಾಮವನ್ನು ವಿಸ್ತರಿಸಿಕೊಂಡು ಹಲವು ಬೇರೆ ಮದ್ದುಗಳನ್ನು ನೀಡುತ್ತಾರೆಂಬುದು ಗಮನಾರ್ಹ. ಕಪಾಲಭಾತಿ ಮತ್ತು ಅನುಲೋಮ-ವಿಲೋಮ ಸರ್ವರೋಗಾಪಹಾರಕವಾದರೆ ಬೇರೆ ಮದ್ದುಗಳು, ಯಾವುವೋ ಇಲ್ಲದ ರೋಗಗಳಿಗೆ ಮದ್ದಾಗಿರಬೇಕು, ಅಷ್ಟೆ. ಸಕ್ಕರೆ ಕಾಯಿಲೆಯನ್ನಲ್ಲದೆ ಅರ್ಬುದ, ಕ್ಷಯ, ಮುಂತಾದುವನ್ನೂ ಗುಣಪಡಿಸುವ ಸಾಮರ್ಥ್ಯ ಪ್ರಾಣಾಯಾಮಕ್ಕಿದೆಯೆಂದು ರಾಮದೇವರಿಗಿಂತಲೂ ಅವರ ಶಿಷ್ಯಕೋಟಿಯು ಭ್ರಮಾವೃತವಾಗಿರುವಂತಿದೆ. ಅಮೆರಿಕಾ ಕಂಡುಹಿಡಿದ ಏಡ್ಸ್ ರೋಗಕ್ಕೂ ಅದೇ ಉತ್ತರವೆಂಬ ಪ್ರತೀತಿಯನ್ನು ಸ್ವತಃ ರಾಮದೇವರೇ ಹಬ್ಬಿಸಿದ್ದಾರೆ. ಪ್ರಾಣಾಯಾಮವು ನೀಡಬಹುದಾದ ಸಮಚಿತ್ತದಿಂದ ಈ ಹೇಳಿಕೆಗಳನ್ನು ವಿಶ್ಲೇಷಿಸಿಕೊಳ್ಳುವುದು ಆರೋಗ್ಯಕರ.

ಸಾವಿರಾರು ರೂಪಾಯಿಗಳನ್ನು ಕೊಟ್ಟು ಸಹಸ್ರಾರು ಮಂದಿ ಒಂದೆಡೆ ಸೇರಿ ಸಾಮೂಹಿಕವಾಗಿ ಪ್ರಾಣಾಯಾಮ ಕಲಿತುಕೊಳ್ಳುತ್ತಾರೆ ಎಂಬುದು ಒಂದು ಚಮತ್ಕಾರ. ನಿರರ್ಗಳವಾಗಿ ಮಾತನಾಡುವ, ದೂರದಲ್ಲೆಲ್ಲೋ ಕೂತಿರುವ, ಕಲಿಯುವವರು ಏನು ಮಾಡುತ್ತಿದ್ದಾರೆಂಬುದನ್ನು ಎಳ್ಳಷ್ಟೂ ಗಮನಿಸಲಾರದ ವ್ಯಕ್ತಿಯಿಂದ ಬೆಳಿಗ್ಗೆ ೫ ಗಂಟೆಯ ಚಳಿಯಲ್ಲಿ ಯಾರಾದರೂ ಪ್ರಾಣಾಯಾಮವನ್ನು ಸರಿಯಾಗಿ ಕಲಿತರೆ ಅವರು ಪವಾಡಪುರುಷರೇ ಆಗಿಬಿಡುತ್ತಾರೆ. ವಾಸ್ತವಿಕವಾಗಿ ಅವರು ತಮ್ಮ ಶರೀರಕ್ಕೆ ಆಪತ್ತು ತಂದುಕೊಳ್ಳದಿದ್ದರೆ ಅಷ್ಟೇ ಸಾಕು. ವಾರದ ನಂತರ ಆ ಶಿಷ್ಯಕೋಟಿಯ ಬಹುಭಾಗ ಅಭ್ಯಾಸವನ್ನು ಮುಂದುವರಿಸದಿರುವುದರಿಂದ ಆಪತ್ತಿನ ಪ್ರಮಾಣವು ಕಡಿಮೆಯಾಗುವುದು ಒಂದು ಸಂತೋಷದ ವಿಷಯ.

ಉಸಿರಾಟದ ಮಹತ್ವವನ್ನು ರಾಮದೇವರು ಖ್ಯಾತಿಗೆ ಬರುವ ಮುನ್ನ ಕರ್ನಾಟಕದಲ್ಲಿ ಹಲವರು ಪ್ರಚುರಪಡಿಸಿದ್ದರು. ಆದರೆ ನಮ್ಮ 'ಜನಕೋಟಿ'ಗೆ ಅದು ಪಥ್ಯವೆನಿಸಲಿಲ್ಲ, ಹರಿದ್ವಾರದಿಂದ ಬಂದ ಮಹಾವಾಣಿಯೊಂದೇ ಕಲಶದ ತೀರ್ಥ! ಇತ್ತೀಚಿನವರಲ್ಲಿ ಹಂಪಿಯ ಸದಾಶಿವಯೋಗಿಗಳು 'ಪ್ರಾಣ'ವನ್ನು ಕುರಿತಂತೆ ಗ್ರಂಥಗಳನ್ನು ಬರೆದಿದ್ದಾರೆ. ಅಭ್ಯಾಸಕ್ಕೆ ಮಾರ್ಗದರ್ಶನ ನೀಡಿದ್ದಾರೆ. ಆದರೆ ಅವರದೇ ಆದ ಒಂದು ಟಿ.ವಿ. ಚಾನಲ್ ಮತ್ತು ಚಿಟಿಕೆ ಹೊಡೆದು ಬಿಳಿಕೂದಲನ್ನು ಕಪ್ಪುಮಾಡುವ ಚಾಕಚಕ್ಯತೆ ಅವರಿಗಿಲ್ಲದಿರುವಾಗ ಹೇಗೆ ತಾನೆ ಅವರು ಸಾವಿರ ಶಿಷ್ಯರಿಂದ ಒಮ್ಮೆಲೇ ಸಾವಿರ-ಸಾವಿರ ರೂಪಾಯಿಗಳ ಶುಲ್ಕ ಪಡೆಯಲು ಅರ್ಹರಾದಾರು! ಜೀವನ ಕಲೆಯನ್ನು ಬೋಧಿಸುವ ರವಿಶಂಕರರ ಸುದರ್ಶನ ಕ್ರಿಯೆ, ಸಿದ್ಧಿಸಮಾಧಿ ಯೋಗದ ಇನ್ನೊಂದು ಕಸರತ್ತು ವಿಧಾನ, ಮುಂತಾದುವನ್ನೆಲ್ಲಾ ಪ್ರಯೋಗಶಾಲೆಯಲ್ಲಿ ಅಧ್ಯಯನಕ್ಕೆ ಗುರಿಮಾಡಿ ಆಮೇಲೆ ಸ್ವೀಕರಿಸಬೇಕು. ತಮ್ಮ ಸುದರ್ಶನ ಕ್ರಿಯೆಗೆ ಅಖಿಲ ಭಾರತ ವೈದ್ಯಕೀಯ ಸಂಶೋಧನಾ ಸಂಸ್ಥೆಯು ಅರ್ಹತಾ ಪತ್ರವನ್ನು ನೀಡಿದೆಯೆಂದು ರವಿಶಂಕರ್ ತಮ್ಮ ಪ್ರಕಟಣೆಗಳಲ್ಲಿ ತಿಳಿಸುತ್ತಾರೆ; ಆದರೆ ಆ ಸಂಸ್ಥೆ ಅದರ ಅಧ್ಯಯನವನ್ನು ಕೈಗೊಂಡಿಲ್ಲವೆಂದು ಬಲ್ಲ ವಲಯಗಳು ತಿಳಿಸುತ್ತವೆ. ಶರೀರ ಸ್ವಾಸ್ಥ್ಯದ ವಿಷಯದಲ್ಲಿ ಅಡ್ಡಾದಿಡ್ಡಿ ಅಭ್ಯಾಸಗಳಿಗೆ ಪುರಸ್ಕಾರ ಮತ್ತು ಅವಕಾಶ ಇರಬಾರದು.

ಬ್ರಹ್ಮಸೂತ್ರದಲ್ಲಿ ಪ್ರತರ್ದನಾಧಿಕರಣ ಎಂಬುದೊಂದಿದೆ (೧.೧.೨೯-೩೧). ಅಲ್ಲಿ 'ಪ್ರಾಣ' ಎಂಬುದು 'ಬ್ರಹ್ಮನ್' ಎಂಬ ಅರ್ಥ ಹೊಂದಿದೆಯೆಂಬ ವಾದ ಹೂಡಲಾಗಿದೆ. ಕೌಷೀತಕೀ ಉಪನಿಷತ್ತಿನಲ್ಲಿ (೩.೧-೮) ಇಂದ್ರನು ಹೇಳಿದನೆನ್ನಲಾದ ವಾಕ್ಯಕ್ಕೆ ಇದು ವ್ಯಾಖ್ಯಾನ. ಅಲ್ಲಿ ಬರುವ ವಾಕ್ಯಗಳ ಸಾರಾಂಶ ಇದು : ''ನನ್ನನ್ನು ತಿಳಿ; ಅದು ಮಾನವನಿಗೆ ಹಿತವಾದ್ದು, ಏಕೆಂದರೆ ನಾನೇ ಪ್ರಾಣ, ಪ್ರಜ್ಞಾತ್ಮ. ಆ ಪ್ರಾಣವೇ ಪರಬ್ರಹ್ಮ. ಪಂಚಭೂತಗಳು ಹಾಗೂ ಪಂಚೇಂದ್ರಿಯಗಳು ಪ್ರಾಣವನ್ನು ಆಶ್ರಯಿಸಿವೆ. ಅದು ಅಮರವಾದ್ದು.'' ಸ್ವಾತ್ಮಾರಾಮನ ಹಠಪ್ರದೀಪಿಕೆ, ರಘುವೀರನ ಕುಂಭಕ ಪದ್ಧತಿ ಮುಂತಾದ ಗ್ರಂಥಗಳಲ್ಲಿ ಪ್ರಾಣಾಯಾಮದ ಬಗ್ಗೆ ಸುದೀರ್ಘ ವಿವರಣೆಗಳಿವೆ. ಪತಂಜಲಿಯ ಯೋಗಸೂತ್ರದಲ್ಲಿ ಸಂಕ್ಷಿಪ್ತವಾಗಿರುವುದನ್ನು ಈ ಗ್ರಂಥಗಳು ವಿಸ್ತರಿಸಿರುವಂತೆ, ವರ್ತಮಾನದಲ್ಲಿ ಅಭ್ಯಾಸದ ವಿಸ್ತರಣೆ ನಡೆದರೆ ಅಡ್ಡಿಯಿಲ್ಲ. ಆದರೆ ಅದು ಶ್ವಾಸಕೋಶಕ್ಕೆ ಧಕ್ಕೆಯುಂಟುಮಾಡುವಂಥ ಪ್ರಕಾರದ್ದಾಗಿರಕೂಡದು. ರಾಮದೇವರಾಗಲಿ, ಕೃಷ್ಣದೇವರಾಗಲಿ ಪ್ರಾಣಾಯಾಮದ ಪರಿಣಾಮವನ್ನು ಚಿತ್ರಿಸುವ ಮುನ್ನ ವೈಜ್ಞಾನಿಕ ಪ್ರಯೋಗಗಳನ್ನು ನಡೆಸಿರಬೇಕು. ಅದರ ವಿಧಾನ ಸ್ಪಷ್ಟವಿದೆ : ''ಇದರಿಂದ ಇಂತಹ ರೋಗ ಗುಣವಾಗುತ್ತದೆ'' ಎಂಬುದು ತೀರ್ಮಾನವಾಗಬೇಕಾದರೆ ಆ ರೋಗವಿರುವ ಮೂವತ್ತು ಮಂದಿಯನ್ನು ಆಯ್ದು ಎರಡು ವಿಭಾಗ ಮಾಡಬೇಕು; ಒಂದು ವಿಭಾಗಕ್ಕೆ ನಾಲ್ಕೈದು ತಿಂಗಳ ಕಾಲ ಅಭ್ಯಾಸ ಮಾಡಿಸಬೇಕು ಮತ್ತು ಇನ್ನೊಂದು ವಿಭಾಗವು ಅಂತಹ ಅಭ್ಯಾಸದಲ್ಲಿ ತೊಡಗದಿರಬೇಕು; ಆಮೇಲೆ ವ್ಯತ್ಯಾಸವನ್ನು ಗುರುತಿಸಿ, ಮಾಪನ ಮಾಡಿ, ಪರಿಣಾಮವು ಗಮನಾರ್ಹವೇ ಇಲ್ಲವೇ ಎಂಬುದನ್ನು ಹೇಳಬೇಕು. ಅದೇನನ್ನೂ ಮಾಡದೆ ಹೇಳಿಕೆಗಳನ್ನು ಕೊಡುತ್ತಾ ಹೋದರೆ ಅದು ವಿಜ್ಞಾನವಾಗುವುದಿಲ್ಲ, ಬೊಗಳೆ ಶಾಸ್ತ್ರವಾಗುತ್ತದೆ. ನಮ್ಮ ಪ್ರಾಚೀನ ಗ್ರಂಥಗಳು ಯಾವುವೂ ಪ್ರಾಣಾಯಾಮವನ್ನು ಎಲ್ಲ ರೋಗಗಳಿಗೂ ಪರಿಹಾರವೆಂದು ಸೂಚಿಸಿಲ್ಲ. ಒಂದು ನಿರ್ದಿಷ್ಟವಾದ ರೀತಿಯ ಉಸಿರಾಟವನ್ನು ಪ್ರಾಣಾಯಾಮವೆಂದು ಕರೆದು ಅದರಿಂದ ಮನಸ್ಸಿನ ಏಕಾಗ್ರತೆಯನ್ನು ಸಾಧಿಸಬಹುದೆಂದು ಯೋಗಸೂತ್ರದಲ್ಲಿ (೧-೩೪) ಹೇಳಲಾಗಿದೆ (ಪ್ರಚ್ಛರ್ದನ ವಿಧಾರಣಾಭ್ಯಾಂ ವಾ ಪ್ರಾಣಸ್ಯ॥ ಇದರ ಮೇಲಿನ ಭಾಷ್ಯದಲ್ಲಿ ವ್ಯಾಸರು ಹೇಳುವುದಿದು : ...ಪ್ರಚ್ಛರ್ದನಂ ವಿಧಾರಣಂ ಪ್ರಾಣಾಯಾಮಃ ತಾಭ್ಯಾಂ ವಾ ಮನಸಃ ಸ್ಥಿತಿಂ ಸಂಪಾದಯೇತ್।). ಉಚ್ಛ್ವಾಸ-ನಿಃಶ್ವಾಸಗಳ ನಿಯಂತ್ರಣವೇ ಪ್ರಾಣಾಯಾಮ (ಯೋಗಸೂತ್ರ ೨.೪೯ : ತಸ್ಮಿನ್ಸತಿ ಶ್ವಾಸ ಪ್ರಶ್ವಾಸಯೋರ್ಗತಿ ವಿಚ್ಛೇದಃ ಪ್ರಾಣಾಯಾಮಃ). ನಿಯಂತ್ರಣವು ಹಲವಾರು ವಿಧಗಳಲ್ಲಿ

ಸಾಧ್ಯವಾಗುತ್ತಾದ್ದರಿಂದ ಪ್ರಾಣಾಯಾಮದಲ್ಲಿ ಭೇದಗಳಿವೆ; ರಾಮದೇವ-ರವಿಶಂಕರರ ಭೇದಗಳೂ ಅವುಗಳಲ್ಲಿ ಸೇರ್ಪಡೆ ಹೊಂದಲಡ್ಡಿಯಿಲ್ಲ. ಆದರೆ 'ಜನ ಮರುಳೋ ಜಾತ್ರೆ ಮರುಳೋ' ಎಂಬಂತಾಗಬಾರದು. 'ಅದರಿಂದ ಎಲ್ಲ ರೋಗಗಳೂ ಗುಣವಾಗುತ್ತವೆ' ಎಂಬುದು ಮರುಳುತನವಾಗುತ್ತದೆ. ವೈಜ್ಞಾನಿಕವಾಗಿ ಇರುವ ಪರಿಣಾಮಗಳು ಸಾಕಷ್ಟು ಆಕರ್ಷಣೀಯವಾಗಿಲ್ಲವೆಂದು ಭಾವಿಸಿ ಇಲ್ಲದ ಭ್ರಾಂತಿಗಳನ್ನು ಪ್ರಚಾರ ಮಾಡುವುದು ಯೋಗ್ಯವಲ್ಲ.

ರಾಮದೇವ ಸೇರಿದಂತೆ ಆಯುರ್ವೇದ ವೈದ್ಯಕೀಯದಲ್ಲಿ ನಿಷ್ಣಾತರಾದವರು ಔಷಧಿಗಳ ತಯಾರಿಕೆಯಲ್ಲಿ ಯಾವ ಸಾಮಗ್ರಿಗಳನ್ನು ಬಳಸಬೇಕೆಂಬುದಕ್ಕೆ ನಮ್ಮ ಪ್ರಾಚೀನ ಗ್ರಂಥಗಳು ಮುಕ್ತವಾದ ಅವಕಾಶವನ್ನು ಕಲ್ಪಿಸಿವೆ. ರಾಜ್ಯಸಭಾ ಸದಸ್ಯೆ ಬೃಂದಾ ಕಾರಟ್ ಎತ್ತಿರುವ ಪ್ರಶ್ನೆಯು ತೀರಾ ಗೌಣವಾದ್ದೆಂದು ಇದರಿಂದ ತಿಳಿಯುತ್ತದೆ. ಪ್ರಾಣಿಗಳ ಮೇದಸ್ಸು (ಕೊಬ್ಬು) ಮತ್ತು ಮೂಳೆ ಸಹ ವರ್ಜ್ಯವಲ್ಲ. ಶರೀರದಲ್ಲಿ ಉಂಟಾಗಿರುವ ಕೊರತೆಯನ್ನು ತುಂಬುವುದು ಇಲ್ಲವೆ ಆಧಿಕ್ಯವನ್ನು ನೀಗಿಸುವುದು ವೈದ್ಯಕೀಯ ಮಾರ್ಗವೆಂದು ಚರಕ ಸಂಹಿತೆ ಹೇಳುತ್ತದೆ. ತುಂಬುವಿಕೆಗೆ ವನಸ್ಪತಿಗಳಾಗಬಹುದು, ಮಾಂಸ, ಕೊಬ್ಬು, ಯಾವುದಾದರೂ ಆಗಬಹುದು; ಅದರ ಅವಶ್ಯಕತೆ ಇದೆಯೆಂದು ಸಿದ್ಧವಾಗಬೇಕು, ಅಷ್ಟೆ. ಹಸುವಿನ ಮಾಂಸವನ್ನು ಒಂದು ಕಾಯಿಲೆಗೆ ಔಷಧಿಯೆಂದು ಹೇಳುವಾಗ ಚರಕ ಸಂಹಿತೆ ಹೇಳುತ್ತದೆ, ರೋಗಿಯು ಅದನ್ನು ತಿನ್ನದವನಾದರೆ ಅವನಿಗೆ ಅದನ್ನು ಜಿಂಕೆಯ ಮಾಂಸವೆಂದು ಹೇಳಿ ತಿನ್ನಿಸಬೇಕು, ಎಂದು. ಬೃಂದಾ ಅವರು ಸಹ ಕೊಬ್ಬು-ಮೂಳೆಗಳ ಉಪಯೋಗವನ್ನು ಖಂಡಿಸಿ ರಾಮದೇವರ ಔಷಧಿಗಳ ಬಗ್ಗೆ ಆಕ್ಷೇಪವೆತ್ತಿಲ್ಲ. ಅವರು ಹೇಳಿರುವುದು ಔಷಧಿಗಳ ತಯಾರಿಕೆಯಲ್ಲಿ ಉಪಯೋಗಿಸಿರುವ ಸಾಮಗ್ರಿಗಳ ಪಟ್ಟಿಯಲ್ಲಿ ಅವನ್ನು ನಮೂದಿಸಿಲ್ಲ ಎಂದಷ್ಟೆ. ಅವನ್ನು ನಮೂದಿಸಿದರೆ ಔಷಧಿಗಳ ವ್ಯಾಪಾರ ಕುಸಿಯುತ್ತದೆಂಬ ಅನುಮಾನ ರಾಮದೇವರಿಗೆ ಇರಬಹುದು; ಆದರೆ ಆ ಕಾರಣಕ್ಕೆ ಸುಳ್ಳು ನಮೂದನೆ ಮಾಡಲು ಅವರಿಗೆ ಸ್ವಾತಂತ್ರ್ಯವಿಲ್ಲ.

ಜನರು ಪ್ರಾಣಾಯಾಮ ಮಾಡಲಿ; ಹೆಚ್ಚುಹೆಚ್ಚು ಜನ ಅದನ್ನು ಮಾಡಲಿ. ಆದರೆ ವೈಜ್ಞಾನಿಕ ಪದ್ಧತಿಯಲ್ಲಿ ಮಾತ್ರ ಮಾಡುವಂತಾಗಬೇಕು. ಅಡ್ಡಾದಿಡ್ಡಿಯಾಗಿ ಮಾಡಿ ಆರೋಗ್ಯವನ್ನು ಹಾಳುಮಾಡಿಕೊಳ್ಳುವಂತಾಗಕೂಡದು. ಅಂತೆಯೇ ಔಷಧಿಗಳನ್ನು ಯಥೋಚಿತವಾಗಿ ಸೇವಿಸಲಿ; ಆದರೆ ಏನನ್ನು ಸೇವಿಸುತ್ತಿದ್ದಾರೆಂದು ಅವರಿಗೂ ತಿಳಿಯುವಂತಿರಲಿ. ಸಲ್ಲದ ಪರಿಣಾಮಗಳನ್ನು ಪ್ರಾಣಾಯಾಮಕ್ಕಾಗಲಿ ಔಷಧಿಗಳಿಗಾಗಲಿ ಆರೋಪಿಸುವುದು ಬೇಡ. ಅವುಗಳಿಗಿರುವ ಯಥಾರ್ಥ ಪರಿಣಾಮಗಳು ಹೇರಳವಾಗಿವೆ, ಅವು ಸಾಕು. ಯಯಾತಿಯ ಕತೆ ಕೇವಲ ಕತೆಯೆಂಬುದನ್ನು ಅರಿತರೆ ಒಳಿತು.

---

## ಮೌಲ್ಯ ಮೀಮಾಂಸೆ

**ತ**ತ್ತ್ವಶಾಸ್ತ್ರದ ಅಧ್ಯಯನವು ಬೌದ್ಧಿಕ ಕಸರತ್ತಿಗಾಗಲಿ, ಚಿಂತನಾ ಲಹರಿಯನ್ನು ಹರಿಸುವುದಕ್ಕಾಗಿ ಆಗಿರದೆ ಜೀವನದ ಅಂತಿಮ ಅರ್ಥದ ಅರಸುವಿಕೆಗಾಗಿ ಆಗಿರಬೇಕೆಂಬ ನಿರೀಕ್ಷೆ ಇದೆ. ಯಾವ ತತ್ತ್ವಶಾಸ್ತ್ರಜ್ಞನೂ ಮೌಲ್ಯಗಳ ಜಿಜ್ಞಾಸೆ ಮಾಡದಿರುವುದಿಲ್ಲ. ಪಾಶ್ಚಿಮಾತ್ಯರಲ್ಲಿ ಡೇಕಾರ್ಟ್, ಲಾಕ್ ಮುಂತಾದವರ ಪ್ರಭಾವದಿಂದಾಗಿ ಮೌಲ್ಯಗಳ ಸ್ಥಾನವನ್ನು ಜ್ಞಾನದ ಸಿದ್ಧಾಂತವು ಆಕ್ರಮಿಸಿಬಿಟ್ಟಿದೆ. ಉಪನಿಷತ್ತುಗಳು ಸಾಮಾನ್ಯವಾಗಿ ಜೀವನದ ಅಂತಿಮ ಸಾಧನೆಯ ಬಗೆಗೇ ಒತ್ತುಕೊಡುವಾಗ ಅದರ ಹಾದಿ ಯಾವುದೆಂಬುದಕ್ಕೂ ಮಹತ್ವದ ಸ್ಥಾನ ನೀಡುತ್ತವೆ. ತಿಳುವಳಿಕೆ ಅಗತ್ಯ, ಆದರೆ ಸಾಕ್ಷಾತ್ಕಾರದಿಂದ ಲಭಿಸುವ ಅಂತಃಶಾಂತಿ ಅದಕ್ಕಿಂತಲೂ ದೊಡ್ಡದು. ಮೌಲ್ಯಗಳ ಘನತೆಯನ್ನು ಎತ್ತಿಹಿಡಿಯುವಾಗ ಜ್ಞಾನದೊಡನೆ ಅದನ್ನು ತುಲನೆ ಮಾಡಿ ನೋಡುವುದುಂಟು. ಜ್ಞಾನದ ತಕ್ಷಣದ ಫಲವೆಂದರೆ ಯಾವುದೋ ವಸ್ತು ಅಥವಾ ವಿಷಯದ ಬಗೆಗಿನ ಅರಿವು. ನಮ್ಮ ಕುತೂಹಲ ತಣಿಸುವ ಲಕ್ಷಣವನ್ನು ಜ್ಞಾನ ಹೊಂದಿದೆ. ಅದನ್ನು ಬಳಸಿ ಒಂದು ನಿರ್ದಿಷ್ಟ ಕ್ರಿಯೆಯಿಂದ ನಮಗೆ ಬೇಕಾದ್ದನ್ನು ಪಡೆಯಬಹುದು. ಇಲ್ಲವೇ ಬೇಡವಾದ್ದನ್ನು ತಡೆಯಬಹುದು. ಬರ್ಗ್‌ಸನ್ ಹೇಳುವಂತೆ, ''ಚಿಂತನಾ ಲಹರಿಯು ಒಂದು ವೈಭವ, ಆದರೆ ಕ್ರಿಯೆಯು ಒಂದು ಅವಶ್ಯಕತೆ''. ಕ್ರಿಯೆ ಯಾವುದಕ್ಕೆ ? ನಮ್ಮ ಆಕಾಂಕ್ಷೆ ಅಥವಾ ಇಚ್ಛೆಯ ಪೂರೈಕೆಗೆ. ಅದನ್ನೇ ಮೌಲ್ಯವೆನ್ನುವುದು. ಅದು 'ಇಷ್ಟ' (ಬೇಕಾದ್ದು) ಮತ್ತು 'ದ್ವಿಷ್ಟ' (ಬೇಡವಾದ್ದು) ಎಂದು ಎರಡು ವಿಧ. ಮೌಲ್ಯವು 'ಇಷ್ಟ'ವೇ ಹೊರತು 'ದ್ವಿಷ್ಟ'ವಲ್ಲ. ಇಷ್ಟವಾದುದರ ಪೂರೈಕೆಗೆ ಅಸ್ತಿತ್ವದಲ್ಲಿರುವ ವಸ್ತುಗಳ ಅವಶ್ಯಕತೆ ಇದೆ; ಆದರೆ ಅವು ಕೇವಲ ಸಾಧನಗಳಷ್ಟೆ. ಜೈಮಿನಿಯ ಮೀಮಾಂಸಾ ಸೂತ್ರದ ಭಾಷ್ಯದಲ್ಲಿ ಶಬರಸ್ವಾಮಿನ್ ಹೇಳುವಂತೆ ಮುಂದೆ ಆಗಬೇಕಾದ್ದನ್ನು ಹಿಂದಿನದು ಸೂಚಿಸುತ್ತದೆ (ಭೂತಂ ಭವ್ಯಾಯ ಉಪದಿಶ್ಯತೇ). ಒಂದು ವಸ್ತುವಿನ ಬಗೆಗಿನ ತಿಳುವಳಿಕೆಯು 'ಸಾಧ್ಯ'; ಆದರೆ ಮೌಲ್ಯವು 'ಕೃತಿ-ಸಾಧ್ಯ', ಅಂದರೆ ತಿಳುವಳಿಕೆಯಿಂದ ಮುಂದೆ ಹೋಗಿ ಪಡೆಯಬೇಕಾದ್ದು. ಸೂಕ್ತಿ ಮುಕ್ತಾವಲಿ ಎಂಬ ತರ್ಕಶಾಸ್ತ್ರಗ್ರಂಥವು ಹೇಳುವಂತೆ, ಫಲಜ್ಞಾನವು ಫಲೇಚ್ಛೆಗೆ ಅಸಾಧಾರಣವಾದ ಕಾರಣ. ಯಾವುದನ್ನು ಪಡೆಯುವ ಇಚ್ಛೆ ಉಂಟಾಗಬೇಕಾದರೂ ಅದಕ್ಕೆ ಪೂರ್ವಭಾವಿಯಾಗಿ ಭಾವನೆ ಇರುತ್ತದೆ. ಆದ್ದರಿಂದ ಮೌಲ್ಯದ ಅರಸುವಿಕೆ ಮತ್ತು ಪಡೆಯುವಿಕೆಗೆ ಜ್ಞಾನ, ಭಾವನೆ ಮತ್ತು ಇಚ್ಛೆ, ಮೂರೂ ಬೇಕಾಗುತ್ತವೆ. ತಿಳಿವು ಮೊದಲು. ಅದಿಲ್ಲದಾಗ ಇಚ್ಛೆ ಫಲಿಸಲಾರದು. ತಿಳಿವು – ಇಚ್ಛೆಗಳ ನಂತರ ಪ್ರಯತ್ನ ಅಥವಾ ಕ್ರಿಯೆ. ಸಮಸ್ಯೆ ಉದ್ಭವಿಸುವುದು ಇಚ್ಛೆಯ ಸಂದರ್ಭದಲ್ಲಿ: ಅದು ಉನ್ನತವಾದದ್ದೋ, ಕೀಳಾದದ್ದೋ ಆಗಿರುತ್ತದೆ. ಆಶಯವು ಔನ್ನತ್ಯದ ಗುಣ ಹೊಂದಿರಬಹುದು; ಆದರೆ ಪ್ರಸ್ತುತ ಕ್ರಿಯೆಯು ಕೀಳು ಗುಣದ್ದಾಗಿರಬಹುದು. ಮನುಷ್ಯನ ಕಾಲು ಭೂಮಿಯ ಮೇಲೆ, ಆದರೆ ಆಕಾಶದಲ್ಲಿ ಹಾರಾಡುವುದೂ ಅವನ ಆಕಾಂಕ್ಷೆ. ಶಬರಸ್ವಾಮಿಯು ಇದನ್ನೆಲ್ಲಾ ಮನಸ್ಸಿನಲ್ಲಿಟ್ಟುಕೊಂಡು 'ಧರ್ಮ' ಶಬ್ದದ ವ್ಯಾಖ್ಯಾನ ಮಾಡುತ್ತಾನೆ : ''ಯಾವುದು ಶ್ರೇಯಸ್ಕರವೋ ಅದನ್ನು 'ಧರ್ಮ' ಶಬ್ದವು ಸೂಚಿಸುತ್ತದೆ'' (ಯ ಏವ ಶ್ರೇಯಸ್ಕರಃ ಸ ಏವ ಧರ್ಮ ಶಬ್ದೇನ ಉಚ್ಯತೇ). ಕಠೋಪನಿಷತ್ತಿನಲ್ಲಿ 'ಶ್ರೇಯಸ್' ಮತ್ತು 'ಪ್ರೇಯಸ್' ಎಂಬುವನ್ನು ಎರಡು ಧ್ರುವಗಳನ್ನಾಗಿ ಪರಿಗಣಿಸಿ ಆಯ್ಕೆಯಲ್ಲಿ ವ್ಯಕ್ತಿಗೆ ಬಿಡಲಾಗಿದೆ. ಎರಡರಲ್ಲಿ ಯಾವುದನ್ನು ಬೇಕಾದರೂ ಅವನು ಆರಿಸಿಕೊಳ್ಳುವ ಸಾಮರ್ಥ್ಯ ಹೊಂದಿದ್ದಾನೆ, ಸ್ವಾತಂತ್ರ್ಯ ಪಡೆದಿದ್ದಾನೆ. ಆಯ್ಕೆಯ ಸಾಧುತ್ವ ಅಥವಾ ಅಸಾಧುತ್ವವು 'ಮೌಲ್ಯ' ಎಂಬ ಒಂದು ಪದದಲ್ಲಿ ಅಡಕವಾಗಿದೆ.

ನಿಜ ಜೀವನದ ನಮ್ಮೆಲ್ಲರ ಕ್ರಿಯೆಗಳನ್ನು ತೂಗಿ ನೋಡಲು ಇರುವ ತಕ್ಕಡಿಯೆಂದರೆ ಮೌಲ್ಯವೊಂದೇ. ಅದು ಪಾರ್ಲಿಮೆಂಟ್ ಸದಸ್ಯರ ಗಿಂಬಳ ಪಡೆಯುವ ಹುನ್ನಾರ, ಹಾಂಗ್‌ಕಾಂಗ್‌ನಲ್ಲಿ ಕಮಲನಾಥ್ ಬಾಯಿ ಮುಚ್ಚಿಕೊಂಡು ಎಸಗಿದ ದ್ರೋಹ, ಪ್ರತಿಭಾ ಎಂಬ ಯುವತಿಯ ಕೊಲೆಯ ಹಿನ್ನೆಲೆ, ಹೀಗೆ ಎಲ್ಲವನ್ನೂ ತೂಗಿ ನೋಡುತ್ತದೆ, ನಮ್ಮ ಅಂತಸ್ಸತ್ವಕ್ಕೆ ಕನ್ನಡಿ ಹಿಡಿಯುತ್ತದೆ. ಕನ್ನಡಿಯ ಮುಂದೆ ನಿಲ್ಲುವ ಎದೆಗಾರಿಕೆ ಬೇಕು, ಅಷ್ಟೆ.

[signature]



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




## ಸಾಹಿತ್ಯಕ ಸ್ಪಂದನ

ಮಾನವ ಸಮಾಜದ ಇತಿಹಾಸದಲ್ಲಿ ಎರಡು ವರ್ಗಗಳು ನಿರ್ಮಾಣವಾದಾಗಲೇ ಶೋಷಣೆ ಮೊದಲಾಯಿತು. ಈ ಭಿನ್ನ ವರ್ಗಗಳ ಸನ್ನಿವೇಶದಲ್ಲಿ ವರ್ಗರಹಿತ ಸಮಾಜ ನಿರ್ಮಾಣವಾದಾಗಲೇ ಶೋಷಣೆ ಮುಕ್ತ ವ್ಯವಸ್ಥೆ ನೆಲೆಯಾಗಲು ಸಾಧ್ಯ. ಇಂತಹ ಕನಸನ್ನಿಟ್ಟುಕೊಂಡು ಜಗದ್ವ್ಯಾಪಿ ಹೋರಾಟ ವ್ಯಕ್ತಿ ಮತ್ತು ಸಮೂಹದ ನೆಲೆಯಲ್ಲಿ ನಡೆಯುತ್ತಾ ಬಂದಿರುವುದು ಸರ್ವವಿದಿತ. ಈ ಹಿನ್ನೆಲೆಯಲ್ಲಿ ಚಿಂತನೆ ಮತ್ತು ಹೋರಾಟ ಇಂದಿಗೂ ಇರುವುದನ್ನು ಯಾರಾದರೂ ಗುರುತಿಸಿಕೊಳ್ಳಬಹುದು. ಹೀಗಿರುವಾಗ ಇಂದು ಹೋರಾಟಗಳೆಲ್ಲಿವೆ? ಪ್ರಗತಿಪರ ಸಂಘಟನೆಗಳು ತಮ್ಮ ಕಾವನ್ನು ಉಳಿಸಿಕೊಂಡಿವೆಯೇ? ಇಂದು ವಿರಾಟ್ ರೂಪವನ್ನು ತಾಳುತ್ತಿರುವ ಯೂರೋ-ಅಮೆರಿಕನ್ ಮೂಲದ ಸಾಮ್ರಾಜ್ಯಶಾಹಿ, ವಿಸ್ತರಿಸುತ್ತಿರುವ ಬಂಡವಾಳಶಾಹಿ ಇಂತಹ ಪ್ರಶ್ನೆಗಳನ್ನು ನಮ್ಮಲ್ಲಿ ಎತ್ತುವಂತೆ ಮಾಡಿವೆ. ಇವುಗಳೊಂದಿಗೆ ಭಾರತದ ಸರ್ವಕಾಲೀನ ಸಮಸ್ಯೆಗಳಾದ ಅಸ್ಪೃಶ್ಯತೆ, ಜಾತೀಯತೆ, ಮತೀಯತೆ, ಲಿಂಗ ತಾರತಮ್ಯ ಮುಂತಾದವು ಸಹ ಜೀವಂತವಾಗಿ ನಮ್ಮನ್ನು ಕಾಡುತ್ತಿವೆ.

ಹೀಗೆ ಹತ್ತು ಹಲವು ಸಮಸ್ಯೆಗಳು ನಮ್ಮೊಂದಿಗಿರುವಾಗ ಹಸಿರನ್ನು, ಪ್ರೇಮವನ್ನು, ಹಾಸ್ಯವನ್ನು ಕುರಿತು ಸಾಹಿತ್ಯವನ್ನು ಹೇಗೆ ರಚಿಸಲು ಸಾಧ್ಯ? ನೋವನ್ನೇ ಉಸಿರನ್ನಾಗಿಸಿಕೊಂಡು ಪ್ರಸಕ್ತ ವ್ಯವಸ್ಥೆಯ ವಿರುದ್ಧ ಸೈದ್ಧಾಂತಿಕ ನೆಲೆಯಲ್ಲಿ ಸಾಂಸ್ಕೃತಿಕ ಹೋರಾಟವನ್ನು ಕಟ್ಟುತ್ತಾ ಬಂದದ್ದು ಕಳೆದ ಶತಮಾನದಲ್ಲಿ ಪ್ರಗತಿಶೀಲ ಮತ್ತು ಬಂಡಾಯ ಸಾಹಿತ್ಯವಲ್ಲದೇ ಬೇರೆಯಲ್ಲ. ಇಂತಹ ಸಂವೇದನೆಯ ಆತ್ಮವಿಶ್ವಾಸವನ್ನು ಹೆಚ್ಚಿಸಿ, ಅದರ ಪ್ರಕಟಣೆಗೆ ವೇದಿಕೆಯಾಗಿ ಕ್ರಿಯಾಶೀಲಗೊಂಡದ್ದು ಬಂಡಾಯ ಸಾಹಿತ್ಯ ಸಂಘಟನೆ.

ಬಂಡಾಯ ಸಾಹಿತ್ಯ ಸಂಘಟನೆಯು ಎಡ ಮತ್ತು ಪ್ರಜಾಪ್ರಭುತ್ವವಾದಿ ಚಿಂತನೆಗಳೆರಡೂ ನೆಲೆಯಾಗಿರುವ ವೇದಿಕೆಯಾಗಿದೆ. ಸಂಸದೀಯ ಪ್ರಜಾಪ್ರಭುತ್ವದಲ್ಲಿ ವಿಶ್ವಾಸವನ್ನಿಟ್ಟುಕೊಂಡಿರುವ ಸಮಾಜವಾದಿಗಳು ಹಾಗೂ ಈ ವ್ಯವಸ್ಥೆಯನ್ನು ನಿರಾಕರಿಸುವ ಸಮತಾವಾದಿಗಳು ಈ ಸಂಘಟನೆಯಲ್ಲಿದ್ದಾರೆ. ಹಾಗಾಗಿ ತಾತ್ವಿಕವಾಗಿ ಪರಸ್ಪರ ಎದುರಾಗುವ ಪ್ರಶ್ನೆಗಳು ಅನೇಕರಿಗೆ ಪರಸ್ಪರ ವಿರುದ್ಧದ ಅಭಿಪ್ರಾಯಗಳು ಎಂಬಂತೆ ರೋಚಕ ಅನುಭವವನ್ನೂ ಕೊಡುವುದುಂಟು. ಅಂತಹ ಸಂದರ್ಭಗಳಲ್ಲಿ ಅಕಾಡೆಮಿ, ಪ್ರಾಧಿಕಾರ, ಮೇಲ್ಮನೆ, ಕಸಾಪ ಮುಂತಾದ ಗದ್ದುಗೆಗಳ ಪರ ಮತ್ತು ವಿರುದ್ಧದ ಚರ್ಚೆಗಳು ನಡೆದು ಅದರ ನೇತ್ಯಾತ್ಮಕ ಫಲಿತಗಳನ್ನು ಬಂಡಾಯ ಸಂಘಟನೆಯ ಮಡಿಲಿಗೆ ಹಾಕುವುದುಂಟು. ಇಂತಹ ಚರ್ಚೆ, ಆತ್ಮವಿಮರ್ಶೆ ಎಲ್ಲವೂ ಸ್ವಾಗತಾರ್ಹವೇ ಸರಿ. ಆದರೆ ಈ ಆತ್ಮವಿಮರ್ಶೆಗಳನ್ನೇ ಅಂತಿಮವಾಗಿಸಿಕೊಂಡು ಸಮಕಾಲೀನ ಸವಾಲುಗಳಿಗೆ ಮುಖ ತಿರುಗಿಸಿದರೆ ಕೋಮುವಾದದ ಬೀಭತ್ಸತೆ ಬೆಳೆಯುವುದಿಲ್ಲವೇ? ಜಾಗತೀಕರಣದ ಅದೃಶ್ಯ ಕರಿಛಾಯೆ ನಮ್ಮನ್ನು ಆವರಿಸುವುದಿಲ್ಲವೇ? ಹಾಗಾಗಿ ಸಮ ಸಮಾಜದ ನಿರ್ಮಾಣದ ಕನಸನ್ನು ಭಿನ್ನ ತಾತ್ವಿಕ ದಾರಿಗಳ ಮೂಲಕ ಸಾಕಾರಗೊಳಿಸಹೊರಟ ಸೋದರರು ದಾಯಾದಿಗಳಾಗಿ ನಮಗೆ ಕಾಣ ಬಾರದಲ್ಲವೇ! ನಮ್ಮ ಐಕ್ಯ ಹೋರಾಟ ಮಾತ್ರ ಸಮಕಾಲೀನ ಮತ್ತು ಸರ್ವಕಾಲೀನ ಆತಂಕವೆಂಬ ಶತ್ರುಗಳನ್ನು ಜಯಿಸಲು ಸಾಧ್ಯವಲ್ಲವೇ! ನಾವು ಕೇವಲ ಯೋಚಿಸುವುದಲ್ಲದೇ ಕ್ರಿಯಾಶೀಲರಾಗುವುದು ಇಲ್ಲಿ ಹೆಚ್ಚು ಜವಾಬ್ದಾರಿಯುತ ವಿಚಾರವೆನ್ನಿಸುತ್ತದೆ. ಈ ನಿಟ್ಟಿನಲ್ಲಿ ಬಂಡಾಯದ ಯುವ



ಸಂಗಾತಿಗಳು ಯಾವುದಾದರೊಂದು ಸಾಮಾಜಿಕ ಚಳುವಳಿಯೊಂದಿಗೆ ಕ್ರಿಯಾಶೀಲ ಸಂಬಂಧವನ್ನು ಇಟ್ಟುಕೊಂಡು ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ಮುಂದುವರೆಯುವುದು ಸೂಕ್ತವೆನ್ನಿಸುತ್ತದೆ. ಡಾ|| ಎಂ.ಡಿ. ನಂಜುಂಡಸ್ವಾಮಿಯವರು ಹೇಳಿದ್ದಂತೆ ''ಯಾವುದೇ ಒಂದು ಸಾಮಾಜಿಕ ಚಳುವಳಿಯೊಂದಿಗೆ ಸಂಬಂಧವನ್ನಿಟ್ಟುಕೊಳ್ಳದ ವ್ಯಕ್ತಿ ಸಾಮಾಜಿಕ ಕಸವಾಗುತ್ತಾನೆ.'' ಹಾಗಾಗಿ ಇವತ್ತಿನ ಜ್ವಲಂತ ಆತಂಕಗಳಿಗೆ ಮುಖಾಮುಖಿಯಾಗಿರುವ ದಲಿತ, ಮಹಿಳೆ, ರೈತ, ಕಾರ್ಮಿಕ, ಭಾಷೆ ಮುಂತಾದ ಯಾವುದಾದರೂ ಒಂದು ಚಳುವಳಿಯೊಂದಿಗೆ ಕ್ರಿಯಾ ಶೀಲ ಸಂಬಂಧ ಸಾಧ್ಯವಾಗಬೇಕು. ಅಂತಹ ಸಂಬಂಧದಲ್ಲಿ ಹುಟ್ಟುವ ಸಾಹಿತ್ಯ ಮಾತ್ರ ಬಂಡಾಯ ಸಾಹಿತ್ಯವಾಗಿರುತ್ತದೆ. ಇದಕ್ಕೆ ಹೊರತಾದ ಸಾಹಿತ್ಯದಲ್ಲಿ ಪ್ರಗತಿಪರ ಮನೋಧರ್ಮವಿದ್ದಾಗಲೂ ಅದು ಬಂಡಾಯ ಸಾಹಿತ್ಯವೆನ್ನಿಸಿಕೊಳ್ಳುವುದಿಲ್ಲ, ಅದು ಕೇವಲ ಪ್ರಗತಿಪರ ಸಾಹಿತ್ಯ ಮಾತ್ರವೆನ್ನಿಸುತ್ತದೆ. ಈ ನಿಟ್ಟಿನಲ್ಲಿ ನಮ್ಮ ನಡುವಿನ ಬರಹಗಾರರು ಚಿಂತಿಸಿ ಕ್ರಿಯಾಶೀಲರಾಗಬೇಕಿರುವುದು ಇಂದಿನ ತುರ್ತಾಗಿದೆ.

ಬಂಡಾಯ ಸಾಹಿತ್ಯ ಇಂದಿಗೂ ಜೀವಂತ. ಎಲ್ಲಿಯ ತನಕ ಆತಂಕಗಳಿರುತ್ತವೆಯೋ ಅಲ್ಲಿಯ ತನಕ ಜಾಗೃತಾವಸ್ಥೆಯ ಸಾಮುದಾಯಿಕ ಮನಸ್ಸಿನ ಮೂಲಕ ಬಂಡಾಯವಿದ್ದೇ ಇರುತ್ತದೆ. ಬಂಡಾಯದ ಸಾವು ಆತಂಕಗಳ ನಿರ್ಮೂಲನದಲ್ಲಿ ಮಾತ್ರ. ಅಂತಹ ಸಾವು ಬಂಡಾಯದ ವಿಜಯ ಮತ್ತು ಆಶಯ ಕೂಡ.

ಬೆಂಗಳೂರು **ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**

## ಚಿತ್ರಕಲಾ ಅಭ್ಯಾಸ ಎಷ್ಟು ಸಮಂಜಸ!

ಸಾಮಾನ್ಯವಾಗಿ ಯಾವ ತಾಯಿ ತಂದೆಗಳೂ ತಮ್ಮ ವೃತ್ತಿಯನ್ನು ತಮ್ಮ ಮಕ್ಕಳು ಕೂಡ ಮುಂದುವರೆಸಿಕೊಂಡುಹೋಗಬೇಕೆಂದು ಅಪೇಕ್ಷಿಸುವುದಿಲ್ಲ, ರಾಜಕಾರಣಿಗಳನ್ನು ಬಿಟ್ಟು. ಕಲಾವಿದರಾಗಲಿ, ಚಾಲಕರಾಗಲಿ, ಸುಣ್ಣಬಣ್ಣ ಬಳಿಯುವವರಾಗಲಿ, ಕೂಲಿ ಮಾಡುವವರಾಗಲಿ, ತಮ್ಮ ಮಕ್ಕಳೂ ತಮ್ಮಂತೆ ಆಗಬೇಕೆಂದು ಅಪೇಕ್ಷಿಸುವುದಿಲ್ಲ. ಏಕೆಂದರೆ ಈ ಕೆಲಸಗಳಲ್ಲಿ ಪ್ರಾಪ್ತಿಗಿಂತ ಪರಿಶ್ರಮವೇ ಹೆಚ್ಚಾಗಿರುತ್ತದೆ. ಅಂತಲೇ ಇಂತಹ ಕೆಲಸಗಾರರು ತಮ್ಮ ಮಕ್ಕಳು ಆಳಾಗಿ ದುಡಿಯಬಾರದೆಂದು ಅಪೇಕ್ಷಿಸುತ್ತಾರೆ.

ಕೆಲವು ಮಕ್ಕಳಿಗೆ ತಮ್ಮದೇ ಆದ ಗುರಿ ಮತ್ತು ಸಂಕಲ್ಪ ಇರುವುದಿಲ್ಲ. ಅಂಥವರು ಬೇರೆಯವರ ಮಾತಿಗೆ ಮರುಳಾಗಿ ತಮ್ಮದೇ ಆದ ಒಂದು ನಿರ್ಣಯಕ್ಕೆ ಬರುತ್ತಾರೆ. ನಿಪುಣತೆ ಇಲ್ಲದವರು ಕಲೆ, ಲಲಿತಕಲೆ, ಎಂಬ ತರಬೇತಿಗಳ ಬೆನ್ನುಹತ್ತಿ ಕೈಸುಟ್ಟುಕೊಳ್ಳುತ್ತಾರೆ. ನೌಕರಿಯ ಅಥವಾ ಸಂಪಾದನೆಯ ಅವಕಾಶಗಳು ಇಲ್ಲದ ಫೈನ್ ಆರ್ಟ್ ಡ್ರಾಯಿಂಗ್ ಮಾಸ್ಟರ್ ಪದವಿಗಳನ್ನು ನೋಡಿದರೆ ಇವು ಯಾರಿಗೆ ಬೇಕು ಎನ್ನುವಂತಾಗಿದೆ.

ಎಷ್ಟೋ ವರ್ಷಗಳಿಗೊಮ್ಮೆ ಇಂಥ ಹುದ್ದೆಗಳಿಗಾಗಿ ಅರ್ಜಿ ಕರೆದರೂ ಗ್ರಾಮೀಣ ಅಭ್ಯರ್ಥಿಗಳಿಗೆ ಗೊತ್ತು ಕೂಡ ಆಗುವುದಿಲ್ಲ. ಉದ್ಯೋಗಾವಕಾಶಗಳಿಲ್ಲದ ಇಂಥ ಕಲಾನಿಪುಣರು ಅನಿವಾರ್ಯವಾಗಿ ಬಡಿಗತನ ಮಾಡುವುದು, ಸೈನ್ ಬೋರ್ಡ್, ಬ್ಯಾನರ್ ಬರೆಯುವುದು, ಕಟ್ಟಡಗಳಿಗೆ ಸುಣ್ಣ ಬಣ್ಣ ಹಚ್ಚುವುದು, ಲಾರಿ ಟ್ರ್ಯಾಕ್ಟರ್‌ಗಳಿಗೆ ಬಣ್ಣ ಹಚ್ಚುವುದು ಇಂತಹ ಕೆಲಸಗಳಲ್ಲಿ ತೊಡಗುತ್ತಾರೆ. ಇವರಿಗೆ ಜೀವನದಲ್ಲಿ ಜಿಗುಪ್ಸೆ ಉಂಟಾಗಿ ಹತಾಶರಾಗುವುದಂತೂ ಖಂಡಿತ.

ತಾನೊಬ್ಬ ಮಹಾನ್ ಕಲಾವಿದನಾಗಬೇಕು, ಕಲಾ ಉಪಾಸಕನಾಗಬೇಕು, ಪ್ರದರ್ಶನಗಳನ್ನು ಏರ್ಪಡಿಸಿ ಪೇಂಟಿಂಗ್‌ಗಳನ್ನು ಮಾರಾಟಮಾಡಿ ಹೇರಳವಾಗಿ ದುಡ್ಡು ಗಳಿಸಿ ಪ್ರತಿಷ್ಠಿತ ವ್ಯಕ್ತಿಯಾಗುವ ಕನಸಿನಲ್ಲೇ ಇಂಥ ವ್ಯಕ್ತಿ ತೃಪ್ತಿಪಡಬೇಕಾಗುತ್ತದೆ. ಅನಿವಾರ್ಯವಾಗಿ ವಲಸೆ ಹೋಗುವುದು, ಕೂಲಿ ಮಾಡುವುದು ಮೈಗೂಡಿಸಿ ಕೊಳ್ಳಬೇಕಾಗುತ್ತದೆ.

ವಿದ್ಯಾರ್ಥಿಯು ಸರಕಾರಿ ಸೇವೆ ಪಡೆಯಬೇಕೆಂಬ ಮಹತ್ವಾಕಾಂಕ್ಷೆಯೊಂದಿಗೆ ಫೈನ್ ಆರ್ಟ್ ಕೋರ್ಸ್‌ಗಳನ್ನು ಅಭ್ಯಾಸಮಾಡುತ್ತಾನೆ. ಆದರೆ ಯಾವ ಹುದ್ದೆಗಳಿಗೂ ಅರ್ಜಿ ಕರೆಗಳೂ ಬರುವುದಿಲ್ಲ.

ಇತ್ತೀಚಿನ ದಿನಗಳಲ್ಲಿ ಅವಕಾಶಗಳಿಂದ ವಂಚಿತವಾದ ಲಲಿತಕಲೆ, ಕಮರ್ಷಿಯಲ್ ಕಲೆಗಳನ್ನು

ಜೀವನೋಪಯೋಗಕ್ಕಾಗಿ ಅಭ್ಯಾಸ ಮಾಡುವುದೆಂದರೆ ರಾತ್ರಿಕಂಡ ಬಾವಿಯಲ್ಲಿ ಹಗಲು ಬಿದ್ದಂತೆಯೇ ಸರಿ !

ಗುಲಬರ್ಗಾ **ನಾರಾಯಣ ಎಂ. ಜೋಶಿ**

ಬೀದರ ಮತ್ತು ಗುಲಬರ್ಗಾದ ಗಡಿಭಾಗಗಳಲ್ಲಿ ಈ ನಡುವೆ ಭಾನಾಮತಿ ಹೆಸರಿನ ಬರ್ಬರಿಕ ಹತ್ಯೆಗಳು ಹೆಚ್ಚುತ್ತಿರುವುದು ಆತಂಕಕಾರಿ ಸಂಗತಿಯಾಗಿದೆ. ಗವಿ ಬ್ಯಾಳಿ ಮತ್ತು ಮುರಲೀಧರ ಬಿ. ಕುಲಕರ್ಣಿಯವರು ಇಲ್ಲಿ ಸಂಭವಿಸುತ್ತಿರುವ ಘಟನೆಗಳನ್ನು ಕುರಿತು ಸೂಕ್ತ ವರದಿ ಮಾಡಿದ್ದಾರೆ. ಈ ಲೇಖಕದ್ವಯರು ಕಲೆಹಾಕಿದ ಮಾಹಿತಿಗಳು ಸರಿಯಾಗಿಯೇ ಇವೆ. ಆದರೆ ಮಾಹಿತಿಗಳನ್ನು ಬಳಸಿಕೊಂಡು ವರದಿಮಾಡುವ ವಿಧಾನದಲ್ಲಿಯೇ ಕೆಲವು ತೊಂದರೆಗಳು ಕಾಣಿಸಿಕೊಂಡಿವೆ. ಮುರಳೀಧರ ಬಿ. ಕುಲಕರ್ಣಿಯವರು ಭಾನಾಮತಿಯನ್ನು ವರದಿ ಮಾಡುತ್ತ ''ಕಡು ಬಡತನ, ಮೌಢ್ಯದ ವಿಷವರ್ತುಲದಲ್ಲಿ ಸಿಕ್ಕು ಒದ್ದಾಡುತ್ತಿರುವ ಈ ದುರ್ದೈವಿಗಳ ಬಾಳನ್ನು ಮೂರಾಬಟ್ಟೆ ಮಾಡುತ್ತಿರುವ ವಿಚಿತ್ರ ಕಾಯಿಲೆ ಭಾನಾಮತಿ ಈಗಲೂ ವಿಚಾರವಾದಿಗಳಿಗೆ ಸವಾಲೇ ಆಗಿದೆ'' ಎಂದಿದ್ದಾರೆ. ಇಲ್ಲಿ ಭಾನಾಮತಿ ಸವಾಲು ಎಂದಿರುವುದು ಅಷ್ಟೇನೂ ಸಮಂಜಸವಲ್ಲ. ವಿಚಾರವಾದಿಗಳಿಗೆ ಭಾನಾಮತಿ ಒಂದು ತಲೆನೋವಾಗಿದೆಯೇ ಹೊರತು ಸವಾಲಾಗಿಲ್ಲ. ಏಕೆಂದರೆ ಈ ಭಾನಾಮತಿ ಎಂಬುದು ನೂರಕ್ಕೆ ನೂರು ಶುದ್ಧ ಸುಳ್ಳು. ವಾಸ್ತವಿಕವಾಗಿ ಅದೊಂದು ಕಲ್ಪಿತ ಕಾರ್ಯಾಚರಣೆ, ಅಷ್ಟೇ ಅಲ್ಲ ಅದು ಸಾಮೂಹಿಕ ಸನ್ನಿರೂಪದ ಮನೋರೋಗ. ಮುಗ್ಧರು, ಮೂಢರು, ಅಮಾಯಕರು, ಮನೋದುರ್ಬಲರು, ವಿಶೇಷವಾಗಿ ಬಡವರು ಮಾತ್ರ ಈ ಷಡ್ಯಂತ್ರಕ್ಕೆ ಬಲಿಯಾಗುತ್ತಿದ್ದಾರೆ ಎಂಬುದನ್ನು ವಿಜ್ಞಾನಿಗಳು, ವಿಚಾರವಾದಿಗಳು ಸಾಬೀತುಪಡಿಸಿದ್ದಾರೆ. ಈ ವಿಷಯವನ್ನು ಕುರಿತು ಹತ್ತಾರು ಪುಸ್ತಕಗಳು, ವರದಿಗಳು ಬಂದಿವೆ.

ಆದಾಗ್ಯೂ ಈ ಮೌಢ್ಯದಿಂದ ಜನತೆಯನ್ನು ಬಿಡುಗಡೆಗೊಳಿಸುವುದು ಸಾಧ್ಯವಾಗುತ್ತಿಲ್ಲ ಎಂಬುದೇ ಶೋಚನೀಯ ಸಂಗತಿ. ಈ ಎರಡೂ ಲೇಖನಗಳಲ್ಲಿ ವರದಿಯಾಗಿರುವ ಭಾನಾಮತಿ ಪೀಡಿತ ಹಳ್ಳಿಗಳನ್ನು ಗಮನಿಸಿರಿ. ಅವೆಲ್ಲ ಮಹಾರಾಷ್ಟ್ರ, ಆಂಧ್ರದ ಗಡಿಭಾಗದಲ್ಲಿರುವ ತೀರ ಅಲಕ್ಷಿತ ಹಳ್ಳಿಗಳು. ಆ ಹಳ್ಳಿಗಳು ಎಲ್ಲ ರೀತಿಯ ನಾಗರಿಕ ಸೌಲಭ್ಯಗಳಿಂದ ಸಂಪೂರ್ಣ ವಂಚಿತವಾಗುಳಿದಿವೆ. ಅಕ್ಷರ, ರಸ್ತೆ, ಕುಡಿಯುವ ನೀರು, ವಿದ್ಯುತ್, ದುಡಿಯುವ ಕೈಗಳಿಗೆ ಕೆಲಸ, ಹೋಗಲಿ ರೇಷನ್ ಕಾರ್ಡುಗಳು ಕೂಡಾ ಇಲ್ಲವೆಂದರೆ, ಅವರು ಮೌಢ್ಯ, ಬಡತನಗಳಿಂದ ಹೊರಬರಲು ಹೇಗೆ ಸಾಧ್ಯ ಹೇಳಿ.

ಈ ಪ್ರದೇಶಗಳನ್ನು ಆಳುತ್ತಿರುವ ಜನಪ್ರತಿನಿಧಿಗಳೇ ಇನ್ನೂ ಮೌಢ್ಯದ ಪರದೆ ಸರಿಸಿ ಈಚೆ ಬಂದಿಲ್ಲ. ತಮ್ಮ ರಾಜಕೀಯ ಸೋಲು, ಗೆಲವುಗಳಿಗೆ ಹೋಮ, ಹವನ, ಮಂತ್ರ, ತಾಯಿತ, ಮಠದ ಸ್ವಾಮಿ, ಹರಕೆ ಮುಂತಾದವುಗಳನ್ನು ಆಚರಿಸಿಕೊಂಡು ಬರುತ್ತಿದ್ದಾರೆ. ಇಂಥವರಿಗೆ ಜನತೆಯ ಮೌಢ್ಯ ನಿವಾರಿಸುವ ಕಾಳಜಿಯಾದರೂ ಏನಿದ್ದೀತು ? ಹೀಗಾಗಿ ಭಾನಾಮತಿ ಕುರಿತು ಎಷ್ಟೆಲ್ಲಾ ಸಮಿತಿಗಳು ವರದಿ ನೀಡಿದಾಗಲೂ ಅವೆಲ್ಲ ಕಡತಗಳಲ್ಲಿ ಕೊಳೆಯುತ್ತಿವೆ. ಆದರೆ ಈ ಭಾಗದ ಜನತೆಯ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮಟ್ಟ ಎತ್ತರಿಸುವ ಕೆಲಸಗಳಾಗಲಿ, ವೈಚಾರಿಕತೆ ತುಂಬುವ ಜನಾಂದೋಲನವಾಗಲಿ ಮಾಡಲು ಸಾಧ್ಯವಾಗುತ್ತಿಲ್ಲ. ಬೆರಳೆಣಿಕೆಯಷ್ಟು ವಿಚಾರವಾದಿಗಳ ಹೋರಾಟ ಬ್ರಹ್ಮಾಂಡದಷ್ಟು ಕತ್ತಲೆಗೆ ಮಿಣುಕುದೀಪ ಎಂಬಂತಾಗುತ್ತಿದೆ.

ಗುಲಬರ್ಗಾ **ಡಾ|| ಮೀನಾಕ್ಷಿ ಬಾಳಿ**

## ಹೂ ಮಾರುವಾಕೆ

(ಜನವರಿ ೨೦೦೬ರ 'ಹೊಸತು' ಸಂಚಿಕೆಯ ಸ್ಫೂರ್ತಿಯಿಂದ)

ಹೊಸತು ಮೊಗ್ಗುಗಳಿಂದ
ಕಟ್ಟಿದ ಪೊಸತು
ಹೂವಿನ ಮಾಲೆಯಿದೆಂದು
ಹೂ ಮಾರುತ ಕುಳಿತಾಕೆ.

ಪ್ರತಿ ವರ್ಷದ ದಿನ
ಪ್ರತಿ ದಿನವೆನಗೆ
ಹೊಸ ದಿನವೆಂದು
ಹೂ ಮಾರುತ ಕುಳಿತಾಕೆ.

ಹೂ ಪರಿಮಳವನು
ರಸಿಕರಿಗರ್ಪಿಸುತ
ಕೊಳ್ಳಿರಿ ಹೂವೆಂದು
ಹೂಮಾರುತ ಕುಳಿತಾಕೆ.

ದುಃಖಗಳ ಉಂಡು
ಸುಖಗಳ ಕಂಡು
ಪೈಸೆ - ರೂಪಾಯಿಯ
ಲಾಭದಲಿ ಬದುಕವಳಾಕೆ !

'ಇದ್ದಷ್ಟು ದಿನ ಬದುಕು'
'ಆಸೆಯೇ ದುಃಖದ ಮೂಲ'
ಇದುವೆ ಮಾನವನ ಬದುಕೆಂದು
ಹೂ ಮಾರುತ ಕುಳಿತಾಕೆ.

ಕೆ. ಆರ್. ಪೇಟೆ **ಮಾರೇನಹಳ್ಳಿ ಲೋಕೇಶ್**

---

೩ನೇ ಪುಟದಿಂದ... ಈ ತಿಂಗಳು

ಮತ್ತು ಸಾಹಿತ್ಯದ ಪ್ರಾಚೀನತೆ ಹಾಗೂ ಶ್ರೇಷ್ಠತೆಯ ಬಗ್ಗೆ ಅರ್ಹತಾಪತ್ರ ಕೊಡಬೇಕೆಂದು ಬಾರ್ಕ್ಲೆಯಲ್ಲಿರುವ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ತಮಿಳು ಪ್ರಾಧ್ಯಾಪಕ ಜಾರ್ಜ್ ಎಲ್. ಹಾರ್ಟ್ ಎಂಬುವವನನ್ನು ಕೇಳಿಕೊಂಡನಂತೆ. ಏಪ್ರಿಲ್ ೨೦೦೦ದಲ್ಲಿ ಈ ಮಹಾನುಭಾವರು ಎರಡು ಪುಟದ ಒಂದು ಲೇಖನ ಬರೆದು ತಮಿಳು ಭಾಷೆ-ಸಾಹಿತ್ಯದ ನಾಲ್ಕು ಪ್ರಮುಖ ಲಕ್ಷಣಗಳನ್ನು ಹೆಸರಿಸಿದನಂತೆ. (ಆ ಲೇಖನ ಲಭ್ಯವಿದೆ, ಯಾರು ಬೇಕಾದರೂ ಓದಬಹುದು. ಅದ್ಭುತವಾದ ಲೇಖನವಂತೂ ಅಲ್ಲವಾದ್ದರಿಂದ ಶ್ರಮ ವ್ಯಯಿಸಿ ಅದನ್ನು ಓದದಿದ್ದರೆ ಪ್ರಮಾದವೇನೂ ಆಗುವುದಿಲ್ಲ). ಆ ಲೇಖನದ ಆಧಾರದ ಮೇಲೆ ತಮಿಳಿಗೆ ಭಾರತದ ಘನಸರ್ಕಾರವು 'ಶಾಸ್ತ್ರೀಯ' ಎಂಬ ಪಟ್ಟವನ್ನು ನೀಡಿದೆಯೆಂದು ಪುಕಾರು.

ತಮಿಳು ಭಾಷೆ-ಸಾಹಿತ್ಯದ ಶ್ರೇಷ್ಠತೆಯನ್ನು ಅಲ್ಲಗಳೆಯುವುದು ನಮ್ಮ ಉದ್ದೇಶವಲ್ಲ. ಆದರೆ ಅದೇ ಮಾನದಂಡದಿಂದ ಅಳೆದರೆ ಕನ್ನಡವು ಅಂಥದೇ ಶ್ರೇಷ್ಠತೆಯನ್ನು ಪಡೆದಿದೆಯೆಂಬುದು ತಕರಾರಿನ ಸಂಗತಿ ಆಗಲಾರದು. ಸರ್ಕಾರವು ಹಾಗೆ ಘೋಷಿಸದಿದ್ದರೂ ಕನ್ನಡದ ಶಾಸ್ತ್ರೀಯ ಸ್ಥಾನಕ್ಕೆ ಚ್ಯುತಿ ಬರುವುದಿಲ್ಲ. ಆದರೆ ರಾಷ್ಟ್ರದ ಎಲ್ಲ ಭಾಷೆಗಳನ್ನೂ ಪೋಷಿಸುವುದು, ಎಲ್ಲದಕ್ಕೂ ಸಮಾನ ಸ್ಥಾನ ನೀಡುವುದು, ಸರ್ಕಾರದ ಕರ್ತವ್ಯ. ಅದನ್ನು ಮಾಡದ ಸರ್ಕಾರವು ಅಯೋಗ್ಯ ಸರ್ಕಾರವೆನಿಸಿಕೊಳ್ಳುತ್ತದೆ. ಅರ್ಜುನ ಸಿಂಗರ ತಲೆಯೊಳಕ್ಕೆ ಇದನ್ನು ಬಡಿದು ತೂರಿಸಲು ಕನ್ನಡದ ಸಾಹಿತಿಗಳು ಉಪವಾಸ ಮಾಡಬೇಕಾಗಿ ಬರಕೂಡದು. ಕೇಂದ್ರ ಸರ್ಕಾರವು ಸ್ವಲ್ಪ ಜವಾಬ್ದಾರಿಯಿಂದ ಕೆಲಸ ಮಾಡಬೇಕೆಂದು ಕರ್ನಾಟಕದಿಂದ ಮನಮೋಹನ ಸಿಂಗರಿಗೆ ಒಂದು ಲಕ್ಷ ಅಂಚೆ ಕಾರ್ಡುಗಳನ್ನು ರವಾನಿಸೋಣ, ಅಲ್ಲವೆ ?

## ಕೊನೆಯ (ವಿಷ) ಹನಿ : ಕರ್ನಾಟಕ ಕಣರಾಜ್ಯ

ಗಣರಾಜ್ಯ ದಿನಾಚರಣೆಯ ಸಂಭ್ರಮದಲ್ಲಿ ನಮ್ಮ ರಾಜ್ಯವು ಸಮ್-ಕ್ರಾಂತಿಯನ್ನು ಕಾಣಲು ಷಣ್ಮುಖನಾಥ ಕುಮಾರಸ್ವಾಮಿ ದಯಪಾಲಿಸಿದ್ದಾನೆ. ಆರು ಮುಖ ಎಂದರೆ ಆರು ಬಾಯಿ: ಬೇರೆ ಬೇರೆ ಮಾತುಗಳನ್ನಾಡಲು ಮತ್ತು ಸಿಕ್ಕಿದ್ದನ್ನೆಲ್ಲಾ ನುಂಗಲು. ''ಆವ ಸುಕೃತದ ಫಲವೂ ಮೇಣಾವ ತರದ ಸಮೃದ್ಧಿಯೊ'' ಎಂಬಂತೆ ವಸುದೇವನಿಗೆ ಕೃಷ್ಣಾವತಾರ; ದೇವೇಗೌಡರಿಗೆ ಕುಮಾರಾವತಾರ. ಗಣರಾಜ್ಯವು ಕಣ-ರಾಜ್ಯವಾಗುತ್ತಿದೆ. ಸಂಕ್ರಾಂತಿಯ ನಂತರ ರೈತರು ಕಣಜ ತುಂಬಿಸಿಕೊಳ್ಳುವ ಕಾಲ. ನಮ್ಮ ಗೌರವಹೀನ ಶಾಸಕರು ಜೇಬುಗಳನ್ನು ತುಂಬಿಸಿಕೊಳ್ಳಲು 'ಧರ್ಮಯುದ್ಧ' ನಡೆಸುವವರ ಜೊತೆ ಸರ್ಕಾರ ರಚಿಸಲಿದ್ದಾರೆ. ಅವರೆಲ್ಲ ಮಾರಾಟದ ವಸ್ತುಗಳೆಂಬುದನ್ನು ಗೋವಾ-ಕೋಡ್ಲೆಗಳಿಗೆ ತೆರಳಿ ಸ್ವತಃ ಸಾಬೀತು ಮಾಡಿದ್ದಾರೆ. ಅಭಿಮಾನಶೂನ್ಯ ರಾಜ್ಯ ನಮ್ಮದಾಯಿತು. 'ತೃಣಸಮಾನರಾದರು' ಎನ್ನುವಂತೆ ಇವರೆಲ್ಲಾ ಕಣಸಮಾನರಾದರು. ಕಾಲಧೂಳಿಗೂ ಕಣವೆಂಬ ಹೆಸರಿದೆ. ಅಂತೂ ಸೆಕ್ಯುಲರ್ ದೇವೇಗೌಡರು ಕರ್ನಾಟಕಕ್ಕೆ ಭಾಜಪದ ಆಡಳಿತ ತಂದುಕೊಡಲಿದ್ದಾರೆ! ಅವರನ್ನು ನಂಬಿದ್ದವರಿಗೆ ಇದು ಉಂಬಳಿ. ಕಾರ್ಪೊರೇಷನ್‌ಗಳಿಗೆ ಅಧ್ಯಕ್ಷರ ನೇಮಕಾತಿ ಆಗಿರಲಿಲ್ಲವೆಂಬುದೂ ಒಂದು ಅಪಾದನೆ. ಅಂದರೆ ನುಂಗಲು ಅವಕಾಶ ಎಂದರ್ಥ. ಭೂ-ಕಬಳಿಕೆಯ ಸರದಾರರು ಗೌಡ - ಭಾಜಪ ಎರಡೂ ಕಡೆ ಇರುವಾಗ ನಮ್ಮ ರಾಜ್ಯಕ್ಕೆ ಸುಭಿಕ್ಷೆ ಖಚಿತ ! ಭಾಜಪದ ಕ್ಯಾಂಪಿನಲ್ಲಿ ಮಂತ್ರಿಗಳಾಗಲು ಕೊರಳಪಟ್ಟಿ ಹಿಡಿದು ಕುಸ್ತಿಯೂ ನಡೆದಿದೆ. ಉಳಿದಿರುವುದು ಎಂ. ಪಿ. ಪ್ರಕಾಶ್, ಸಿಂಧ್ಯ, ಡಿ. ಮಂಜುನಾಥ್ ಮುಂತಾದವರು ಗೂಟದ ಕಾರಿಗೆ ಗಂಟು ಬೀಳುತ್ತಾರೋ ಪ್ರಜ್ಞಾವಂತಿಕೆಯಿಂದ ಹೊರಬರುತ್ತಾರೋ ಎಂಬುದು.

೨೭-೦೧-೨೦೦೬

ದಿನದ ಇಪ್ಪತ್ತನಾಲ್ಕು ಗಂಟೆಗಳು ಸಾಲದೇ ಬರುವಷ್ಟು ಕೆಲಸಗಳನ್ನು ತುಂಬಿಕೊಂಡು, ಕೂತಲ್ಲೇ ಎಲ್ಲ ಕೆಲಸಗಳನ್ನು ಮಾಡಿಸುವ ಛಾತಿ ಹೊಂದಿದ್ದ ಸಿಜಿಕೆ, ಕನ್ನಡ ರಂಗಭೂಮಿಯಲ್ಲಿ ತಂತಾನೇ ಬೆಳೆದು ನಿಂತ ತ್ರಿವಿಕ್ರಮ. ಯುವಕರ ರಂಗ ನೋಟಗಳಿಗೆ ಹೊಸ ರಂಗಚಿಂತನೆಯ ಪಾಠವನ್ನು ಕಲಿಸುತ್ತಲೇ ಬಂದ ಪ್ರೀತಿಯ ಅಧ್ಯಾಪಕ. ಅರ್ಥಶಾಸ್ತ್ರದ ಪ್ರಾಧ್ಯಾಪಕನಾಗಿ ವೃತ್ತಿಯಲ್ಲಿದ್ದು, ರಂಗ ಬೆಳಕು ವಿನ್ಯಾಸಕಾರನಾಗಿ ಪ್ರವೃತ್ತಿಯನ್ನು ಶುರುಮಾಡಿ, ರಂಗ ನಿರ್ದೇಶಕನಾಗಿ ಬೆಳೆದು, ಸಾಂಸ್ಕೃತಿಕ ಚಿಂತನೆಗಳ ಸಲಹೆಗಾರನಾಗಿ ಪ್ರಭಾವ ಬೀರಿ, ಬೆಂಗಳೂರು ವಿಶ್ವವಿದ್ಯಾಲಯದ ಗಾಂಧಿ ಅಧ್ಯಯನ ಕೇಂದ್ರದ ಅತ್ಯಂತ ಯಶಸ್ವೀ ನಿರ್ದೇಶಕನಾಗಿ ಹೆಸರುಗಳಿಸಿ, ಇಂದಿನ ಯುವಜನತೆಗೆ ಭಿನ್ನಕ್ರಮದ ಆಲೋಚನೆ ಹಾಗೂ ನಿರ್ವಹಣೆ ಎಂಬ ಶಿಸ್ತಿನ ಶಾಸ್ತ್ರವನ್ನು ಕಲಿಸಿ, ಶತ್ರುಗಳು ಹಾಗೂ ಸ್ನೇಹಿತರು ಇಬ್ಬರಲ್ಲೂ ಸಿಜಿಕೆ ಇನ್ನೂ ಬದುಕಿರಬೇಕಿತ್ತು ಎಂಬ ಭಾವನೆಯನ್ನು ಮೂಡಿಸಿ ಏಕಾಏಕಿ ಕಣ್ಮರೆಯಾದರು. ಸಮುದಾಯ ಸಂಘಟನೆ ಹಾಗೂ ಬಂಡಾಯ ಸಂಘಟನೆಗಳ ಸಂಸ್ಥಾಪಕ ಕಾರ್ಯದರ್ಶಿಯಾಗಿದ್ದವರು. ರಂಗನಿರಂತರ ನಾಟಕ ತಂಡವನ್ನು ಕಟ್ಟಿ ಭಾರತೀಯ ರಂಗಭೂಮಿಗೆ ಹೊಸ ಅಭ್ಯಾಸಗಳನ್ನು ಕೊಟ್ಟವರು. (ರಂಗನಿರಂತರ ಪ್ರದರ್ಶಿಸಿದ ೧೫೦ ದಿನಗಳ ನಿರಂತರ ನಾಟಕ ಪ್ರದರ್ಶನ ಇದರ ಒಂದು ಉದಾಹರಣೆಯಷ್ಟೇ). ಕರ್ನಾಟಕ ನಾಟಕ


ವಿದಾಯ ಸಿಜಿಕೆ!

# ಪಟ್ಟು ಬಿಡದ ಸಿಜಿಕೆ

ಅಕಾಡೆಮಿಯ ನಿರ್ದೇಶಕನಾಗಿ, ರಾಜ್ಯಾದ್ಯಂತ ಅನೇಕ ರಂಗತರಬೇತಿ ಶಿಬಿರಗಳ ನೇತೃತ್ವ ವಹಿಸಿ, ಸಾಮಾನ್ಯ ರಂಗಕರ್ಮಿಯಂತೆ ದುಡಿದರು. ಬೆಲ್ಚಿ, ಭಸನಾಲ, ಸೈಕ್ಲೋನ್, ಭಾರತ ದರ್ಶನ, ಪಂಚಮ, ಕಳ್ಳಿಯಲ್ಲಿ ಕೆಂಪು ಹೂವು, ಮೇ ಡೆ, ಅಬೋಲಿನ, ನಾಟಕಗಳನ್ನು ಮೊದಲುಗೊಂಡು, ಒಡಲಾಳ, ಮಹಾಚೈತ್ರ, ರುಡಾಲಿ, ನಾಟಕಗಳೊಂದಿಗೆ ರಂಗಜಗತ್ತನ್ನು ವ್ಯಾಪಿಸಿಕೊಂಡಿದ್ದವರು ಇವರು. ಹಿರಿಯರಾದ ಇವರೊಂದಿಗಿನ ನನ್ನ ಸ್ನೇಹ ಅಥವಾ ಶಿಷ್ಯತ್ವದಲ್ಲಿನ ಅವರ ಪ್ರಭಾವ ನನ್ನ ಮೇಲಾದದ್ದನ್ನು ನೆನಪಿಸಿಕೊಳ್ಳುವ ಪ್ರಯತ್ನ ಇಲ್ಲಿದೆ.

೧೯೮೦ರಲ್ಲಿ ಸಮುದಾಯದ ಜಾಥಾದಲ್ಲಿ 'ಬೆಲ್ಚಿ' ಗೌರಿಬಿದನೂರಿಗೆ ಬಂದಾಗ (ಸಿಜಿಕೆ ಬಂದಿರಲಿಲ್ಲ) ನನ್ನ ಕಿವಿ ಮತ್ತು ಕಣ್ಣರಳುವಷ್ಟಕ್ಕೆ ಮಾತ್ರ ಸಿಜಿಕೆ ಪರಿಚಯ ಸೀಮಿತವಾಗಿತ್ತು. ನಂತರ ಬೆಂಗಳೂರಿನಲ್ಲಿ ಸಮುದಾಯದ ನಾಟಕ ನೋಡಲು ಬಂದಾಗಲೆಲ್ಲ ಬೆಳಕು ವಿನ್ಯಾಸಕ ಸಿಜಿಕೆ ಎಂದು ತಿಳಿದಿದ್ದೆ. ಆಗಲೂ ಸಹ ನಾನು ಅವರನ್ನು ಭೇಟಿಯಾಗಿರಲಿಲ್ಲ. ಆಗಂತೂ ರಂಗಭೂಮಿಯನ್ನು ಆನಂದಿಸುವ ಸಾಮಾನ್ಯ ಪ್ರೇಕ್ಷಕ ವರ್ಗಕ್ಕೆ ಬೆಂಗಳೂರಿನ ರಂಗಭೂಮಿಯ ಜನರು ಒಂದು ರೀತಿಯ ಸ್ಟಾರ್‌ಗಳಿದ್ದಂತೆ. ನನಗೆ ಇವರನ್ನೆಲ್ಲ ಮಾತನಾಡಿಸಲು ಒಂದು ಬಗೆಯ ಅಂಜಿಕೆ ಸಹ ಇತ್ತು. ಸಿಜಿಕೆ ನನಗೆ ನೇರ ಪರಿಚಯವಾದದ್ದು, ಅವರು ಒಡಲಾಳ ನಾಟಕದ ರೂಪಾಂತರವನ್ನು ಬೇರೆಯವರ ಕೈಲಿ ಬರೆಸುತ್ತಿದ್ದದ್ದು ಕಂಡಾಗ. ಒಂಥರಾ ಧೋರಣೆಯ ಧಾಟಿ ನನಗೆ ದಿಗಿಲು ಬಡಿಸಿತ್ತು. ನನಗೆ ಅವರ ಪರಿಚಯವಾಗಿದ್ದಾಗ್ಯೂ ಸಹ ನಾನು ಅವರನ್ನು ಪದೇ ಪದೇ ಭೇಟಿ ಆಗದ ಕಾರಣ ಅವರಿಗೆ ನನ್ನ ಪರಿಚಯದ ನೆನಪು ಇರುತ್ತಿರಲಿಲ್ಲ. ಪ್ರತಿಬಾರಿ ಅವರನ್ನು ಭೇಟಿಯಾದಾಗಲೆಲ್ಲ ನಾನು ನನ್ನ ಹೆಸರು, ಕೆಲಸ ಇತ್ಯಾದಿ ಪೂರ್ವೋತ್ತರಗಳನ್ನೆಲ್ಲ ಹೇಳಿಕೊಳ್ಳಬೇಕಾಗಿತ್ತು. ಮತ್ತೆ ಮತ್ತೆ ಹಾಗೆ ಹೇಳಿಕೊಳ್ಳಲು ನನಗೇ ಕಸಿವಿಸಿಯಾಗಿ ಎಷ್ಟೋಬಾರಿ ನಾನು ಅವರನ್ನು ಮಾತನಾಡಿಸುವುದರಿಂದ ತಪ್ಪಿಸಿಕೊಂಡಿರುತ್ತಿದ್ದೆ. ೧೯೯೫ರಲ್ಲಿ ಬೆಂಗಳೂರಿಗೆ ವರ್ಗವಾಗಿ ಬಂದಮೇಲೆ ಬೆಂಗಳೂರು ಸಮುದಾಯದ ಸಂಪರ್ಕ ಪಡೆದುಕೊಂಡೆ. ಈ ಸಂದರ್ಭದಲ್ಲಿ ಮತ್ತೊಮ್ಮೆ ಹಿಂದಿನಂತೇ ಪೂರ್ವೋತ್ತರಗಳನ್ನು ಹೇಳಿಕೊಂಡೇ ಸಿಜಿಕೆಯನ್ನು ಭೇಟಿಯಾಗಿದ್ದೆ. ಒಂದು ವರ್ಷದ ನಂತರ ಸಮುದಾಯದ ಗೆಳೆಯರೊಂದಿಗೆ ಓಡಾಟದಲ್ಲಿದ್ದಾಗ ಸಿಜಿಕೆ ನನ್ನ ಗುರುತು ಇಟ್ಟುಕೊಂಡಿರುವುದು ತಿಳಿಯಿತು. ಆದರೂ ಅವರ ಬೈಗುಳದ ಎದುರು ನಿಲ್ಲುವುದು ನನಗೆ ಒಗ್ಗುತ್ತಿರಲಿಲ್ಲ. ಒಮ್ಮೆ ರಂಗನಿರಂತರ ತಂಡದ ರಿಹರ್ಸಲ್ ನೋಡಲೆಂದು ಷೆಡ್‌ನ ಒಳಹೋಗಿ ಬಾಗಿಲು ಹಾಕದಿದ್ದ ಕಾರಣಕ್ಕೆ ವಾಚಾಮಗೋಚರ ಬೈಸಿಕೊಂಡಿದ್ದೆ. ಸಭ್ಯರ ಶಬ್ದಕೋಶದಲ್ಲಿ ಅಸಭ್ಯ ಎಂದು ಹೇಳಲಾಗುವ ಸಕಲ ರೂಪಗಳೂ ಸಿಜಿಕೆ ನಾಲಗೆಯ ನಾಡಿಯಲ್ಲಿ ನೆಲೆಸಿತ್ತು. ಪ್ರೊ. ಕ. ನಂ. ನಾಗರಾಜುರವರು 'ಬೈಗುಳ ಸಿದ್ದಪ್ಪ' ಎಂಬ ಕಥೆ ಬರೆದಿದ್ದಾರೆ. ಅವರ ಕಥೆಯ ಸಿದ್ದಪ್ಪನ ನಾಲಗೆಯಷ್ಟೇ ಹರಿತವಾದ, ಹಾಗೂ ಇತರರಿಗೆ ದಿಕ್ಕೂಚಿಯಾಗಬಹುದಾದ ಬೈಗುಳಗಳು ಸಿಜಿಕೆಯವು ಎಂದು ನನಗೆ ತಿಳಿಯಲು ಸಮುದಾಯ ಮಹಾಶ್ವೇತಾದೇವಿಯವರ ಕಾದಂಬರಿಯಾಧಾರಿತ 'ರುಡಾಲಿ' ನಾಟಕವನ್ನು ಸಿಜಿಕೆ ನಿರ್ದೇಶನದಲ್ಲಿ ಮಾಡಿಸಲು ಸಿದ್ಧತೆ ನಡೆಸಿದಾಗಲೇ. ನಾನು ಬೆಂಗಳೂರು ಸಮುದಾಯದೊಂದಿಗೆ ಗುರುತಿಸಿಕೊಂಡು ಕೇವಲ ಒಂದು ವರ್ಷವಾಗಿದ್ದಿರಬಹುದು, ನನಗೆ ಸಂಘಟನೆಯ ಕೆಲಸದ ರೀತಿ, ವೇಗ, ಹರವುಗಳು ತಿಳಿಯದ ಸಂದರ್ಭ. ಆಗಲೇ ಅನಿವಾರ್ಯವಾಗಿ ಬಗೆಬಗೆಯಾಗಿ ಬೈಗುಳಕ್ಕೆ ಆಹುತಿಯಾಗುತ್ತಿದ್ದೆ. ನನ್ನ ಹೊರರಚನೆಯಲ್ಲಿನ ಕಾಲೇಜು ಅಧ್ಯಾಪಕ ಹಾಗೂ ಒಳರಚನೆಯಲ್ಲಿನ ರಂಗಕರ್ಮಿ, ಇವುಗಳು ಪರಸ್ಪರ ಗಲಿಬಿಲಿಗೊಳ್ಳುವಂತೆ ಬೈಯುತ್ತಿದ್ದರು. ಇತ್ತೀಚೆಗೆ ಕೆಲವು ವರ್ಷಗಳಿಂದ ಆಗಾಗ್ಗೆ ಬೆಳಿಗ್ಗೆ ಏಳುಗಂಟೆಗೆ ನಾನು ಸಿಜಿಕೆಗೆ ಫೋನ್ ಮಾಡಿ, ಸಾರ್ ನಿಮ್ಮ ಕೈಲಿ ಬೈಸಿಕೊಂಡು ತುಂಬಾ ದಿನ ಆಯ್ತು ಅದಕ್ಕೇ ಫೋನ್ ಮಾಡ್ದೆ ಅಂತ ಹೇಳುತ್ತಿದ್ದೆ. ಅದಕ್ಕೆ ಪ್ರತಿಯಾಗಿ ಅವರು 'ಮುಚ್ಕೊಂಡು ಏನು ಅಂತ ಹೇಳಲೇ, ಚಿಲ್ರೆ ಉಪ್ಪಿನಕಾಯೆಲ್ಲ ಬೇಡ' ಅಂತ ಶುರುಮಾಡಿ ತಮ್ಮ ಎಂದಿನ ಭಾಷೆಯಲ್ಲಿ ಸಂಭಾಷಿಸುತ್ತಿದ್ದರು. ಕೆಲವೊಮ್ಮೆ ಅವರೇ ಬೆಳಿಗ್ಗೆ ಫೋನ್ ಮಾಡಿ 'ವೇಣು, ಒಂದು ಜೋಕ್ ಹೇಳೋ' ಅಂತಾನೋ, 'ದೇವರು ಚೆನ್ನಾಗಿದ್ದಾರಾ? ನಿಮ್ಮ ದೇವರ (ಡಾ|| ಎಚ್. ಎನ್. ರವರನ್ನು ಅವರು ವ್ಯಂಗ್ಯಮಿಶ್ರಿತ ಗೌರವದಲ್ಲಿ 'ದೇವರು' ಎಂದೇ ಕರೆಯುತ್ತಿದ್ದರು) 'ಹೊಸ ಜೋಕ್ ಏನು?' ಅಂತಲೊ ಹೇಳಲು ತೊಡಗಿ ತಾವೇ ಒಂದು ಜೋಕ್ ಹೇಳಿ 'ಸುಮ್ಮನೆ ಫೋನ್ ಮಾಡ್ದೆ ಕಣೋ' ಎಂದು ಇಟ್ಟುಬಿಡುತ್ತಿದ್ದರು.

ಸಮುದಾಯದ ರುಡಾಲಿ, ದಂಡೆ ನಾಟಕಗಳ ನಿರ್ಮಾಣದ ಸಂದರ್ಭದಲ್ಲಿ ಸಂಘಟಿಸಿದ ವಿಚಾರ ಸಂಕಿರಣ, ಪ್ರಚಾರ ವೈಖರಿ, ನಾಟಕದ ತಾಲೀಮು, ನೇಪಥ್ಯದ ಕೆಲಸ, ಮುಂತಾದವುಗಳಲ್ಲಿ ಸಿಜಿಕೆ ತೋರಿದ ಸೂಕ್ಷ್ಮ ಗ್ರಹಿಕೆ, ಸಂಯಮ ಹಾಗೂ ಚಿಂತನೆಯ ದಾರಿ ನನ್ನ ಎಚ್ಚರ ಮತ್ತು ತಿಳಿವನ್ನು ಇಮ್ಮಡಿಸಿತು. ಚಿಕ್ಕ ಕೆಲಸ ಒಂದನ್ನು ದೊಡ್ಡ ಉತ್ಸವದಂತೆ ಮಾಡುವ ಪರಿ, ಅದನ್ನು ನಿಭಾಯಿಸಬೇಕಾಗುವಲ್ಲಿನ ವಿಸ್ತಾರ ಚಿಂತನೆ, ಸಾಮಾಜಿಕ ಸಂಬಂಧ, ಇವುಗಳನ್ನು ನಾನು ಮೊದಲಿಗೆ ತಿಳಿದುಕೊಂಡದ್ದೇ ಆಗ. ಅವರ ತಾಳ್ಮೆ, ಯೋಜನೆಯ ವೈವಿಧ್ಯ ಮತ್ತು ವಿಸ್ತಾರ ನನ್ನನ್ನು ಬೆರಗುಗೊಳಿಸಿದವು. ಜನಪರ ಸಂಘಟನೆ, ಕೋಮುವಾದ, ದಲಿತ ಅಥವಾ ಬಂಡಾಯಗಳ ಬಗೆಗೆ ಬೇರೆ ಬೇರೆ ಕಾಲ ಮತ್ತು ಸಂದರ್ಭಗಳ ಅವರ ಚಿಂತನೆಗಳು, ಉಪಾಯಗಳು, ಕೆಲಸದ ಮಾದರಿಗಳು, ಅಪಾರವಾಗಿ ಹೊಗಳಿಕೆ ಮತ್ತು ಟೀಕೆಗಳಿಗೆ ಆಹಾರವಾಗಿ ಆಯಾ ಸಂದರ್ಭಗಳಲ್ಲಿ ರಂಗಕರ್ಮಿಗಳ ಒಗ್ಗಟ್ಟಿನಲ್ಲಿ ಚಿಕ್ಕ ಪುಟ್ಟ ಉತ್ಪಾತಗಳನ್ನು ಎಬ್ಬಿಸಿದ್ದರೂ ಅವರ ಇಂತಹ ಭಿನ್ನಕ್ರಮದ ಚಿಂತನೆಯಲ್ಲಿ ಹೊಸದನ್ನು ಕಟ್ಟುವ ಮೊದಲು ಹಳೆಯದ್ದನ್ನು ಕೆಡವುವ ಸಾಂಸ್ಕೃತಿಕ ಕಿಡಿಗೇಡಿತನ ಇದ್ದಿತೆಂಬುದೇ ನನ್ನ ಅಭಿಪ್ರಾಯವಾಗಿದೆ.

ಮೇಲ್ನೋಟಕ್ಕೆ ಸಿಜಿಕೆಯೊಡನೆಯ ಸಂಬಂಧ ಪಕ್ಕಾ ವ್ಯವಹಾರಸ್ಥನೊಡನೆಯ ಸಂಬಂಧದಂತೆ ಕಂಡುಬಂದರೂ, ಅವರಲ್ಲಿ ಹೆಚ್ಚು ಭಾವುಕವಾಗುವ ಮನಸ್ಸು ಇತ್ತು. ಕೆಲವು ಆಪ್ತ ಭೇಟಿಗಳಲ್ಲೂ ಸಹ ಅದೇ ತಮ್ಮ ನಾಲಗೆಯ ನಾಡಿಯ ಶಬ್ದಗಳೊಂದಿಗೇ ಭಾವುಕವಾಗಿ ಮಾತನಾಡುತ್ತಿದ್ದರು. ಕೋಮುವಾದ, ದಲಿತ, ಬಂಡಾಯ, ಭಯೋತ್ಪಾದನೆ ಮುಂತಾದ ವಿಷಯಗಳು ಚರ್ಚೆಗೆ ಬಂದಾಗ ವಿಚಿತ್ರ ಎನಿಸುವ

**ಎಚ್. ವಿ. ವೇಣುಗೋಪಾಲ್**

ಮುಂದಿನ ಪುಟಕ್ಕೆ...

# ಕರ್ನಾಟಕದ ಪ್ರಸಕ್ತ ರಾಜಕೀಯ : ಒಂದು ಟಿಪ್ಪಣಿ

**ಕಾಂ**ಗ್ರೆಸ್-ಜನತಾದಳ ಸಮ್ಮಿಶ್ರ ಸರ್ಕಾರ ಕಳೆದ ಇಪ್ಪತ್ತು ತಿಂಗಳಿಂದಲೂ ಹೊಂದಾಣಿಕೆಯಿಲ್ಲದೆ ಬೆರಕೆಯಾಗಿಯೇ ಉಳಿಯಿತಲ್ಲದೆ, ಸಂಯುಕ್ತರಂಗವಾಗಲೇ ಇಲ್ಲ. ಹಾಗಾಗುವುದು ಅವರ ಉದ್ದೇಶವಾಗಿತ್ತು ಎನ್ನಲಾಗದು. ಇಂದಲ್ಲ ನಾಳೆ ಹೀಗೆ ಆಗಲೇ ಬೇಕಿತ್ತು. ಕೇವಲ ಕೋಮುವಾದಿಗಳನ್ನು ವಿರೋಧಿಸಿರುವ ಆಧಾರದ ಮೇಲೆ ಮೈತ್ರಿಯನ್ನು ಬೆಸೆಯುವುದು ಸಿದ್ಧಾಂತವಾಗಲಾರದು. ಜನತಾದಳದೊಳಗೇ ಸಾಕಷ್ಟು ಶಾಸಕರು ಭಾಜಪದೊಡನೆ ಕೈಜೋಡಿಸಲು ಪ್ರಯತ್ನಪಡುತ್ತಿದ್ದಷ್ಟು, ಭಾಜಪ ದಳದೊಡನೆ ಸರ್ಕಾರ ನಡೆಸಲು ಮಾಡಿದ ಪ್ರಯತ್ನ, ಅಷ್ಟೇಕೆ, ಆ ಎರಡೂ ಪಕ್ಷಗಳಲ್ಲಿ ಇದೇ ಕಾರಣ ಒಡಕುಮೂಡಿಸಿ ಅವರನ್ನೆಲ್ಲ ಕಾಂಗ್ರೆಸ್‌ಗೇ ಸೇರಿಸಿಕೊಳ್ಳುವ ಪ್ರಯತ್ನ – ಇವೆಲ್ಲಾ ತೆರೆಮರೆಯಲ್ಲಿ ನಡೆದದ್ದೇ. ಈ ಎಲ್ಲ ಪ್ರಯತ್ನಗಳೂ ಜನಾದೇಶವನ್ನು ತಿರುಚುವ ಪ್ರಜಾತಂತ್ರ ವಿರೋಧಿಕ್ರಮಗಳೇ. ಈ ಜಂಜಾಟದಲ್ಲಿ ಜಾತ್ಯತೀತ ಜನತಾದಳ ಕಾಂಗ್ರೆಸ್ ಪಕ್ಷದೊಡನೆ ಮಾತ್ರ ಹೊಂದಾಣಿಕೆ ಮಾಡಿಕೊಳ್ಳಬೇಕೆಂಬ ಕಡ್ಡಾಯವೇನಿಲ್ಲ. ಆದರೆ, ಭಾಜಪದೊಡನೆ ಕೈಜೋಡಿಸಿ ಸರ್ಕಾರ ರಚಿಸುವುದಕ್ಕೆ ಆ ಪಕ್ಷಕ್ಕೆ ಜನಾದೇಶವಿಲ್ಲ ಎಂಬುದನ್ನು ಅದರ ನಾಯಕರು ನೆನಪಿನಲ್ಲಿಡಬೇಕು. ಈ ಟಿಪ್ಪಣಿ ಓದುಗರ ಕೈಸೇರುವ ವೇಳೆಗೆ ಏನೆಲ್ಲಾ ಬದಲಾವಣೆಗಳಾಗಬಹುದೆಂದು ಊಹಿಸುವುದು ವ್ಯರ್ಥ. ಅದು ಏನೇ ಆದರೂ ವ್ಯಕ್ತಿಗತ, ತತ್ವಹೀನ ಭ್ರಷ್ಟ ರಾಜಕೀಯದ ಈ ಚಿತ್ರ ಬದಲಾಗುವುದಿಲ್ಲ.

ಈಗಷ್ಟೆ ಮುಗಿದ ಪಂಚಾಯಿತಿ ಚುನಾವಣೆಗಳಲ್ಲಿ ವ್ಯಕ್ತವಾದ ಜನಮತದಂತೆ ಕಾಂಗ್ರೆಸ್ ಪಕ್ಷ ಬಹುಮತ ಗಳಿಸಿರುವಂತೆ ಕಂಡುಬಂದರೂ, ಸಮ್ಮಿಶ್ರ ಸರ್ಕಾರವನ್ನು ತಕ್ಷಣವೇ ದುರ್ಬಲಗೊಳಿಸಿ, ಸಾರ್ವತ್ರಿಕ ಚುನಾವಣೆಗೆ ಮುಂದಾಗಬೇಕೆಂದು ಕಾಂಗ್ರೆಸ್ ಅದನ್ನು ಅರ್ಥೈಸಿಕೊಂಡಂತಿದೆ. ಜನತಾದಳವನ್ನು ಒಡೆಯುವ ಸಂಚು ಮಾಡುತ್ತಿದ್ದ ಕಾಂಗ್ರೆಸ್ ನಾಯಕರುಗಳ ಮೇಲೆ ಯಾವುದೇ ನಿರ್ಬಂಧ ಹೇರದೆ, ಜನತಾದಳದೊಡನೆಯ ಮೈತ್ರಿಯನ್ನು ಕೇವಲ ಗೌಡರೊಡನೆ ಮೈತ್ರಿ ಎಂಬಂತೆ ನಡೆಸಿಕೊಂಡ ಧರಂ ಸಿಂಗರ ರಾಜಕೀಯ ಪ್ರಜ್ಞೆ ತಿಳಿಗೇಡಿತನದ್ದು. ಅದೇ ರೀತಿ ಒಬ್ಬ ದುರ್ಬಲ ನಾಯಕನನ್ನು ಮುಖ್ಯಮಂತ್ರಿಯಾಗಿಸಿ, ವಾಸ್ತವದಲ್ಲಿ ಅಧಿಕಾರ ನಡೆಸುವ ಮುಖ್ಯಮಂತ್ರಿಯಂತೆ ಮೆರೆದಾಡಿದ ಗೌಡರು ಇಂದು ತಮ್ಮ ವ್ಯಕ್ತಿತ್ವವನ್ನೇ ಕಳೆದುಕೊಂಡಂತಾಗಿದೆ. (ಅವರದೆಂದು ಒಂದು ಆದರಣೀಯ ವ್ಯಕ್ತಿತ್ವವಿದ್ದರೆ!) ಅಧಿಕಾರಕ್ಕಾಗಿ ಅವರ ಮಗ ಭಾಜಪದೊಡನೆಯೂ ಕೈಜೋಡಿಸಲು ತಯಾರಾದುದಕ್ಕೆ ಗೌಡರ ಪರೋಕ್ಷ ಬೆಂಬಲವಿರಬಹುದೆಂಬ ಊಹಾಪೋಹ ಅಷ್ಟು ಸಮರ್ಪಕ ವಾದುದಲ್ಲ. ಆದರೆ ಅನಿರ್ಬಂಧಿತವಾದ ಗೌಡಿಕೆ ನಡೆಸಬೇಕೆಂಬ ಅವರ ಪಾಳೆಯಗಾರೀ ಮನೋಧರ್ಮವೇ ಅವರನ್ನು ಇಂದು ಈ ವೈಯಕ್ತಿಕ ಬಿಕ್ಕಟ್ಟಿಗೆ ದೂಡಿದೆ. ಕರ್ನಾಟಕದ ಈ ಮೂರೂ ಪಕ್ಷಗಳೂ ಆಂತರಿಕವಾಗಿ ಪಕ್ಷದೊಳಗೆ ಒಮ್ಮನಸ್ಸು ಸಾಧಿಸಲಾಗದೆ, ಬಿಡಿ ಬಿಡಿ ವ್ಯಕ್ತಿಗಳ ಗುಂಪುಗಾರಿಕೆಯಾಗಿ ಪರಿಣಮಿಸಿವೆ. ಇದರಿಂದಾಗಿ ಎಸ್. ಎಂ. ಕೃಷ್ಣ ಕೂಡ ಗೌಡರಂತೆಯೇ, ವ್ಯಕ್ತಿಗಳನ್ನು ವ್ಯಕ್ತಿಗಳ ವಿರುದ್ಧ ಎತ್ತಿಕಟ್ಟುತ್ತ, ಕೆಲಕಾಲ ಆಡಳಿತ ನಡೆಸಿದರೂ, ಪೂರ್ಣಾವಧಿಯ ಸರ್ಕಾರ ಕೊಡಲಾಗಲಿಲ್ಲ, ದೂರದ ಮುಂಬೈಯಲ್ಲಿ ರಾಜ್ಯಪಾಲರಾಗಿದ್ದುಕೊಂಡು, ಸೂತ್ರವಾಡಿಸುತ್ತಿದ್ದ ಅವರ ಪಾತ್ರವೂ ಇಂದಿನ ರಾಜಕೀಯ ಬಿಕ್ಕಟ್ಟಿಗೆ ಕಾರಣ. ಹೀಗಾಗಿ, ರಾಜ್ಯದಲ್ಲಿ ಪೂರ್ಣಾವಧಿಯ ಸ್ಥಿರ ಸರ್ಕಾರ ಅಸ್ತಿತ್ವಕ್ಕೆ ಬರಲಾಗದೆ, ಅಭಿವೃದ್ಧಿಕಾರ್ಯಗಳು ಹಿಂದೆಬಿದ್ದು ಕರ್ನಾಟಕವು ರಾಷ್ಟ್ರದಲ್ಲಿ ಆರ್ಥಿಕವಾಗಿ, ರಾಜಕೀಯವಾಗಿ ತನ್ನ ಸ್ಥಾನ ಕಳೆದುಕೊಳ್ಳುವಂತಾಗಿದೆ.

ಭಾಜಪ ಮತ್ತು ಕುಮಾರಸ್ವಾಮಿಯವರ ತುಕಡಿಯ ಸಮ್ಮಿಶ್ರ ಸರ್ಕಾರ ಒಂದು ವೇಳೆ ಅಧಿಕಾರಕ್ಕೆ ಬಂದರೂ, ಅದು ಬಹಳಕಾಲ ಆಡಳಿತ ನಡೆಸುವುದು ಸಾಧ್ಯವಿಲ್ಲ. ರಾಜಕೀಯ ವ್ಯವಸ್ಥೆಯಲ್ಲಿ ಉಂಟಾಗಿರುವ ಬಿರುಕುಗಳು, ಅಸ್ಥಿರತೆ, ಅವರ ಸರ್ಕಾರವನ್ನೂ ಅತಿಶೀಘ್ರವೇ ಬಲಿತೆಗೆದುಕೊಂಡರೆ ಆಶ್ಚರ್ಯವಿಲ್ಲ. ಹೀಗಿದ್ದೂ, ಪ್ರಸಕ್ತ ಪರಿಸ್ಥಿತಿಯಲ್ಲಿ ವಿಧಾನಸಭೆಯನ್ನು ವಿಸರ್ಜಿಸಿ ಮತ್ತೊಂದು ಚುನಾವಣೆಗೆ ಮುಂದುವರಿಯುವುದೇ ಸರಿಯಾದ ತೀರ್ಮಾನವಾದೀತು. ಶಾಸಕರು ಮತ್ತೊಂದು ಚುನಾವಣೆಗೆ ಸಿದ್ಧವಿಲ್ಲ ಎಂದು ಹೇಳಿದ ಮಾತ್ರಕ್ಕೆ, ಮತ್ತೊಂದು ಚುನಾವಣೆಯನ್ನು ನಡೆಸುವಂತಿಲ್ಲ ಎಂದು ಹೇಳಲು ಅವರಿಗೆ ಅಧಿಕಾರವಿಲ್ಲ. ಹಾಗೂ ಚುನಾವಣೆ ವೆಚ್ಚದ ನೆಪ ಹೂಡಿ, ಚುನಾವಣೆಯನ್ನು ಅಗತ್ಯವಿದ್ದರೂ ಮುಂದೂಡುವುದು ಪ್ರಜಾ ಪ್ರಭುತ್ವವಿರೋಧಿ ಕ್ರಮವಾಗುತ್ತದೆ. ಉತ್ತಮ ಪ್ರಜಾಪ್ರತಿನಿಧಿಗಳನ್ನು ಚುನಾಯಿಸಲು ಮಾಡುವ ಖರ್ಚು ನ್ಯಾಯಯುತವಾದುದು. ರಾಜ್ಯಪಾಲರು ತಮ್ಮ ವಿವೇಚನೆ ಮತ್ತು ಸ್ವಾತಂತ್ರ್ಯವನ್ನು ಬಳಸಿಕೊಂಡು ಇಂಥ ತೀರ್ಮಾನ ತೆಗೆದುಕೊಳ್ಳುವುದು ಸಮರ್ಥನೀಯ. ಅತಿದೊಡ್ಡ ಶಾಸಕಾಂಗ ಪಕ್ಷವಾದ ಭಾಜಪ ತಾನೇ ಮುಖ್ಯಮಂತ್ರಿ ಸ್ಥಾನವನ್ನೂ ಉಳಿಸಿಕೊಳ್ಳದೆ, ದಳದ ಒಂದು ತುಂಡಿಗೆ ಗದ್ದಿಗೆ ಬಿಟ್ಟುಕೊಡುವುದು ಕಪಟಸೂತ್ರ. ತಕ್ಕ ಸಮಯದಲ್ಲಿ ತಮ್ಮ ಸಮರ್ಥನೆಯನ್ನು ಹಿಂದೆಗೆದುಕೊಂಡು, ತಮಗೆ ಅನುಕೂಲವೆಂದಾಗ ಚುನಾವಣೆಗೆ ಅವರು ಮುಂದಾಗಬಹುದು. ಭಾಜಪ ತಾನು ನಾಯಕತ್ವ ವಹಿಸದೇ, ಸರ್ಕಾರದ ರಚನೆಗೆ ಒತ್ತಾಯಿಸುತ್ತಿರುವುದನ್ನು ರಾಜ್ಯಪಾಲರು ಗಮನಿಸಿ, ಅಂಥ ಸರ್ಕಾರ ಅಸ್ಥಿರವಾಗಬಹುದೆಂದು ಶಂಕಿಸಿ, ವಿಧಾನಸಭೆ ವಿಸರ್ಜನೆಗೆ ಮುಂದಾಗುವುದು ಸರಿಯಾದ ಕ್ರಮವಾದೀತು.

ಭಾಜಪ ಕೇಂದ್ರದಲ್ಲೂ ಅಧಿಕಾರಕ್ಕೆ ಬಂದಿದ್ದುದು ಕೋಮುವಾದ ವಿರೋಧ ಗಳೆಂದುಕೊಂಡವರ ನಡುವಿನ ಅನೈಕಮತ್ಯ ಸೃಷ್ಟಿಸುವ ಅವಕಾಶಗಳನ್ನು ಉಪಯೋಗಿಸಿ ಕೊಂಡು. ಇದುವರೆಗೂ ಅವರಿಗೆ ರಾಷ್ಟ್ರಮಟ್ಟದಲ್ಲಿ ಬಹುಮತ ದೊರೆತಿಲ್ಲ. ದಕ್ಷಿಣದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ ಅಧಿಕಾರ ಹಿಡಿಯುವ ಅವರ ತಂತ್ರ, ವಿರೋಧಿಗಳ ಅವಿವೇಕ ದಿಂದ ಫಲಿಸುತ್ತಿರುವಂತಿದೆ. ಬಾಬಾಬುಡನ್‌ಗಿರಿಯನ್ನು ಅಯೋಧ್ಯೆ ಯಾಗಿಸಲು ಹವಣಿಸಿರುವ ಕುತಂತ್ರಿಗಳಿಗೆ ಪ್ರಜೆಗಳು ನೇರವಾಗಿ ನೀಡದ ಅಧಿಕಾರ ಪರೋಕ್ಷವಾಗಿ ದೊರೆತರೆ, ರಾಜ್ಯದಲ್ಲಿ ಲಷ್ಕರ್-ಏ-ತೊಯ್ಬಾ ಮುಂತಾದ ದುಷ್ಟಶಕ್ತಿಗಳು ಅವರ ಎದುರು ಹಣಾಹಣಿ ನಿಲ್ಲಲು, ಗೌಡರು, ಧರಂಸಿಂಗರು ಮತ್ತು ಅವರ ಅನುಯಾಯಿಗಳು ಅಂಥ ಬೆಳವಣಿಗೆಗೆ ಸಹಾಯಮಾಡಿದಂತಾಗುತ್ತದೆ. ಕರ್ನಾಟಕದ ಪ್ರಗತಿಪರ ಶಕ್ತಿಗಳು ಮತ್ತೊಂದು ಸಂಘರ್ಷಕ್ಕೆ ಸಿದ್ಧವಾಗಬೇಕಾದ ಸಂದರ್ಭ ಒದಗಿಬಂದಿದೆ.

೨೦-೦೧-೦೬

**ಕೆ. ಎಸ್. ಪಾರ್ಥಸಾರಥಿ**

*ಹಿಂದಿನ ಪುಟದಿಂದ (ಪಟ್ಟು ಬಿಡದ ಸಿಜಿಕೆ)...*

ರೀತಿಯಲ್ಲಿ ತಮ್ಮ ಭಾವನೆಯ ಪ್ರತಿಪಾದನೆಯ ಹಠ ಎದ್ದು ಕಾಣಿಸುತ್ತಿತ್ತು. ಅವರಿಗೆ ಬೆಲ್ಚಿ, ಒಡಲಾಳ, ರುಡಾಲಿ, ಅಂಬೇಡ್ಕರ್ ಮುಂತಾದವುಗಳಲ್ಲಿ ಗೆಲುವನ್ನು ತಂದು ಕೊಟ್ಟಿದ್ದ ಈ ಭಾವಪೂರ್ಣ ಸನ್ನಿವೇಶಗಳನ್ನು ಕಟ್ಟಿದ ರೀತಿಯೇ ದಂಡೆ, ಅಗೋ ಮುಗಿಲು ಇಗೋ ಪಂಜರಗಳಲ್ಲಿ ಅವರ ಎಣಿಕೆಗೆ ಸೋಲು ತಂದುಕೊಟ್ಟಿದೆ. ತಮ್ಮ ಚಿಂತನೆಯ ಬಗೆಯನ್ನು ಮಾತ್ರ ಸದಾ ದೃಢವಾಗಿ ನಂಬಿದ್ದ ಅವರು ಎಷ್ಟೋ ಬಾರಿ ವಿವೇಚನೆ ಯನ್ನು ಇಣುಕಿನೋಡಲೂ ಬಿಡದ ಜಡ್ಡುಹಿಡಿದವರಂತೆ ಕಾಣಿಸಿದ್ದಾರೆ. ಅವರ ದಂಡೆ ಬಗೆಗೆ ಗಂಟೆಗಟ್ಟಲೆ ಅವರೊಂದಿಗೆ ಕುಳಿತು ಚರ್ಚಿಸುವಾಗ ಅವರ ಈ ಗುಣ ಎದ್ದುಕಾಣುತ್ತಿತ್ತು.

ಬೆಂಗಳೂರು ವಿಶ್ವವಿದ್ಯಾಲಯದ ಗಾಂಧಿ ಅಧ್ಯಯನ ಕೇಂದ್ರದ ನಿರ್ದೇಶಕರಾದ ಮೇಲೆ ಕೊಂಚಮಟ್ಟಿಗೆ ಅವರು ವ್ಯವಹರಿಸುವ ರೀತಿಯಲ್ಲಿ ಬದಲಾಗಿದ್ದರೆಂದು ನಮಗೆ ಅನ್ನಿಸುತ್ತದೆ. ಮೊದಲಿನ ಮೊನಚು ಬೈಗುಳಗಳು ಪ್ರೋತ್ಸಾಹದಾಯಕ ಕಿವಿಮಾತಿನ ರೂಪವನ್ನು ಪಡೆದುಕೊಳ್ಳತೊಡಗಿದ್ದವು. ಯುವಶಕ್ತಿಯನ್ನು ಹೆಚ್ಚು ಪ್ರೀತಿಸುತ್ತಿದ್ದ ಅವರು ತಮ್ಮ ಮಾತು ಕೆಲಸ ಸಾಧಿಸುವ ಕಡೆಯಲ್ಲೆಲ್ಲ ಯುವಕರನ್ನು ಮುಂದೆ ನಿಲ್ಲಿಸಿ ಅವರುಗಳನ್ನು ದೊಡ್ಡವರನ್ನಾಗಿ ಮಾಡಿದ್ದಾರೆ. ಅವರ ಈ ಗುಣಕ್ಕೆ ಬಲಿಯಾಗಿ ಬಹಳಷ್ಟು ಮಂದಿ ಭಿನ್ನ ಕ್ಷೇತ್ರಗಳಲ್ಲಿ ತಮ್ಮ ಪ್ರತಿಭೆಯನ್ನು ತೋರಿಸಿ ಹೆಸರುಮಾಡಿದ್ದಾರೆ. ಈ ಗುಂಪಿನಲ್ಲಿ ಒಂದೆರಡು ಕಾಳಿನಷ್ಟು ನಾನೂ ಅವರ ಪ್ರೋತ್ಸಾಹಕ್ಕೆ ಪಾತ್ರನಾಗಿ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಲಾಭ ಪಡೆದವನಾಗಿದ್ದೇನೆ. ನನಗೆ ಸಿಜಿಕೆ ಒಂದು ದಾರಿ ಫಲಕವಿದ್ದಂತೆ. ದೂರದಿಂದಲೇ ನೋಡಿ, ಫಲಕ ತೋರಿಸುವ ದಾರಿಯನ್ನು ತಿಳಿದು ಮೌನವಾಗಿ ಹೋಗುವ ದಾರಿಹೋಕನಂತೆ ನಾನು ಸಿಜಿಕೆಯವರು ನಡೆದ ದಾರಿಯನ್ನು ನೋಡಿ ನನ್ನ ಚಿಂತನೆಯನ್ನು, ದಾರಿ ಹುಡುಕುವ ಕ್ರಮವನ್ನು ತಿದ್ದಿಕೊಂಡಿದ್ದೇನೆ. ಅವರ ನಿರಂತರ ಕಾಯಕದಲ್ಲಿರುವ, ಹಿಡಿದದ್ದನ್ನು ಹಠ ಸಾಧಿಸಿ ಪೂರ್ಣಗೊಳಿಸಿಕೊಳ್ಳುವ ಗುಣವನ್ನು ಮಾತ್ರ ಮೈಗೂಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆ. ನಿರಂತರವಾಗಿ ಸಿಜಿಕೆಯನ್ನು ನಾನು ಈ ಕಾರಣಕ್ಕಾಗಿ ದಿನವೂ ನೆನೆಯುತ್ತೇನೆ.

ಎಚ್. ವಿ. ವೇಣುಗೋಪಾಲ್
ಸಂಸ್ಕೃತ ಪ್ರಾಧ್ಯಾಪಕರು, ನ್ಯಾಷನಲ್ ಕಾಲೇಜು, ಬೆಂಗಳೂರು - ೫೬೦ ೦೦೪

# ಕಲೆ, ಸತ್ಯತೆ ಮತ್ತು ರಾಜಕಾರಣ



## – ಹೆರಾಲ್ಡ್ ಪಿಂಟರ್

೧೯೫೮ರಲ್ಲಿ ಒಮ್ಮೆ ಸತ್ಯತೆ ಮತ್ತು ಮಿಥ್ಯೆ ಕುರಿತಂತೆ ಹೀಗೆ ಬರೆದಿದ್ದೆ:

''ವಾಸ್ತವತೆ ಮತ್ತು ಅಸತ್ಯಗಳ ನಡುವೆ ನಿರ್ದಿಷ್ಟವಾಗಿ ಗುರುತಿಸಬಹುದಾದಂತಹ ತೀವ್ರ ವ್ಯತ್ಯಾಸಗಳಾವುವೂ ಇಲ್ಲ. ಅಂತೆಯೇ ಸತ್ಯತೆ ಮತ್ತು ಮಿಥ್ಯೆಗಳ ನಡುವೆಯೂ ಕೂಡ. ಯಾವುದೇ ಒಂದು ವಸ್ತುವನ್ನು ಕುರಿತು, ಅವಶ್ಯಕವಾಗಿ ಅದು ಸತ್ಯ ಇಲ್ಲವೇ ಕಾಲ್ಪನಿಕ ಎಂದು ಹೇಳಲಾಗದು. ಅಲ್ಲದೆ, ಆ ವಸ್ತು ಇವೆರಡೂ ಆಗಿರುವ ಸಾಧ್ಯತೆಯಿದೆ.''

ಈ ಬಗೆಯ ಪ್ರತಿಪಾದನೆಗಳು ಇಂದಿಗೂ ಅರ್ಥಪೂರ್ಣವಾಗಿವೆ ಎನ್ನಿಸುತ್ತದೆ ಮತ್ತು ಕಲೆಯ ಮುಖಾಂತರ ವಾಸ್ತವತೆಯನ್ನು ಅನ್ವೇಷಿಸುವ ಎಲ್ಲ ಸಂದರ್ಭಗಳಲ್ಲಿಯೂ ಅವುಗಳನ್ನು ಅನ್ವಯಿಸಬಹುದಾಗಿದೆ. ದೇಶವೊಂದರ ನಾಗರಿಕನಾಗಿ ಅಲ್ಲದಿದ್ದರೂ ಒಬ್ಬ ಬರಹಗಾರನಾಗಿ ಇಂತಹ ಪ್ರತಿಪಾದನೆಗಳನ್ನು ನಾನು ಸಮರ್ಥಿಸುತ್ತೇನೆ. ಅದೇ ಸಂದರ್ಭದಲ್ಲಿ ಒಬ್ಬ ನಾಗರಿಕನಾಗಿ, ಯಾವುದು ಸತ್ಯ, ಯಾವುದು ಮಿಥ್ಯ, ಎಂದು ಪ್ರಶ್ನಿಸುವುದು ನನಗೆ ಅನಿವಾರ್ಯವಾಗಿದೆ.

ನಾಟಕಕಲೆಯಲ್ಲಿ ವಾಸ್ತವತೆ ಎಂಬುದು ಯಾವತ್ತಿಗೂ ಗ್ರಹಿಕೆಗೆ ದಕ್ಕುವುದು ಕಷ್ಟವೇ. ಅದನ್ನು ಕುರಿತ ಪಟ್ಟುಬಿಡದ ಹುಡುಕಾಟವಂತೂ ನಿರಂತರವಾಗಿ ಜರುಗಬೇಕಾದ ಕ್ರಿಯೆ. ಅಂತಹ ಹುಡುಕಾಟದ ಹಿಂದಿರುವ ಹಂಬಲವೇ ಈ ನಿಟ್ಟಿನ ಪ್ರಯತ್ನಗಳಿಗೆ ಪ್ರೇರಕ ಶಕ್ತಿ. ಹಾಗೆ ನಿರಂತರ ಹುಡುಕಾಟದಲ್ಲಿ ತೊಡಗಿಕೊಳ್ಳುವುದು ನಿಮ್ಮ ಜವಾಬ್ದಾರಿ. ಕೆಲವೊಂದು ವೇಳೆ ನಿಮಗೆ ಅರಿವಿಲ್ಲದೆಯೇ ವಾಸ್ತವವೇನೋ ಎಂಬಂತೆ ಗೋಚರಿಸುವ ಒಂದು ಪ್ರತಿಬಿಂಬವೋ ಆಕಾರವೋ ದಿಢೀರನೆ ಎದುರಾಗುತ್ತದೆ. ಹಾಗೆ ನೋಡಿದರೆ ನಾಟಕಕಲೆಯಲ್ಲಿ ಯಾವುದೊಂದೂ ಅಸಲಿ ಅಥವಾ ಯಥಾರ್ಥ ಎಂಬುದಿಲ್ಲ. ಈ ಬಗೆಯವು ಎಷ್ಟೋ.

ಈ ಪ್ರತಿಬಿಂಬಗಳು ಅಥವಾ ಆಕಾರಗಳು ಒಂದರೊಡನೊಂದು ಪೈಪೋಟಿ ನಡೆಸುತ್ತವೆ; ಒಂದನ್ನೊಂದು ತಿರಸ್ಕರಿಸುತ್ತವೆ; ಪರಸ್ಪರ ಸವಾಲೊಡ್ಡುತ್ತವೆ; ಒಂದರಿಂದೊಂದು ಪುಟವೇಳುತ್ತವೆ; ಒಂದು ಇನ್ನೊಂದನ್ನು ಪ್ರತಿಬಿಂಬಿಸುತ್ತದೆ. ಕೆಲವು ವೇಳೆ ಆ ಕ್ಷಣದ ಸತ್ಯ ನಿಮ್ಮ ಹಿಡಿತದಲ್ಲಿದೆಯೇನೋ ಎಂದು ಭಾಸವಾಗುತ್ತದೆ. ಮರುಕ್ಷಣ ಅದು ನಿಮ್ಮ ಕೈ ತಪ್ಪಿಸಿ ನುಣುಚಿಕೊಂಡು ಮತ್ತೆಂದಿಗೂ ಸಿಗದಂತೆ ಮಾಯವಾಗಿಬಿಡುತ್ತದೆ. ನನ್ನ ನಾಟಕಗಳು ಹೇಗೆ ರೂಪುತಳೆಯುತ್ತವೆ ಎಂದು ಹಲವಾರು ಬಾರಿ ಜನರು ಕೇಳಿದ್ದುಂಟು. ಈ ಪ್ರಶ್ನೆಗೆ ಉತ್ತರ ಸದ್ಯಕ್ಕೆ ನನ್ನಲ್ಲಿಲ್ಲ. ಹೀಗೆ ಜರುಗಿತು ಎಂದು ಹೇಳಬಲ್ಲೆನೇ ಹೊರತು ನನ್ನ ನಾಟಕಗಳನ್ನೆಲ್ಲಾ ಒಟ್ಟಾರೆಯಾಗಿ ವಿಮರ್ಶಿಸುವುದು ನನ್ನಿಂದಾಗದ ಕೆಲಸ.

ಅನೇಕ ನಾಟಕಗಳು ಒಂದು ವಾಕ್ಯದಿಂದ, ಒಂದು ಪದದಿಂದ ಇಲ್ಲವೇ ಒಂದು ಉಪಮೆಯಿಂದ ಹುಟ್ಟಿಕೊಳ್ಳುತ್ತವೆ. ಮಾತು ಹೊರಬಿದ್ದ ಮರುಕ್ಷಣದಲ್ಲೇ ಪ್ರತಿಬಿಂಬವೊಂದು ಕಾಣಿಸಿಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ನನ್ನ ***ದಿ ಹೋಂಕಮಿಂಗ್*** ಮತ್ತು ***ಓಲ್ಡ್ ಟೈಂಸ್*** ನಾಟಕಗಳ ಮೊದಲ ಸಾಲುಗಳನ್ನು ಉದಾಹರಿಸಬಹುದಾಗಿದೆ. ***ದಿ ಹೋಂಕಮಿಂಗ್***ನ ಮೊದಲ ವಾಕ್ಯ, ''ವ್ಹಾಟ್ ಹ್ಯಾವ್ ಯು ಡನ್ ವಿತ್ ದಿ ಸಿಸರ್ಸ್?'' ***ಓಲ್ಡ್ ಟೈಂಸ್***ನ ಪ್ರಾರಂಭಿಕ ಶಬ್ದ ''ಡಾರ್ಕ್''. ಇಲ್ಲಿನ ಎರಡು ಸಂದರ್ಭಗಳಲ್ಲಿಯೂ ನನ್ನ ಕಲ್ಪನೆಗೆ ಲಭ್ಯವಾದದ್ದು ಅಷ್ಟುಮಾತ್ರ. ನಾಟಕಕ್ರಿಯೆಯ ಅಥವಾ ಪಾತ್ರರಚನೆಯ ಬಗ್ಗೆ ಹೀಗೆ ಅರ್ಥೈಸುತ್ತಾ ಹೋದರೆ ಆ ನಿಟ್ಟಿನಲ್ಲಿ ಸೃಜನಶೀಲ ನಾಟಕಕಾರನಿಗೆ ಎದುರಾಗುವ ಸವಾಲುಗಳು ಅದ್ಭುತ. ಒಬ್ಬ ಸಮರ್ಥ ನಾಟಕಕಾರನಿಂದ ಆಯಾ ಸನ್ನಿವೇಶಕ್ಕೆ ತಕ್ಕಂತೆ ಸೃಷ್ಟಿಸಲಾಗುವ ಪಾತ್ರಗಳು, ಅವುಗಳ ವೈವಿಧ್ಯತೆ, ಸಂಭಾಷಣೆ, ಮಾತಿನ ನಡುವಿನ ವಿರಾಮ (pause), ರಂಗಸಜ್ಜಿಕೆ, ಚಲನೆ ಎಲ್ಲವೂ ನಾಟಕದ ಮೂಲ ವಸ್ತುವಿಗೆ ಮೆರುಗು ನೀಡುತ್ತವೆ. ಇಂತಹ ಅಂಶಗಳಿಂದ ಆ ಒಂದು ಸನ್ನಿವೇಶದ ಅರ್ಥವಂತಿಕೆ ಹೆಚ್ಚುತ್ತದೆ. ಸಾಮಾನ್ಯವಾಗಿ, ಸಂಭಾಷಣೆ ಅಥವಾ ಮಾತುಗಳು ನಾಟಕದ ಯಾವುದೇ ಒಂದು ನಿರ್ದಿಷ್ಟ ಸಂದರ್ಭಕ್ಕೆ ವಿಶಿಷ್ಟ ಆಯಾಮವನ್ನು ಕಟ್ಟಿಕೊಡುತ್ತವೆ. ಅದರಿಂದಾಗಿ ಪ್ರೇಕ್ಷಕರೊಡನೆ ಏರ್ಪಡುವ ಸಂವೇದನಾಶೀಲತೆ ಅನನ್ಯ. ***ದಿ ಹೋಂಕಮಿಂಗ್*** ಮತ್ತು ***ಓಲ್ಡ್ ಟೈಂಸ್*** ನಾಟಕಗಳಲ್ಲಿ ಈ ನಮೂನೆಯ ತಂತ್ರಗಳನ್ನು ನಾನು ಅಳವಡಿಸಿಕೊಂಡಿರುವುದನ್ನು ನೀವು ಗಮನಿಸಬಹುದು.

ಆದ್ದರಿಂದ, ಕಲೆಯಲ್ಲಿ ಭಾಷೆಯು ಯಾವುದೋ ಘಳಿಗೆಯಲ್ಲಿ ಕುಸಿದುಹೋಗಬಹುದಾದ, ಅಸ್ಪಷ್ಟ, ಅನಿಶ್ಚಿತ ಇಲ್ಲವೇ ದ್ವಂದ್ವಾರ್ಥ ನೀಡುವ ಒಂದು ನಿರ್ವಹಣೆಯೋ, ಉಸುಬು ನೆಲವೋ, ಚೌಕಟ್ಟೋ ಅಥವಾ ಹೆಪ್ಪುಗಟ್ಟಿದ ಕೊಳವೋ ಆಗಿ ಉಳಿದು ಬಿಟ್ಟರೆ ಆಶ್ಚರ್ಯವೇನಿಲ್ಲ. ಆದರೆ, ನಾನು ಆಗಲೇ ಹೇಳಿದಂತೆ ಸತ್ಯಾನ್ವೇಷಣೆಯು ಯಾವತ್ತಿಗೂ ನಿಂತುಹೋಗುವ ಕ್ರಿಯೆಯಲ್ಲ. ಅದನ್ನು ಮುಂದೂಡಲೂ ಸಾಧ್ಯವಿಲ್ಲ. ಅಲ್ಲದೆ, ಅಂತಹ ಸನ್ನಿವೇಶವನ್ನು ಅದೇ ಕ್ಷಣದಲ್ಲಿ, ಅದೇ ನಿರ್ದಿಷ್ಟ ಸ್ಥಳದಲ್ಲಿ ಎದುರಿಸದೇ ಅನ್ಯ ಮಾರ್ಗವಿಲ್ಲ.

ರಾಜಕೀಯ ವಲಯಗಳಲ್ಲಿ, ಅಲ್ಲಿನ ಆಗುಹೋಗುಗಳನ್ನು ವಸ್ತುವಾಗಿಟ್ಟುಕೊಂಡು ರಚಿಸಲಾಗುವ ನಾಟಕಗಳು ಸಂಪೂರ್ಣವಾಗಿ ಬೇರೆಯದೇ ಆದ ಹಲವಾರು ಸಂಕೀರ್ಣತೆಗಳ ಸರಮಾಲೆಯನ್ನೇ ಒಳಗೊಂಡಿರುತ್ತವೆ. ಈ ಬಗೆಯ ನಾಟಕ ಕ್ರಿಯೆಯಲ್ಲಿ

ನಾಟಕಕಲೆಯಲ್ಲಿ ವಾಸ್ತವತೆ ಎಂಬುದು ಯಾವತ್ತಿಗೂ ಗ್ರಹಿಕೆಗೆ ದಕ್ಕುವುದು ಕಷ್ಟವೇ. ಅದನ್ನು ಕುರಿತ ಪಟ್ಟು ಬಿಡದ ಹುಡುಕಾಟ ವಂತೂ ನಿರಂತರವಾಗಿ ಜರುಗಬೇಕಾದ ಕ್ರಿಯೆ. ಅಂತಹ ಹುಡುಕಾಟದ ಹಿಂದಿರುವ ಹಂಬಲವೇ ಈ ನಿಟ್ಟಿನ ಪ್ರಯತ್ನಗಳಿಗೆ ಪ್ರೇರಕ ಶಕ್ತಿ. ಹಾಗೆ ನಿರಂತರ ಹುಡುಕಾಟದಲ್ಲಿ ತೊಡಗಿಕೊಳ್ಳುವುದು ನಿಮ್ಮ ಜವಾಬ್ದಾರಿ. ಕೆಲವೊಂದು ವೇಳೆ ನಿಮಗೆ ಅರಿವಿಲ್ಲದೆಯೇ ವಾಸ್ತವವೇನೋ ಎಂಬಂತೆ ಗೋಚರಿಸುವ ಒಂದು ಪ್ರತಿಬಿಂಬವೋ ಆಕಾರವೋ ದಿಢೀರನೆ ಎದುರಾಗುತ್ತದೆ. ಹಾಗೆ ನೋಡಿದರೆ ನಾಟಕಕಲೆಯಲ್ಲಿ ಯಾವುದೊಂದೂ ಅಸಲಿ ಅಥವಾ ಯಥಾರ್ಥ ಎಂಬುದಿಲ್ಲ. ಈ ಬಗೆಯವು ಎಷ್ಟೋ.

ರಾಜಕೀಯ ವಲಯಗಳಲ್ಲಿ, ಅಲ್ಲಿನ ಆಗು ಹೋಗುಗಳನ್ನು ವಸ್ತುವಾಗಿಟ್ಟುಕೊಂಡು ರಚಿಸಲಾಗುವ ನಾಟಕಗಳು ಸಂಪೂರ್ಣವಾಗಿ ಬೇರೆಯದೇ ಆದ ಹಲವಾರು ಸಂಕೀರ್ಣತೆಗಳ ಸರಮಾಲೆಯನ್ನೇ ಒಳಗೊಂಡಿರುತ್ತವೆ. ಈ ಬಗೆಯ ನಾಟಕ ಕ್ರಿಯೆಯಲ್ಲಿ ನೀತಿಬೋಧನೆ ಅಥವಾ ಧರ್ಮಬೋಧನೆ ಯನ್ನು ದೂರವಿಟ್ಟಷ್ಟೂ ಒಳಿತು. ಇಲ್ಲಿ ಅತ್ಯವಶ್ಯಕವಾಗಿ ಇರಲೇಬೇಕಾದುದು ವಸ್ತುನಿಷ್ಠತೆಯಿಂದ ಕೂಡಿದ ಧೋರಣೆ. ಪಾತ್ರಗಳಿಗೆ ತಮ್ಮದೇ ಆದ ಮುಕ್ತತೆ ಮತ್ತು ಸ್ವಂತಿಕೆ ಇರಬೇಕು.

ಕನ್ನಡಕ್ಕೆ : ಎಸ್. ಸುರೇಂದ್ರ

ನೀತಿಬೋಧನೆ ಅಥವಾ ಧರ್ಮಬೋಧನೆಯನ್ನು ದೂರವಿಟ್ಟಷ್ಟೂ ಒಳಿತು. ಇಲ್ಲಿ ಅತ್ಯವಶ್ಯಕವಾಗಿ ಇರಲೇಬೇಕಾದುದು ವಸ್ತುನಿಷ್ಠತೆಯಿಂದ ಕೂಡಿದ ಧೋರಣೆ. ಪಾತ್ರಗಳಿಗೆ ತಮ್ಮದೇ ಆದ ಮುಕ್ತತೆ ಮತ್ತು ಸ್ವಂತಿಕೆ ಇರಬೇಕು. ನಾಟಕಕಾರ, ತಾನು ಸೃಷ್ಟಿಸುವ ಪಾತ್ರಗಳನ್ನು ತನ್ನದೇ ಅಭಿರುಚಿಗೆ, ಮನೋವೃತ್ತಿಗೆ ಇಲ್ಲವೇ ಪೂರ್ವಗ್ರಹಗಳಿಗೆ ಮಿತಿಗೊಳಿಸುವುದು ಸೂಕ್ತವಲ್ಲ. ಹಲವಾರು ದೃಷ್ಟಿಕೋನಗಳು ಮತ್ತು ಪರಿಪ್ರೇಕ್ಷ್ಯಗಳನ್ನು ಆಧರಿಸಿ ಅವುಗಳನ್ನು ನಾಟಕಕ್ಕೆ ಅಳವಡಿಸಿಕೊಳ್ಳಬೇಕಾಗುತ್ತದೆ. ಆದರೆ, ಈ ಕೆಲಸ ಅಷ್ಟು ಸುಸೂತ್ರವಾದುದಲ್ಲ. ಅಷ್ಟೇಕೆ, ರಾಜಕೀಯ ವಿಡಂಬನೆಯು ಇಂತಹ ಯಾವುದೇ ಸೂತ್ರಗಳ ಪರಿಧಿಗೆ ಒಳಪಡುವುದಿಲ್ಲ. ವಾಸ್ತವದಲ್ಲಿ, ಅದು ಆ ಬಗೆಯ ಪರಿಕಲ್ಪನೆಗೆ ತದ್ವಿರುದ್ಧವಾದುದು. ಒಂದರ್ಥದಲ್ಲಿ ಹಾಗಿರುವುದು ಸೂಕ್ತವೇ.

***ದಿ ಬರ್ತ್‌ಡೇ ಪಾರ್ಟಿ*** ನಾಟಕದಲ್ಲಿ ಒಬ್ಬ ವ್ಯಕ್ತಿಯನ್ನು ಮಾನಸಿಕವಾಗಿ ಸ್ವಾಧೀನಕ್ಕೊಳಪಡಿಸುವ ಕ್ರಿಯೆಯ ಮೇಲೆ ಕೇಂದ್ರೀಕರಿಸುವುದಕ್ಕೆ ಮುಂಚೆ ಹತ್ತು ಹಲವು ಆಯ್ಕೆಗಳ ಸರಣಿಯೇ ಅನಿರೀಕ್ಷಿತ ಸಾಧ್ಯತೆಗಳನ್ನು ಸೃಷ್ಟಿಸಿ, ಅವು ಆ ಸಂದರ್ಭಕ್ಕೆ ತಕ್ಕುದಾದ ಸನ್ನಿವೇಶವನ್ನು ರಚಿಸಿಕೊಡುವಂತೆ ಚಿತ್ರಿಸಲು ಪ್ರಯತ್ನಿಸಿದ್ದೇನೆ. ಆದರೆ, **ಮೌಂಟನ್ ಲ್ಯಾಂಗ್ವೇಜ್**ನಲ್ಲಿ ಹಾಗಿಲ್ಲ, ಅಲ್ಲಿ ನೀವು ಕಾಣುವುದು ಕ್ರೌರ್ಯ ಅಥವಾ ವಿಕಾರ ಸ್ವರೂಪದ ಪ್ರತಿಮೆಗಳು ಮತ್ತು ಕ್ರಿಯೆ. ಇದರಿಂದಾಗಿ, ಅಂತಹ ಕ್ರಿಯೆಯಲ್ಲಿಯೇ ತಲ್ಲೀನರಾಗಿರುವುದು ಆ ನಾಟಕದಲ್ಲಿನ ಸೈನಿಕರಿಗೆ ಒಂದು ಬಗೆಯ ಮೋಜು. ಎಷ್ಟೋ ವೇಳೆ ಚಿತ್ರಹಿಂಸೆಯೂ ನೀರಸ ಎನಿಸಿಬಿಡುತ್ತದೆ, ಅಲ್ಲವೇ! ಇತ್ತೀಚೆಗೆ ಬಾಗ್ದಾದ್‌ನ ಅಬು ಘ್ರೈಬ್‌ನಲ್ಲಿ ಜರುಗಿದ ದಾರುಣ ಘಟನೆಯು ಈ ಅಂಶವನ್ನು ಸಾಬೀತುಪಡಿಸುತ್ತದೆ. ನನ್ನ **ಆ್ಯಷಸ್ ಟು ಆ್ಯಷಸ್** ನಾಟಕದಲ್ಲಿನ ಘಟನೆಗಳು ಎಲ್ಲೋ ನೀರಿನಾಳದಲ್ಲಿ ಸಂಭವಿಸುತ್ತಿವೆ ಎಂಬ ಭಾವನೆಯನ್ನು ಪ್ರೇಕ್ಷಕರಲ್ಲಿ ಮೂಡಿಸಲು ಸಾಕು. ಇಲ್ಲಿ ಛಾಯೆ ಮತ್ತು ಪ್ರತಿಬಿಂಬಗಳ ಹಿನ್ನೆಲೆಯಲ್ಲಿ ಅಲೆಗಳಲ್ಲಿ ತೇಲಿಹೋಗುತ್ತಲೇ ಬದುಕಿಗಾಗಿ ಹೆಣಗಾಡುತ್ತಿರುವ ಒಬ್ಬ ಮಹಿಳೆಯನ್ನು ಸಾಂಕೇತಿಸಿ ವಾಸ್ತವ ಬದುಕಿನ, ಅಳಿವು ಉಳಿವುಗಳ ಜಂಜಾಟವನ್ನು ಚರ್ಚಿಸುವ ಪ್ರಯತ್ನವಿದೆ.

ರಾಜಕಾರಣಿಗಳು ಬಳಸುವ ರಾಜಕೀಯ ಪರಿಭಾಷೆ, ನುಡಿಗಟ್ಟುಗಳು ನಾನು ಇಲ್ಲಿ ಚರ್ಚಿಸಿರುವ ಪರಿಧಿಗೆ ಹೊರತಾದುವು. ಏಕೆಂದರೆ, ನಮಗೆ ತಿಳಿದಿರುವಮಟ್ಟಿಗೆ ಬಹುತೇಕ ರಾಜಕೀಯ ವ್ಯಕ್ತಿಗಳು -ಎಲ್ಲ ಅಧಿಕಾರವನ್ನೂ ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಹಾತೊರೆಯುತ್ತಾರೆ. ಅದಕ್ಕಾಗಿ ಇಲ್ಲಸಲ್ಲದ ಅಕ್ರಮ ಕೃತ್ಯಗಳಲ್ಲಿ ತೊಡಗಿಕೊಳ್ಳುತ್ತಾರೆ. ಆ ಮೂಲಕ ಅವರು ಅಧಿಕಾರದಲ್ಲೇ ಮುಂದುವರೆಯಬೇಕೆಂದಾದರೆ ಜನಸಾಮಾನ್ಯರು ತಮ್ಮ ದೈನಂದಿನ ಬದುಕಿನ ವಾಸ್ತವಗಳಿಂದ ದೂರವಿದ್ದು ಮೌಢ್ಯರಂತಿರುವುದು ಅನಿವಾರ್ಯ. ಆದ್ದರಿಂದಲೇ ನಾವು ಸುಳ್ಳು ಮತ್ತು ವಂಚನೆಗಳಿಂದ ತುಂಬಿಹೋಗಿರುವ ಕಲುಷಿತ ವಾತಾವರಣದಲ್ಲಿಯೇ ಬದುಕು ಸಾಗಿಸಬೇಕಾಗುತ್ತದೆ.

ಇರಾಕ್ ಮೇಲೆ ಆಕ್ರಮಣ ನಡೆಸುವುದಕ್ಕೆ ಮುಂಚೆ, ಆ ರಾಷ್ಟ್ರವು ಸಾಮೂಹಿಕ ಮಾರಕಾಸ್ತ್ರಗಳನ್ನು ಹೊಂದಿದೆ; ಅಲ್ ಖೈದಾ ಎಂಬ ಭಯೋತ್ಪಾದಕ ಸಂಘಟನೆಯೊಡನೆ ನಿಕಟ ಸಂಬಂಧವಿರಿಸಿಕೊಂಡಿದೆ; ಸೆಪ್ಟೆಂಬರ್ ೧೧, ೨೦೦೧ರಂದು ನ್ಯೂಯಾರ್ಕ್ ಮೇಲೆ ಎಸಗಿದ ವಿಧ್ವಂಸಕ ಕೃತ್ಯದಲ್ಲಿ ಅದರ ಕೈವಾಡವಿದೆ ಎಂದೆಲ್ಲಾ ಇಲ್ಲಸಲ್ಲದ ಆರೋಪಗಳನ್ನು ಮಾಡಲಾಗಿತ್ತು. ಈ ಅಪಪ್ರಚಾರದ ಹಿಂದಿದ್ದ ಅಮೆರಿಕಾದ ಉದ್ದೇಶವು ಬೇರೆಯೇ ಆಗಿತ್ತು ಎಂಬ ಸತ್ಯಾಂಶ ಈಗ ಬಯಲುಗೊಂಡಿದೆ. ಮೊದಲನೇ ಜಾಗತಿಕ ಯುದ್ಧದ ನಂತರದ ಅವಧಿಯಲ್ಲಿ ಅಮೆರಿಕಾ ಅನುಸರಿಸುತ್ತಿರುವ ವಿದೇಶಾಂಗ ನೀತಿಯನ್ನು ಪರಿಶೀಲಿಸಿದರೆ ಜಗತ್ತಿನ ವಿವಿಧೆಡೆ ಸಂಭವಿಸಿರುವ ಅಮಾನವೀಯ ಘಟನೆಗಳು ಮತ್ತು ಮಾರಣಹೋಮಗಳ ಮೂಲ ಎಲ್ಲಿದೆ ಎಂಬುದನ್ನು ಕಂಡುಕೊಳ್ಳುವುದು ಕಷ್ಟವೇನಲ್ಲ.

ಯುದ್ಧಾನಂತರದ ಅವಧಿಯಲ್ಲಿ ಸೋವಿಯೆತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ರಾಷ್ಟ್ರಗಳಲ್ಲಿ ಘಟಿಸಿದ ಆಗುಹೋಗುಗಳು, ಘೋರ ಕೃತ್ಯಗಳು, ಮುಕ್ತ ಚಿಂತನೆಯಿಂದ ಅಲ್ಲಿನ ಜನತೆ ವಂಚಿತರಾದದ್ದು – ಎಲ್ಲವೂ ಇಡೀ ಜಗತ್ತಿಗೇ ತಿಳಿದಿರುವ ಸಂಗತಿ. ಮತ್ತು ಇವೆಲ್ಲವನ್ನು ದಾಖಲಿಸಿಯೂ ಆಗಿದೆ. ಆದರೆ, ಅದೇ ಅವಧಿಯಲ್ಲಿ, ಅಮೆರಿಕಾ ಕೈಗೊಂಡ ಸಾಮೂಹಿಕ ಹತ್ಯೆ ಮತ್ತು ಪಾಶವೀಕೃತ್ಯಗಳನ್ನು ಕುರಿತಂತೆ ಯಾವ ನಿರ್ದಿಷ್ಟ ದಾಖಲೆಗಳೂ ಇಲ್ಲ. ಅವುಗಳ ಬಗ್ಗೆ ಎಲ್ಲೋ ಅಲ್ಪಸ್ವಲ್ಪ ಮಾಹಿತಿ ದೊರಕಬಹುದು, ಅಷ್ಟೆ. ಅಂದು ಸೋವಿಯೆತ್ ಒಕ್ಕೂಟವು ಅಸ್ತಿತ್ವದಲ್ಲಿದ್ದುದರಿಂದಾಗಿ ಸ್ವಲ್ಪಮಟ್ಟಿಗೆ ನಿರ್ಬಂಧಕ್ಕೊಳಗಾಗಿದ್ದರೂ ಅಮೆರಿಕಾ ತಾನು ಜಗತ್ತಿನಾದ್ಯಂತ ಸ್ವೇಚ್ಛೆಯಿಂದ ವರ್ತಿಸುತ್ತೇನೆಂದು ಉದ್ಧಟತನದಿಂದ ಅನೇಕಬಾರಿ ಸಾರಿಹೇಳಿತ್ತು.

ಈಗೀಗ, ಸಾರ್ವಭೌಮ ರಾಷ್ಟ್ರಗಳ ಮೇಲೆ ನೇರದಾಳಿ ನಡೆಸುವುದು ಅಮೆರಿಕಾದ ಉದ್ದೇಶವಲ್ಲ. ಅದು ಆ ರಾಷ್ಟ್ರ ಅನುಸರಿಸುವ ವಿಧಾನವೂ ಅಲ್ಲ. ಅಷ್ಟೇನೂ ತೀವ್ರವಲ್ಲದ ಮಿಲಿಟರಿ ಸಂಘರ್ಷಗಳಲ್ಲಿ (Low Intensity Conflict) ತೊಡಗಿಕೊಳ್ಳುವುದು ಅಮೆರಿಕಾದ ಆದ್ಯತೆಯಂತೆ! ಈ ನಮೂನೆಯ ಸಂಘರ್ಷಗಳ ಸ್ವಾರಸ್ಯವೆಂದರೆ, ಒಂದು ದೇಶದ ಮೇಲೆ ಅಥವಾ ಅಲ್ಲಿನ ಯಾವುದೋ ಒಂದು ಭೂಭಾಗದ ಮೇಲೆ ಬಾಂಬು ಪ್ರಯೋಗಿಸಿದಾಗ ಮೃತರಾಗುವ ಜನರ ಸಂಖ್ಯೆಗಿಂತಲೂ ಹತ್ತುಪಟ್ಟು ಹೆಚ್ಚಿನ ಸಂಖ್ಯೆಯಲ್ಲಿ ಜನರು ಯಾವುದೇ 'ಗಡಿಬಿಡಿಯಿಲ್ಲದೆ ಸಾವಕಾಶವಾಗಿ' ಸಾಯುತ್ತಾರಂತೆ! ಇದು, ದೇಶವೊಂದರ ಪ್ರಜೆಗಳನ್ನು ಕ್ಯಾನ್ಸರ್‌ನಂತಹ ಮಾರಕರೋಗಕ್ಕೆ ಗುರಿಪಡಿಸಿ ಅವರೆಲ್ಲರೂ ಕ್ರಮೇಣ ನಾಶವಾಗುತ್ತಿರುವಾಗಲೇ ಮಿಲಿಟರಿ ಶಕ್ತಿಯನ್ನು ಪ್ರಯೋಗಿಸಿ ಮತ್ತು ಬೃಹತ್ ಬಹುರಾಷ್ಟ್ರೀಯ ಕಂಪನಿಗಳ ನೆರವಿನಿಂದ ಆ ನೆಲದಲ್ಲಿ ಅಧಿಕಾರವನ್ನು ಸ್ಥಾಪಿಸುವ ಒಂದು ಅಮಾನವೀಯ ಸಂಸ್ಕೃತಿ. ಬಹುಕಾಲದಿಂದಲೂ ಅಮೆರಿಕಾ ಇಂತಹುದೇ ವಿದೇಶಾಂಗ ನೀತಿಯನ್ನು ಪಾಲಿಸಿಕೊಂಡುಬರುತ್ತಿದೆ.

ನಿಕರಾಗುವಾದ ದುರಂತವೂ ಇದಕ್ಕೆ ಭಿನ್ನವಾದುದಲ್ಲ. ೧೯೮೦ರಲ್ಲಿ ಲಂಡನ್‌ನಲ್ಲಿರುವ ಅಮೆರಿಕಾದ ದೂತಾವಾಸದಲ್ಲಿ ಜರುಗಿದ ಸಭೆಯೊಂದರಲ್ಲಿ ಭಾಗವಹಿಸುವ ಅವಕಾಶ ನನಗೆ ಲಭಿಸಿತು. ನಿಕರಾಗುವಾದ ವಿರುದ್ಧ ಜರುಗುತ್ತಿದ್ದ ಕಾರ್ಯಾಚರಣೆಯಲ್ಲಿ ತೊಡಗಿಕೊಂಡಿದ್ದ ಕಾಂಟ್ರಾಗಳಿಗೆ ಹಣದ ರೂಪದಲ್ಲಿ ಹೆಚ್ಚಿನ ನೆರವು ನೀಡಬೇಕೇ ಬೇಡವೇ ಎಂಬ ವಿಷಯ ಕುರಿತು ಅಮೆರಿಕಾದ ಕಾಂಗ್ರೆಸ್ ತೀರ್ಮಾನಿಸಬೇಕಿದ್ದ ಸಂದರ್ಭ ಅದು. ನಿಕರಾಗುವಾದ ಪರವಾಗಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಲು ಬಂದಿದ್ದ ನಿಯೋಗದಲ್ಲಿ ನಾನೂ ಹಾಜರಿದ್ದೆ. ಆ ರಾಷ್ಟ್ರದ ಜಾನ್ ಮೆಟ್ಕಾಫ್ ಎಂಬ ಪಾದ್ರಿ ಈ ನಿಯೋಗದ ಒಬ್ಬ ಪ್ರಮುಖ ಸದಸ್ಯರಾಗಿದ್ದರು. ಅಮೆರಿಕಾದ ರಾಯಭಾರಿ ಕಛೇರಿಯ ವಕ್ತಾರನಾಗಿ ರೇಮಂಡ್ ಸಿಟ್ಜ್ ಹಾಜರಿದ್ದರು. ತನ್ನ ಕಣ್ಣೆದುರಿಗೇ ಘಟಿಸಿದ ವಿನಾಶಕಾರಿ ಆಕ್ರಮಣ ಹಾಗೂ ಅತ್ಯಾಚಾರಗಳಿಗೆ ಗುರಿಯಾದ ಉತ್ತರ ನಿಕರಾಗುವಾದಲ್ಲಿರುವ ಪ್ರದೇಶವೊಂದರ ಮುಗ್ಧ ನರ್ಸುಗಳು, ವೈದ್ಯರು, ಶಿಕ್ಷಕರು ಮತ್ತಿತರ ಜನಸಾಮಾನ್ಯರು ಹತ್ಯೆಗೊಂಡ ದುರಂತವನ್ನು ಮೆಟ್ಕಾಫ್ ವಿವರಿಸಿ ಹೇಳಿದಾಗ ಈ ರಿಟ್ಜ್ ಎಂಬ ದುರಹಂಕಾರಿ ಹೇಳಿದ್ದಿಷ್ಟೆ:

''ಫಾದರ್, ಒಂದು ಮಾತು ಹೇಳುತ್ತೇನೆ. ಯಾವತ್ತಿಗೂ ಇಂತಹ ಆಕ್ರಮಣಕಾರಿ ಕಾರ್ಯಾಚರಣೆಗಳಲ್ಲಿ ಮುಗ್ಧ ಜನತೆ ಆಪತ್ತಿಗೆ ಗುರಿಯಾಗುವುದು, ಕಷ್ಟ ಅನುಭವಿಸುವುದು ಸಹಜ.''

ಅವನ ಮಾತು ಎಷ್ಟು 'ಸತ್ಯ' ನೋಡಿ! ಎಲ್ಲ ಕಾಲಕ್ಕೂ ಕಷ್ಟಕಾರ್ಪಣ್ಯ ಬರ್ಬರತೆಗಳಿಗೆ ತುತ್ತಾಗಿ ನರಳುವುದು ಮುಗ್ಧ ಜನತೆಯೇ ಅಲ್ಲವೇ? ಸಿಟ್ಜ್‌ನ ಮಾತುಗಳು ಅಮೆರಿಕಾ ಸರಕಾರದ, ಅದರ ನೀತಿಗಳ ಒಂದು ಮುಖವನ್ನು ಮಾತ್ರ ಪರಿಚಯಿಸುತ್ತವೆ. ನಿಕರಾಗುವಾದಲ್ಲಿ ಲೆಕ್ಕವಿಲ್ಲದಷ್ಟು ಭಯಾನಕ ಕೃತ್ಯಗಳು ಜರುಗಿಹೋಗಿದ್ದು ಈಗ ಇತಿಹಾಸ. ಅಲ್ಲಿನ ಸ್ಯಾಂಡಿನಿಷ್ಟಾಗಳು ತಮ್ಮ ಆಡಳಿತಾವಧಿಯಲ್ಲಿ ಜಾರಿಗೆ ತಂದ ಜನಪರ ಸಾಮಾಜಿಕ ಆರ್ಥಿಕ ಸುಧಾರಣೆಗಳು ಇಡೀ ಲ್ಯಾಟಿನ್ ಅಮೆರಿಕಾದಲ್ಲೇ ಹೊಸ ಕ್ರಾಂತಿಕಾರಕ ರಾಜಕೀಯ ಅಲೆಯನ್ನೇ ಹುಟ್ಟುಹಾಕಬಲ್ಲ ಸಾಮರ್ಥ್ಯವನ್ನು ಹೊಂದಿದ್ದವು.

ಎಲ್ ಸಾಲ್ವೆಡಾರ್ ಮತ್ತು ಗ್ವಾಟೆಮಾಲಾಗಳಲ್ಲಿ ಅಲ್ಲಿನ ಕ್ರಾಂತಿಕಾರಿ ಸಮಾಜವಾದಿ ಚಳುವಳಿಗಳನ್ನು ಹತ್ತಿಕ್ಕುವಲ್ಲಿಯೂ ಅಮೆರಿಕಾ ಯಶಸ್ವಿಯಾಯಿತು. ಎಲ್ ಸಾಲ್ವೆಡಾರ್‌ನಲ್ಲಿ ಅಮೆರಿಕಾ ಎಸಗಿದ ಸಾಮೂಹಿಕ ಕೊಲೆಗಳಲ್ಲಿ ೭೫೦೦೦ ಜನರು ಸತ್ತರೆಂಬ ಅಂದಾಜಿದೆ. ಅವರನ್ನು ಕೊಂದದ್ದಾದರೂ ಏಕೆ? ಆ ಜನರು ತಮ್ಮ ಬದುಕನ್ನು ಉತ್ತಮಪಡಿಸಿಕೊಳ್ಳುವ ನಿಟ್ಟಿನಲ್ಲಿ ದಿಟ್ಟಹೆಜ್ಜೆ ಇಟ್ಟೇ ಇಡುತ್ತೇವೆ ಎಂಬ ದೃಢವಿಶ್ವಾಸ ಹೊಂದಿದ್ದವರು. ಅಮೆರಿಕಾ ಸರಕಾರದ ದೃಷ್ಟಿಯಲ್ಲಿ ನಿಕರಾಗುವಾದ ಜನರು ಅಂತಹ ಆಶಯಗಳನ್ನು ಹೊಂದಿದ್ದರೆಂಬ ಕಾರಣಕ್ಕಾಗಿಯೇ ಅವರೆಲ್ಲರೂ ಆ ಸರಕಾರಕ್ಕೆ ಕಮ್ಯುನಿಸ್ಟರಾಗಿ ಕಾಣಿಸಿಬಿಟ್ಟರು! ತಮ್ಮ ಸಮಾಜವನ್ನು ಪರಂಪರಾನುಗತವಾಗಿ ಕಿತ್ತುತಿನ್ನುತ್ತಿದ್ದ ಕಡುಬಡತನ, ರೋಗರುಜಿನಗಳು, ಅವನತಿ ಮತ್ತು ದಬ್ಬಾಳಿಕೆಗಳನ್ನು ಮತ್ತು ಅಲ್ಲಿನ ಯಥಾಸ್ಥಿತಿಯನ್ನು ಪ್ರಶ್ನಿಸಹೊರಟಿದ್ದೇ ಅವರ ಸಾವಿಗೆ ಮೂಲ ಕಾರಣವಾಯಿತು. ಈಗ ಮತ್ತೆ ಆ ಪ್ರದೇಶದೆಲ್ಲೆಡೆ ಜನರು ಎಂದಿನಂತೆ ದಾಸ್ಯಕ್ಕೆ ಸಿಕ್ಕಿ ನರಳುತ್ತಿದ್ದಾರೆ. ಆ ಬಡಪಾಯಿಗಳ ಎಲ್ಲ ಕನಸುಗಳು ಭಗ್ನಗೊಂಡಿವೆ. ಇವು ಯಾವುವೂ ಘಟಿಸಿಯೇ ಇಲ್ಲವೇನೋ ಎಂಬಂತೆ ವರ್ತಿಸುತ್ತ ಅಮೆರಿಕಾ ಜಗತ್ತಿನೆಲ್ಲೆಡೆ ತನ್ನ ಸಾಮ್ರಾಜ್ಯಶಾಹಿ ನೀತಿಯನ್ನು ಮುಂದುವರೆಸುತ್ತಲೇ ಇದೆ.

ಎರಡನೇ ಜಾಗತಿಕ ಯುದ್ಧದ ನಂತರದ ಅವಧಿಯಲ್ಲಿ ಆ ರಾಷ್ಟ್ರವು ಬಹಳಷ್ಟು ದೇಶಗಳಲ್ಲಿ ಬಲಪಂಥೀಯ ಮಿಲಿಟರಿ ಸರ್ವಾಧಿಕಾರಿ ಪ್ರಭುತ್ವಗಳನ್ನು ಹುಟ್ಟುಹಾಕಿದೆ. ಈ ನಿಟ್ಟಿನಲ್ಲಿ ಇಂಡೋನೇಷ್ಯಾ, ಗ್ರೀಸ್, ಉರುಗ್ವೆ, ಬ್ರೆಜಿಲ್ ಮತ್ತು ಎಲ್ಲರಿಗೂ ತಿಳಿದಿರುವಂತೆ ಚಿಲಿ ಉದಾಹರಣೆಗಳಾಗಿವೆ. ಆದರಲ್ಲೂ, ೧೯೭೩ರಲ್ಲಿ ಅಮೆರಿಕಾ ಚಿಲಿಯಲ್ಲಿ ಕೈಗೊಂಡ ಭಯಂಕರ ಕಾರ್ಯಾಚರಣೆಗಳನ್ನು ಕ್ಷಮಿಸಲು ಸಾಧ್ಯವೇ ಇಲ್ಲ. ಅಮೆರಿಕಾ ಹೂಡುವ ಇಂತಹ ಲೆಕ್ಕವಿಲ್ಲದಷ್ಟು ಕುತಂತ್ರಗಳು ಎಲ್ಲರಿಗೂ ಪರಿಚಿತ. ಆದರೆ ಅದರ ವಿರುದ್ಧ ದನಿಯೆತ್ತುವವರು ಬಹಳ ವಿರಳ.

ಪ್ರಜಾಪ್ರಭುತ್ವವನ್ನು ರಕ್ಷಿಸುತ್ತೇನೆಂಬ ನೆಪಹೂಡಿ ಇಂದು ಇತರ ರಾಷ್ಟ್ರಗಳ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡಿ 'ವಿಜೃಂಭಿಸುತ್ತಿರುವ' ಅಮೆರಿಕಾ ತನ್ನ ಸ್ವಪ್ರೇಮವನ್ನು ಆತ್ಮರತಿಯನ್ನು, ಮೆರೆಯುತ್ತಿದೆ; ಮೆರೆದು ಯಶಸ್ವಿಯೂ ಆಗುತ್ತಿದೆ. ಅಮೆರಿಕಾದ ರಾಜಕಾರಣಿಗಳು, ಅವರ ಪ್ರತಿನಿಧಿಗಳು ಬಳಸುವ ಭಾಷೆ, ಅವರು ಹೂಡುವ ಕುತಂತ್ರಗಳು

ಚಿಂತನಶೀಲತೆಯನ್ನೇ ಧಿಕ್ಕರಿಸುತ್ತವೆ; ಕೆಲವರಿಗೆ ಸುಖಾನುಭವವನ್ನೂ ನೀಡುತ್ತವೆ. ಬಡತನರೇಖೆಗಿಂತಲೂ ಕೆಳಗಿರುವ ನಾಲ್ಕು ಕೋಟಿ ಅಮೆರಿಕನ್ನರಿಗೆ ಮತ್ತು ಆ ನೆಲದ ಉದ್ದಗಲಕ್ಕೂ ಹರಡಿಕೊಂಡಿರುವ ಕಾರಾಗೃಹಗಳಲ್ಲಿ ದಾರುಣ ಬದುಕು ಸಾಗಿಸುತ್ತಿರುವ ಇಪ್ಪತ್ತು ಲಕ್ಷ ಜನ ಪುರುಷರು ಮತ್ತು ಮಹಿಳೆಯರಿಗೆ ಈ ಮಾತು ಅನ್ವಯಿಸುವುದಿಲ್ಲ. ಈ ವಿಕೃತ ಸುಖಾನುಭವವೂ ಅವರಿಗೆ ತಟ್ಟದು, ಬಿಡಿ.



ಅಮೆರಿಕಾ ಎಂದಿಗೂ ತನ್ನ ಹಿಂಸಾತ್ಮಕ ಚಟುವಟಿಕೆಗಳ ಬಗ್ಗೆ ಪಶ್ಚಾತ್ತಾಪಪಟ್ಟಿಲ್ಲ. ವಿಶ್ವಸಂಸ್ಥೆ, ಅಂತರರಾಷ್ಟ್ರೀಯ ಕಾನೂನು, ವಿಮರ್ಶಾತ್ಮಕ ಟೀಕೆಗಳು, ಭಿನ್ನಾಭಿಪ್ರಾಯಗಳು – ಇವಾವುದರ ಬಗ್ಗೆಯೂ ಆ ರಾಷ್ಟ್ರಕ್ಕೆ ಪುಡಿಗಾಸು ಬೆಲೆಯಿಲ್ಲ. ಹೇಗೂ ಜಡ್ಡುಹಿಡಿದು ಮರಗಟ್ಟಿಹೋಗುತ್ತಿರುವ ಬ್ರಿಟನ್ ಅದರ ಬಾಲಬಡುಕನಂತೆ ವರ್ತಿಸುತ್ತಿದೆ, ಅಲ್ಲವೆ!

ನಮ್ಮೆಲ್ಲರ ನೈತಿಕ ಹೊಣೆಗಾರಿಕೆಗಾದರೂ ಏನಾಗಿದೆ? ಅದು ಎಂದಾದರೂ ಇತ್ತೆ? ಹೋಗಲಿ, ಹಾಗೆಂದರೇನು? ಈಗೀಗ ಅಪರೂಪಕ್ಕೆ ಬಳಸುವ 'ಆತ್ಮಸಾಕ್ಷಿ' ಎಂಬ ಪದಕ್ಕೂ ನಮ್ಮ ಹೊಣೆಗಾರಿಕೆಗೂ ಏನಾದರೂ ಸಂಬಂಧವಿದೆಯೇ? ಆತ್ಮಸಾಕ್ಷಿ ಎಂಬುದು ನಮ್ಮ ನಡತೆ ಮತ್ತು ಕೃತ್ಯಗಳಿಗೆ ಸಂಬಂಧಿಸಿದ ಮೌಲ್ಯವೊಂದೇ ಅಲ್ಲ, ಅದು, ಇತರರ ನಡವಳಿಕೆ ಮತ್ತು ಕೃತ್ಯಗಳಿಗೆ ನಾವು ಹೇಗೆ ಪ್ರತಿಕ್ರಿಯಿಸುತ್ತೇವೆ, ಆ ದಿಶೆಯಲ್ಲಿ ಪರಸ್ಪರ ಜವಾಬ್ದಾರಿ ಹಂಚಿಕೊಳ್ಳಲು ಹೇಗೆ ಮುಂದಾಗುತ್ತೇವೆ ಎಂಬ ಅಂಶವನ್ನೂ ಕುರಿತದ್ದಾಗಿದೆ.

ಈ ಮಾತು ಹೇಳುವಾಗ ಗ್ವಾಂಟನಾಮೊ ಕೊಲ್ಲಿ ನೆನಪಿಗೆ ಬರುತ್ತದೆ. ಯಾವ ನಿರ್ದಿಷ್ಟ ಮತ್ತು ಆಧಾರಯುತ ಆರೋಪವನ್ನೂ ಮಾಡದೆ ನೂರಾರು ಜನರನ್ನು ಆ ಕೊಲ್ಲಿಯಲ್ಲಿ ಬಂಧನದಲ್ಲಿಡಲಾಗಿದೆ. ಇದುವರೆವಿಗೂ ಆ ಕುರಿತು ಯಾವುದೇ ಕಾನೂನು ಕ್ರಮವನ್ನೂ ಜರುಗಿಸಿಲ್ಲ. ಈ ಹೀನ ನಡವಳಿಕೆ ಜಿನೀವಾ ಒಡಂಬಡಿಕೆಗೆ ವಿರುದ್ಧವಾದುದು. 'ಅಂತರರಾಷ್ಟ್ರೀಯ ಸಮುದಾಯ' ಎಂದು ಕರೆಯಲಾಗುವ ಜಗತ್ತಿನ ಕೋಟ್ಯಂತರ ಮಂದಿ ಕಿಂಚಿತ್ತೂ ಪ್ರತಿಭಟಿಸದೆ, ಇಂತಹ ಕ್ರೌರ್ಯದ ವಿರುದ್ಧ ದನಿಯೆತ್ತದೆ ಮೌನವಹಿಸಿದ್ದಾರೆ. ಎಲ್ಲೋ ಅಪರೂಪಕ್ಕೊಮ್ಮೆ ಯಾವುದೋ ಒಂದು ಪತ್ರಿಕೆಯ ಆರನೇ ಪುಟದಲ್ಲಿ ಅಲ್ಲಿನ ಜನರ ಅಸಹಾಯಕತೆಯ ಬಗ್ಗೆ ಒಂದು ತುಣುಕು ಸುದ್ದಿ ಪ್ರಕಟವಾಗಬಹುದೇನೋ. ಮುಕ್ತ ಜಗತ್ತಿನ ಮುಂದಾಳು ಎಂದು ಬೀಗುವ ಅಮೆರಿಕಾ ಆ ಪುಟ್ಟ ಪ್ರದೇಶದಲ್ಲಿ, ತನ್ನ ದಮನಕಾರಿ ನೀತಿಯನ್ನು ಮುಂದುವರೆಸುತ್ತಲೇ ಇದೆ. ಗ್ವಾಂಟನಾಮೋ ಕೊಲ್ಲಿ ನಿವಾಸಿಗಳ ಬಗ್ಗೆ ನಾವೆಂದಾದರೂ ಚಿಂತಿಸಿದ್ದೇವೆಯೇ? ಅದಿರಲಿ, ಮಾಧ್ಯಮಗಳ ಅಭಿಪ್ರಾಯವಾದರೂ ಏನು? ಅಲ್ಲಿನ ಜೈಲುವಾಸಿಗಳಲ್ಲಿ ಬ್ರಿಟಿಷರೂ ಇದ್ದಾರೆ. ಆದರೂ ಅಮೆರಿಕಾದ ಒತ್ತಡ ಬೆದರಿಕೆಗಳಿಂದಾಗಿ ಪ್ರಧಾನಿ ಬ್ಲೇರ್ ಮತ್ತು ವಿದೇಶಾಂಗ ಕಾರ್ಯದರ್ಶಿ, ಇಬ್ಬರೂ ಬಾಯಿಮುಚ್ಚಿ ಕುಳಿತಿದ್ದಾರೆ.

ಇರಾಕ್ ಮೇಲಿನ ಆಕ್ರಮಣವು ಅಂತರರಾಷ್ಟ್ರೀಯ ಕಾನೂನು ಕಟ್ಟಳೆಗಳನ್ನು ಉಪೇಕ್ಷಿಸಿ ಎಸಗಿದ ದರೋಡೆಕೋರ ಕೃತ್ಯ; ಅಮೆರಿಕಾದ ಸರಕಾರವೇ, ಆ ಪ್ರಭುತ್ವವೇ ಜರುಗಿಸಿದ ಭಯೋತ್ಪಾದಕ ಕೃತ್ಯ; ಮಾಧ್ಯಮವನ್ನು ದುರುಪಯೋಗಪಡಿಸಿಕೊಂಡು ಸುಳ್ಳಿನ ಸರಮಾಲೆಯನ್ನೇ ಸೃಷ್ಟಿಸಿ ಏಕಪಕ್ಷೀಯವಾಗಿ ತೀರ್ಮಾನಿಸಿ ಜಾರಿಗೊಳಿಸಿದ ನಾಚಿಕೆಗೇಡಿನ ಕೆಲಸ; ಮಧ್ಯಪ್ರಾಚ್ಯ ದೇಶಗಳನ್ನು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಪಿತೂರಿ. ಇದು ಸಾಲದೆಂಬಂತೆ, ಇರಾಕ್ ಜನತೆಯ ವಿಮೋಚನೆಗಾಗಿ ಈ ಕಾರ್ಯಾಚರಣೆಯನ್ನು ಕೈಗೊಳ್ಳಲಾಗಿದೆ ಎಂಬ ಬೊಬ್ಬೆ ಬೇರೆ. ಆ ನಾಡಿನಲ್ಲಿ ಈಗ ನಮಗೆ ಕಾಣಸಿಗುವುದು ಅತೀವ ಹಿಂಸೆ, ಬಾಂಬುಗಳ ಸಿಡಿತ, ಬರಿದಾಗುತ್ತಿರುವ ಯುರೇನಿಯಮ್ ನಿಕ್ಷೇಪ, ಹಸಿವು, ಸಂಕಟ, ಆಂತರಿಕ ಘರ್ಷಣೆಗಳು ಮತ್ತು ಸಾಮೂಹಿಕ ಕೊಲೆ. ಇಂದು ಸಾಮೂಹಿಕ ಕೊಲೆಗಾರರಾಗಿ ಬುಷ್ ಮತ್ತು ಬ್ಲೇರ್ ವಿಜೃಂಭಿಸುತ್ತಿದ್ದಾರೆ. ಇರಾಕ್‌ನಲ್ಲಿ ಕಡೆಯ ಪಕ್ಷ ಒಂದು ಲಕ್ಷ ಜನರು ಸಾವಿಗೀಡಾಗಿದ್ದಾರೆ. ಇದಕ್ಕೆ ಯಾವ ದಾಖಲೆಯೂ ಇಲ್ಲ. ''ಮೃತದೇಹಗಳನ್ನು ಎಣಿಸುವುದಕ್ಕೆ ನಾವಿಲ್ಲಿ ಬಂದಿಲ್ಲ'' ಎನ್ನುತ್ತಾನೆ ಟಾಮಿ ಫ್ರ್ಯಾಂಕ್ಸ್ ಎಂಬ ಅಮೆರಿಕಾದ ಒಬ್ಬ ಹುಂಬ ಜನರಲ್, ಪ್ರಶ್ನೆಯೊಂದಕ್ಕೆ ಉತ್ತರಿಸುತ್ತ. ಈ ಘರ್ಷಣೆಗಳಲ್ಲಿ ಎರಡು ಸಾವಿರ ಅಮೆರಿಕಾದ ಯೋಧರೂ ಸತ್ತಿದ್ದಾರೆ. ರಾತ್ರೋರಾತ್ರಿ ಆ ಮೃತದೇಹಗಳಿಗೆ ಗೋರಿಗಳನ್ನು ಕಟ್ಟಲಾಗುತ್ತಿದೆ. ಕೈಕಾಲು ಕಳೆದುಕೊಂಡಿರುವವರು ಯಾವುದೋ ಮೂಲೆಯಲ್ಲಿ ಕೊಳೆತು ನಾರುತ್ತಿರುತ್ತಾರೆ. ಸತ್ತವರಿಗೂ ಅಂಗವಿಕಲರಿಗೂ ಬಗೆಬಗೆಯ ಗೋರಿಗಳೇ 'ಆಶ್ರಯತಾಣ'!

ಈ ಎಲ್ಲ ಭಯಾನಕ ವಿವರಗಳು ಪಾಬ್ಲೊ ನೆರುಡನ 'ಐ ಆ್ಯಮ್ ಎಕ್ಸ್‌ಪ್ಲೇಯ್ನಿಂಗ್ ಎ ಫ್ಯೂ ಥಿಂಗ್ಸ್' ಎಂಬ ಕವನವನ್ನು ನೆನಪಿಸುತ್ತವೆ. ಏಕೆಂದರೆ, ಮುಗ್ಧ ನಾಗರಿಕರು ಬಾಂಬುಗಳಿಗೆ ತುತ್ತಾಗುವ ಬಗ್ಗೆ ಆ ಕವನದಲ್ಲಿರುವಂತಹ ಪ್ರಭಾವಪೂರ್ಣ ನಿರೂಪಣೆಗಳನ್ನು ಯಾವ ಸಮಕಾಲೀನ ಕಾವ್ಯಸೃಷ್ಟಿಯಲ್ಲಿಯೂ ಕಾಣೆ.

ಜಗತ್ತಿನೆಲ್ಲೆಡೆ ಭೂಭಾಗಗಳನ್ನು, ಸಾಗರಗಳನ್ನು, ವಾಯು ಮತ್ತು ಅಂತರಿಕ್ಷವನ್ನು ಸಂಪೂರ್ಣವಾಗಿ ನಿಯಂತ್ರಣದಲ್ಲಿಟ್ಟುಕೊಳ್ಳುವುದು ತನ್ನ ಸ್ಪಷ್ಟ ಗುರಿ ಎಂದು ಅಮೆರಿಕಾ ಮುಚ್ಚುಮರೆಯಿಲ್ಲದೆ ಘೋಷಿಸಿದೆ.

ಸ್ವೀಡನ್‌ಅನ್ನು ಹೊರತುಪಡಿಸಿದರೆ ಜಗತ್ತಿನ ೧೩೨ ರಾಷ್ಟ್ರಗಳಲ್ಲಿ ೭೦೨ ಮಿಲಿಟರಿ ನೆಲೆಗಳನ್ನು ಅಮೆರಿಕಾ ಹೊಂದಿದೆ. ಇವುಗಳಲ್ಲಿ ಕೇವಲ ೧೫ ನಿಮಿಷಗಳ ಅವಧಿಯೊಳಗೆ ನಿರ್ಧರಿಸಿ ಹಾರಿಸಬಹುದಾದ ಪರಮಾಣು ಬಾಂಬುಗಳನ್ನು ಹೊತ್ತಿರುವ ೨೦೦೦ ಕ್ಷಿಪಣಿಗಳನ್ನು ಆ ನೆಲೆಗಳಲ್ಲಿ ಇರಿಸಲಾಗಿದೆ. ಬ್ರಿಟನ್ ತನ್ನಲ್ಲಿರುವ ಟ್ರೈಡೆಂಟ್ ಕ್ಷಿಪಣಿಗಳಿಗೆ ಬದಲು ಇನ್ನೂ ಹೆಚ್ಚು ಮಾರಕಶಕ್ತಿ ಹೊಂದಿರುವ ಕ್ಷಿಪಣಿಗಳನ್ನು ತಯಾರಿಸಹೊರಟಿದೆ. ಈ ಕ್ರಮದ ಹಿಂದಿರುವ ಉದ್ದೇಶವಾದರೂ ಏನು? ಈ ಕ್ಷಿಪಣಿಗಳನ್ನು ಯಾರನ್ನು, ಯಾವ ರಾಷ್ಟ್ರಗಳನ್ನು ಗುರಿಪಡಿಸಿ ಇಡಲಾಗಿದೆ? ಬಿನ್ ಲಾಡೆನ್? ನೀವು? ನಾನು? ಚೀನಾ? ಪ್ಯಾರಿಸ್? ಅಮೆರಿಕಾದ ರಾಜಕೀಯ ಸಿದ್ಧಾಂತದ ಅಂತರ್ಯದಲ್ಲಿ ಯಾವ ಬಗೆಯ ಬಾಲಿಶ ತಿಳಿಗೇಡಿತನ ಅಡಗಿದೆಯೋ ಯಾರು ಬಲ್ಲರು!

ಆ ರಾಷ್ಟ್ರದಲ್ಲೇ ಕೋಟಿಗಟ್ಟಲೆಯಲ್ಲದಿದ್ದರೂ ಸಹಸ್ರಾರು ಜನರು ಸರಕಾರದ ರೀತಿನೀತಿಗಳ ಬಗ್ಗೆ ಬಹಿರಂಗವಾಗಿಯೇ ರೋಸಿಹೋಗಿದ್ದಾರೆ, ಕುಪಿತರಾಗಿದ್ದಾರೆ. ಆದರೆ ಅವರೆಲ್ಲರೂ ಇನ್ನೂ ಒಂದು ರಾಜಕೀಯ ಶಕ್ತಿಯಾಗಿ ಸಂಘಟಿತರಾಗಿಲ್ಲ. ಎಂದಿನಂತೆ ಆ ಜನರ ಆತಂಕ, ಅನಿಶ್ಚಿತತೆಗಳು ಕ್ರಮೇಣ ಉಡುಗಿಹೋದರೆ ಆಶ್ಚರ್ಯವಿಲ್ಲ. ಅಧ್ಯಕ್ಷ ಬುಷ್‌ನ ಹೇಳಿಕೆಗಳನ್ನು, ಭಾಷಣಗಳನ್ನು ಸಿದ್ಧಗೊಳಿಸಿಕೊಡುವವರು ಬಹಳ ನಿಪುಣರೆಂದು ನನಗೆ ತಿಳಿದಿದೆ. ಆದರೂ, ಏಕೋ ಏನೋ, ನಾನೂ ಆ ಕೆಲಸಕ್ಕೆ ಅರ್ಜಿ ಸಲ್ಲಿಸಬೇಕೆಂಬ 'ತುಮುಲ' ದಿನದಿನಕ್ಕೂ ಹೆಚ್ಚುತ್ತಿದೆ!

ಈ ಬುಷ್ ಎಂಬ ವಿಕೃತ ರಾಜಕಾರಣಿ ಟೀವಿಯಲ್ಲಿ ಲಾಡೆನ್‌ಅನ್ನು ಹೀನಾಯವಾಗಿ ಜರೆಯುವುದು, ಅಮೆರಿಕಾದ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ವೈಭವೀಕರಿಸಿರುವುದು, ತನ್ನ ಆಡಳಿತೆಯ ಮತ್ತು ಅಲ್ಲಿನ ಸಮಾಜದ ನೈತಿಕತೆಯನ್ನು ರಂಗುರಂಗಾಗಿ ಬಣ್ಣಿಸುವುದು, ಆತನ ಮಾತಿನ ವೈಖರಿ, ಎಲ್ಲವನ್ನೂ ವೀಕ್ಷಿಸುವುದೇ ನಿಜಕ್ಕೂ ಒಂದು ಮೋಜು.

ಬರಹಗಾರನ ಬದುಕು ಹಲವಾರು ಸೂಕ್ಷ್ಮತೆಗಳಿಂದ ಕೂಡಿರುತ್ತದೆ. ಅಲ್ಲಿ ಗೋಪ್ಯವೆಂಬುದಾಗಲಿ, ರಹಸ್ಯವೆಂಬುದಾಗಲಿ ಇರಲು ಸಾಧ್ಯವಿಲ್ಲ. ಬರಹಗಾರ ತಾನು ಬದ್ಧನಾಗಿರುವ ನಿಲುವುಗಳಿಗೆ ಕಡೆಯವರೆಗೂ ನಿಷ್ಠಾವಂತನಾಗಿ ಉಳಿದುಕೊಳ್ಳುವುದು ಅಷ್ಟು ಸುಲಭವಲ್ಲವೆನ್ನಿ.

ನಾವು ಕನ್ನಡಿಯ ಮುಂದೆ ನಿಂತು ನೋಡಿದರೆ ಕಾಣಬರುವ ಪ್ರತಿಬಿಂಬ, ''ಅಬ್ಬಾ, ಎಂತಹ ತದ್ರೂಪು! ಆ ಪ್ರತಿಬಿಂಬ ಎಷ್ಟು ನಿಖರವಾಗಿದೆ ಅಲ್ಲವೆ!'' ಎಂಬ ಭ್ರಮೆ ಮೂಡಿಸುತ್ತದೆ. ಕೂಡಲೇ ಕೂದಲೆಳೆಯಷ್ಟು ಪಕ್ಕಕ್ಕೆ ಸರಿದು ಮತ್ತೊಮ್ಮೆ ಕನ್ನಡಿಯತ್ತ ನೋಡಿಕೊಳ್ಳಿ. ಅಲ್ಲಿ ಗೋಚರವಾಗುವ ಪ್ರತಿಬಿಂಬ ಬೇರೆಯದೇ ಏನೋ ಎನ್ನಿಸಿಬಿಡುತ್ತದೆ. ವಾಸ್ತವದಲ್ಲಿ, ಹಾಗೆ ಗೋಚರವಾಗುತ್ತಲೇ ಹೋಗುವ ಬಿಂಬಗಳಿಗೆ ಕೊನೆಯೇ ಇರದು. ಆದರೆ, ಕೆಲವು ವೇಳೆ ಬರಹಗಾರನು ಕನ್ನಡಿಯನ್ನು ಒಡೆದುಹಾಕಬೇಕಾಗುತ್ತದೆ. ಏಕೆಂದರೆ, ಆ ಕನ್ನಡಿಯ ಇನ್ನೊಂದು ಬದಿಯಲ್ಲಿರುವ ನಿಜರೂಪ ನಮ್ಮನ್ನೇ ದಿಟ್ಟಿಸಿ ನೋಡುತ್ತಿರುತ್ತದೆ.

ಲೆಕ್ಕವಿಲ್ಲದಷ್ಟು ಅಡ್ಡಿ ಆತಂಕಗಳು ಎದುರಾದರೂ ಒಂದು ಸಮಾಜದ ಪ್ರಜೆಗಳಾಗಿ ಅಳುಕಿಲ್ಲದ, ಒಂದೇ ಸಮನಾದ, ನೇರ ದೃಷ್ಟಿಯ, ಬಿರುಸಾದ ಬೌದ್ಧಿಕ ಸಂಕಲ್ಪದಿಂದ ನಮ್ಮೊಳಗಿನ ಮತ್ತು ನಮ್ಮದೇ ಸಮುದಾಯಗಳ ಸತ್ಯತೆ ಅಥವಾ ಪ್ರಾಮಾಣ್ಯವನ್ನು ಅರ್ಥೈಸುವುದು ನಮ್ಮೆಲ್ಲರ ಆದ್ಯಕರ್ತವ್ಯವಾಗಿದೆ. ದಿನನಿತ್ಯದ ರಾಜಕೀಯ ಕ್ರಿಯೆಯಲ್ಲಿ ಅಂತಹ ನಿರ್ಧಾರವು ಮೈದಾಳದಿದ್ದರೆ ಈಗಾಗಲೇ ಕಣ್ಮರೆಯಾಗುತ್ತಿರುವ ಮಾನವ ಘನತೆ ಎಂಬ ಉದಾತ್ತ ಮೌಲ್ಯವನ್ನು ಮತ್ತೆ ನಮ್ಮದಾಗಿಸಿಕೊಳ್ಳುವ ಕನಸು ಎಂದೆಂದಿಗೂ ಕನಸಾಗಿಯೇ ಉಳಿದುಬಿಡುತ್ತದೆ.

**೨೦೦೫ರ ನೊಬೆಲ್ ಪಾರಿತೋಷಕ ಪಡೆದುಕೊಂಡ ಖ್ಯಾತ ನಾಟಕಕಾರ ಹೆರಾಲ್ಡ್ ಪಿಂಟರ್ ಸ್ವೀಡಿಷ್ ರಾಯಲ್ ಅಕಾಡೆಮಿ ಸದಸ್ಯರನ್ನುದ್ದೇಶಿಸಿ ಸ್ಟಾಕ್‌ಹೋಂನಲ್ಲಿ ಕಳೆದ ಡಿಸೆಂಬರ್ ೭, ೨೦೦೫ರಂದು ನೀಡಿದ ಉಪನ್ಯಾಸದ ಸಂಕ್ಷಿಪ್ತ ಅನುವಾದ.**


ಕನ್ನಡಕ್ಕೆ : ಎಸ್. ಸುರೇಂದ್ರ
೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲೋನಿ. ೩ನೇ ಬ್ಲಾಕ್, ಜಯನಗರ ಪೂರ್ವ, ಬೆಂಗಳೂರು - ೧೧

# ಯದ್ಭಾವಂ ತದ್ಭವತಿ

''ಒಕ್ಕಲಿಗರ ಪತ್ರಿಕೆ''ಯ ೧೯೨೮ರ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾಗಿದ್ದ ಪಂಡಿತ ತಾರಾನಾಥರ ಲೇಖನವನ್ನು ಒದಗಿಸಿಕೊಟ್ಟ ಡಾ|| ವಿಜಯಾ ಅವರಿಗೆ ಕೃತಜ್ಞತೆ ಸಲ್ಲುತ್ತದೆ. ತಾರಾನಾಥರ ತರ್ಕಮತಿಗೆ ತಲೆಬಾಗದವರಾರು !



**ಪಂಡಿತ ತಾರಾನಾಥ**

**ಭಾ**ವದಂತೆಯೇ ಗುಣಗತಿಗಳು. ಆದರೆ ಭಾವವೆಂದರೇನೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ವಿಚಾರವೋ ? ಅಲ್ಲ. ವಿವೇಕವೋ ? ಅದೂ ಅಲ್ಲ. ಇವುಗಳು ಮನಸ್ಸಿನಲ್ಲಿ ಮೇಲಿಂದ ಮೇಲಕ್ಕೇ ಸುಳಿದಾಡುವ ತರಂಗಗಳು. ಅವುಗಳಲ್ಲಿ ನಂಬಿಕೆಯು ದೃಢವಾದ ಮೇಲೆ ಭಾವವು ಹುಟ್ಟುವುದು. ಆದರೆ ಭಾವಕ್ಕೆ ವಿಚಾರ ವಿವೇಕಗಳೇ ಮೂಲವಾಗಿರಬೇಕಾಗಿಲ್ಲ. ಏನೇ ಇರಲಿ, ಹೇಗೆಯೇ ಇರಲಿ ಮನಸ್ಸಿನ ನಂಬಿಕೆಯು ದೃಢವಾಯಿತೆಂದರಾಯಿತು. ಭಾವವು ತಾನೇ ಉದಯಿಸುತ್ತದೆ. ಯಾವುದಾದರೂ ಒಂದು ವಸ್ತುವನ್ನು ಅಥವಾ ವಿಚಾರವನ್ನು ಕುರಿತು ಭಾವವು ಮೂಡುವವರೆಗೆ ಅನುಗುಣವಾದ ಕಾರ್ಯವನ್ನು ಮಾಡುವುದೂ ಚೆನ್ನಾಗಿ ಸಾಧ್ಯವಾಗಲಾರದು. ಭಾವವೇ ಕಾರ್ಯಸ್ಫೂರ್ತಿ, ಭಾವವೇ ಕೆಲಸಕ್ಕೆ ಬೆಂಬಲ.

ಭಾವವು ಬರೇ ನಂಬಿಕೆಯಿಂದಲೂ ಹುಟ್ಟಬಹುದು, ವಿಚಾರ ವಿವೇಕಗಳಿಂದಲೂ ಹುಟ್ಟಬಹುದು – ಎಂಬುದು ಸ್ಪಷ್ಟವಾಯಿತು. ಭಾವದಿಂದಲೇ ಕಾರ್ಯವೆಂಬುದೂ ತಿಳಿಯಿತು. ಈಗ ಮನುಷ್ಯನು ಪ್ರಗತಿಯೆಂಬ ತನ್ನ ಜನ್ಮ ಸಿದ್ಧವಾದ ಹಕ್ಕನ್ನು ಸಾಧಿಸಬೇಕಾದರೆ ಎಂತಹ ಭಾವವನ್ನು ತನ್ನಲ್ಲಿಟ್ಟುಕೊಳ್ಳಬೇಕು ಮತ್ತು ಭಾವವು ಯಾವ ರೀತಿಯಿಂದ ಕೆಲಸವನ್ನು ಪ್ರೇರೇಪಿಸಿ ನಡೆಸುತ್ತದೆ ಎಂಬ ಈ ಎರಡು ವಿಷಯಗಳನ್ನು ತಿಳಿದುಕೊಳ್ಳಬೇಕಾಗಿದೆ. ಸತ್ಯವೇ ಶಾಶ್ವತವಾದದ್ದು, ಸತ್ಯವೇ ಅಬಾಧಿತವಾದದ್ದು ಎಂಬ ವಿಷಯವು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತು. ಶಾಶ್ವತದಲ್ಲಿಯೇ ಸದಾನಂದವು ಇದೆಯೆಂದೂ ಮತ್ತು ಸದಾನಂದವೇ ಜೀವಿಯ ಸಾಧನವೂ ಆದರ್ಶವೂ ಆಗಿರತಕ್ಕದ್ದೆಂದೂ ಎಲ್ಲರಿಗೆ ಗೊತ್ತೇ ಇದೆ. ಆದುದರಿಂದ ಸತ್ಯಪಥವನ್ನೇ ತುಳಿಯಬೇಕೆಂದಾಯಿತು. ಆದರೆ ಈ ಸತ್ಯವು ಮೂಢನಂಬಿಕೆಗೆ ಗೋಚರವಾಗುವುದೋ ? ಇಲ್ಲ. ಅದನ್ನು ಕಾಣುವದು ವಿವೇಕದ ಅಧಿಕಾರ. ಆದಕಾರಣ, ವಿವೇಕದಿಂದ ಹುಟ್ಟಿದ ಭಾವವೇ ಸದ್ಭಾವ, ಯೋಗ್ಯವಾದ ಭಾವ. ವಿವೇಕದ ವಿಶಾಲವಾದ ನಿರ್ಮಲಾಕಾಶದಲ್ಲಿ ಉದಯಿಸಿದ ಭಾವಭಾಸ್ಕರನೇ ಪೂಜಾರ್ಹನು ಎಂಬುದರಲ್ಲಿ ಸಂದೇಹವೇ ಇಲ್ಲ.

ಭಾವವು ಯಾವ ರೀತಿಯಿಂದ ಕೆಲಸವನ್ನು ಮಾಡಿಸುತ್ತದೆಂದು ನೋಡುವಾ. ಅದರ ಕಾರ್ಯವು ಗುಪ್ತ ರೀತಿಯಿಂದ ಸಾಗುತ್ತದೆ. ಮನಸ್ಸಿಗೆ ಹಲವು ಸ್ಥಿತಿಗಳಿರುತ್ತವಾದರೂ ಇಲ್ಲಿ ಮುಖ್ಯವಾಗಿ ಎರಡನ್ನು ಮಾತ್ರ ವಿಮರ್ಶಿಸುವುದು ಅವಶ್ಯಕವಾಗಿದೆ. ವ್ಯಕ್ತ ಒಂದು, ಅವ್ಯಕ್ತ ಇನ್ನೊಂದು. ವ್ಯಕ್ತ ಸ್ಥಿತಿಯಲ್ಲಿ ನಾವು ವಿಚಾರಿಸುವದೆಲ್ಲವೂ ನಮಗೆ ಗೊತ್ತು. ನಾವು ಗಣಿತ, ಚರಿತ್ರೆ ಮುಂತಾದ ವಿಷಯಗಳನ್ನು ಕಲಿಯುವುದು ನಮಗೇ ವ್ಯಕ್ತವಾಗಿರುತ್ತದೆ. ನಮ್ಮ ಅನ್ನಸಂಪಾದನೆಗಾಗಲಿ ದೇಹ ಮತ್ತು ಆಸ್ತಿಗಳ ಬಚಾವಿಗಾಗಲಿ ಏನು ಮಾಡಬೇಕೆಂಬ ಉಪಾಯಗಳ ವಿಚಾರವು ನಮಗೆ ತಿಳಿಯುವಂತೆಯೇ ನಡೆಯುತ್ತದೆ. ವಿಚಾರವೆಂಬುದರ ಮುಖ್ಯಾಂಗಗಳಾಗಿರುವ ಕಾರಣ ಪರಿಣಾಮಗಳು ನಮಗೆ ತಿಳಿಯದೆ ಸಾಗುವದಿಲ್ಲ. ಆದರೆ ಮನಸ್ಸಿನ ಅವ್ಯಕ್ತ ಸ್ಥಿತಿಯು ಹೀಗಲ್ಲ. ಅವ್ಯಕ್ತ ಮನಸ್ಸಿನ ವ್ಯಾಪಾರಗಳು ಗುಪ್ತವಾಗಿರುತ್ತವೆ. ಅವುಗಳ ಪರಿಣಾಮವು ಹೊರಬಿದ್ದ ಮೇಲೆಯೇ ನಮಗೆ ಅವು ಪ್ರಕಟವಾಗುವವು. ಅವ್ಯಕ್ತ ಮನಸ್ಸಿನ ಕಾರ್ಯಕ್ಕೆ ಮೊದಲೇ ಏನೇನು ನಡೆಯುತ್ತದೋ ಅದು ತಿಳಿಯುವದಿಲ್ಲ. ಹೊಳೆಯುವದೂ ಇಲ್ಲ. ವಿಚಾರ ಸರಣಿಯು ಹ್ಯಾಗೆ ಎಲ್ಲಿದೆಯೋ ತಿಳಿಯದು. ಕೆಲಸವೇನೋ ಆಗುತ್ತದೆ. ಒಳಗೆ ಕಾರ್ಯಕ್ಕೆ ತಾಯಿಯಾದ ಚಿತ್ತವೃತ್ತಿಯು ಯಾವ ರೀತಿಯಿಂದ ನಡೆಯುತ್ತದೋ ಏನೋ – ಕಾರ್ಯವೇನೋ ಥಟ್ಟನೆ ಆಗಿ ತೋರಿಯೂ ಬರುತ್ತದೆ. ಇಂತಹ ಕಾರ್ಯವು ಗುಪ್ತ ಕಾರ್ಯ. ಅದರ ಮೊದಲನೆಯ ತರಗತಿಗಳು ಅವ್ಯಕ್ತವಾಗಿರುವದರಿಂದ ಅದನ್ನು ತಡೆಯುವದಾಗಲಿ ಬದಲಾಯಿಸುವದಾಗಲಿ ಕಷ್ಟಸಾಧ್ಯವೇ ಆಗಿದೆ. ಅನ್ನವು ಜೀರ್ಣವಾಗಿ ರಸ ರಕ್ತ ಮಾಂಸ ಮಜ್ಜಗಳಾಗುವದು ಈ ಗುಪ್ತ ಮನಸ್ಸಿನ ಪ್ರಭಾವದಿಂದಲೇ. ರುಚಿಕರವಾದ ಪದಾರ್ಥವನ್ನು ನೋಡಿದೊಡನೆಯಾಗಲಿ, ಒಗ್ಗರಣೆಯ ವಾಸನೆಯನ್ನು ಮೂಸಿದೊಡನೆಯಾಗಲಿ ಫಕ್ಕನೆ ಹೇಳದೆ ಕೇಳದೆ ಬಾಯಿಗೆ ನೀರುಬರುವದು ಈ ಅವ್ಯಕ್ತ ಮನೋಪ್ರಭಾವದಿಂದಲೇ. ಕಿವಿಯ ಹತ್ತಿರ ಸೊಳ್ಳೆಯ ಗಾಯನ ಕೇಳಿಬಂದೊಡನೆಯೇ ಕೈ ಆಚೆಕಡೆಗೆ ತಾನೇ ಬೀಸಿಕೊಂಡು ಹೋಗಿಬಿಡುತ್ತದೆ. ಮುಳ್ಳು ಚುಚ್ಚಿದೊಡನೆಯೇ ಕಾಲು ಫಕ್ಕನೆ ಎಳೆದುಕೊಳ್ಳುತ್ತದೆ. ಇಂತಹ ಸಕಲ ಕಾರ್ಯಗಳ ಪೂರ್ವದಲ್ಲಿ ಅದನ್ನು ಹೇಗೆ ಮಾಡಬೇಕು, ಏಕೆ ಮಾಡಬೇಕೆಂಬ ಶಾಂತ ವಿಮರ್ಶೆಯು ನಡೆಯುತ್ತದೋ ? ಇಲ್ಲ. ಅವೆಲ್ಲವೂ ಒಂದೇ ಪೆಟ್ಟಿಗೆ ಹಿಂದು ಮುಂದು ನೋಡದೆ ಕಾರ್ಯ ಪರಿಣಾಮಗಳಾಗಿಯೇ ತೋರುತ್ತವೆ. ಏನೋ ಒಂದು ಸೂಚನೆ (suggestion) ಆಗುವದೇ ತಡ, ಕಾರ್ಯವು ಯೋಚನೆಯೇ ಇಲ್ಲದೆ ಪರಿಣಮಿಸುತ್ತದೆ. ಇದು ಅವ್ಯಕ್ತ ಮನೋಪ್ರಭಾವ ಮತ್ತು ಈ ಪ್ರಾಂತ್ಯಕ್ಕೇ ಭಾವವೂ ಸೇರಿದೆ. ಆದುದರಿಂದ ಭಾವವು ವಿಚಾರದಂತೆ ಮೇಲಿಂದ ಮೇಲೆಯೇ ಸುಳಿಯುವದಿಲ್ಲ. ಕಾರ್ಯರೂಪವಾಗಿ ಪರಿಣಮಿಸಿಯೇ ತೀರುತ್ತದೆ.

ಜ್ಞಾನಾಜ್ಞಾನಗಳ ಪರಿವೆಯಿಲ್ಲದೆ ಯಾವ ವಿಷಯವೇ ಆಗಲಿ ಒಂದುಸಲ ವೃತ್ತಿಯಾಗಿ ಸುಳಿದು ದೃಢವಾದ ನಂಬಿಕೆಯಾಯಿತೆಂದರೆ ಅದು ಭಾವಸಾಮ್ರಾಜ್ಯಕ್ಕೆ ಸೇರಿಬಿಡುತ್ತದೆ. ಅದು ಅಲ್ಲಿಯೇ ಕೂತು ತನ್ನ ಗುಣವಾದ ಕಾರ್ಯವನ್ನು ವಿದ್ಯುದ್ವೇಗದಿಂದ ತೋರಿಸಿಯೇ ಬಿಡುತ್ತದೆ. ವಿಚಾರವು ಭಾವವಾಗಿ ಅವ್ಯಕ್ತ ಭೂಮಿಗೆ ಸೇರಿದಮೇಲೆ ಅದರ ಪ್ರಭಾವವನ್ನು ಜೀವನರಂಗದಲ್ಲಿ ತೋರದಂತೆ ತಡೆಯುವುದು ಸಾಧ್ಯವಲ್ಲ. ಆದುದರಿಂದ **ವಿಷಯಗಳನ್ನು ತುಲನಾತ್ಮಕ ಬುದ್ಧಿಯಿಂದ ವಿಮರ್ಶಿಸಿಯೇ ಅವುಗಳಲ್ಲಿ ನಂಬಿಕೆಯನ್ನಿಡುವುದುತ್ತಮ.** ಏಕೆಂದರೆ ಅಯೋಗ್ಯ ವಿಷಯಗಳು ಆ ಭೂಮಿಕೆಗೆ ಸೇರಿದರೆ ಅವು ಮಾನವನನ್ನು ಕೆಡಿಸದಿರವು. ಹಾಗೆಯೇ ಒಳ್ಳೇ ವಿಚಾರಗಳಲ್ಲಿಯೂ ಶ್ರದ್ಧೆಯನ್ನಿಡುವ ಶಕ್ತಿಯ ಕೊರತೆಯಿದ್ದಲ್ಲಿ ಮಾನವನು ಪ್ರಗತಿಗನುಕೂಲವಾದ ಕರ್ಮದಿಂದ ದೂರನಾಗಿ ಹಾಳಾಗುವನು.

ಇದುವರೆಗೆ ಭಾವಪ್ರಭಾವದ ತತ್ವವನ್ನು ವಿಮರ್ಶಿಸಿದ್ದಾಯಿತು. ಯಾವ ಪ್ರಕಾರವಾದ ನಂಬಿಕೆಯು ಯೋಗ್ಯವಾದದ್ದೆಂದು ಮೇಲಿನ ವಾಕ್ಯಗಳಿಂದ ಸ್ಪಷ್ಟವಾಗಿರಬೇಕು. ಈಗ ಸಾಧನೆಯ ಅಂಗವನ್ನು ಕುರಿತು ಯೋಚಿಸಬೇಕಾಗಿದೆ. ಅಕಸ್ಮಾತ್ತಾಗಿ ಹಲವು ವಿಷಯಗಳು ಯುಕ್ತವಾಗಲಿ ಅಯುಕ್ತವಾಗಲಿ ನಂಬಿಕೆಯ ಮೂಲಕ ಭಾವಗಳಾಗಿ ಪರಿಣಮಿಸುತ್ತವೆಂಬುದನ್ನು ತೋರಿಸಿದ್ದಾಗಿದೆ. ಈಗ ಯೋಗ್ಯವಾದ ಶ್ರದ್ಧೆಯನ್ನೂ ತನ್ಮೂಲಕ ಭಾವವನ್ನೂ ಮನಸ್ಸಿನಲ್ಲಿ ಹೇಗೆ ಉದಯಿಸಬೇಕು ಎಂಬುದನ್ನು ನೋಡೋಣ. ಯಾವುದಾದರೊಂದು ಕಾರ್ಯವನ್ನು ನಾವು ಮಾಡಿದರೆ ಅದಕ್ಕೆ ತಕ್ಕ ಭಾವವು ನಮ್ಮಲ್ಲಿ ಹುಟ್ಟುವದು ಸಹಜ. ಯಾವದೇ ಒಂದು ವಿಚಾರವನ್ನಾಗಲಿ ಆಚಾರವನ್ನಾಗಲಿ ಅಸಹ್ಯವೆಂದಿಟ್ಟುಕೊಂಡರೆ ಅದರ ವಿಷಯವು ಮನಸ್ಸಿಗೆ ಬಂದೊಡನೆಯೇ ನಮ್ಮಲ್ಲಿ ತಿರಸ್ಕಾರ ಬುದ್ಧಿಯು ಹುಟ್ಟುತ್ತದೆ. ಆದರೆ ಅದನ್ನೇ ಅಸಹ್ಯವೆಂದು ಜಪಿಸುತ್ತ ಆ ಭಾವಕ್ಕೆ ವಿರುದ್ಧವಾದ ಕಾರ್ಯವನ್ನು ಮಾತ್ರ ಮಾಡುತ್ತ ಹೋದರೆ ಏನಾಗುವದು ? ಮನಸ್ಸಿಗೊಪ್ಪುವದೊಂದು ಮಾಡುವದಿನ್ನೊಂದು. ಇದರಿಂದ ಕಾರ್ಯಕ್ಕೆ ಬೇಕಾದ ಮನೋಬಲವು ಬೆಂಬಲಾಗಿರದೆ ಕಾರ್ಯವು ಉತ್ತಮವಾಗಲಾರದು. ಹಾಗೆಯೇ ಮನಸ್ಸಿಗೆ ಉತ್ಸಾಹವಿಲ್ಲದಿರುವುದರಿಂದ ಆ ಕಾರ್ಯಾನುಭವದ ಮೂಲಕ ಮನಸ್ಸೂ ಅರಳಲಾರದು. ಭಾವಕ್ಕೆ ವಿರುದ್ಧವಾದ ಕಾರ್ಯದಿಂದ ಮನಸ್ಸೂ ಅರಳದೆ

ಮುದುರುವದು, ಕಾರ್ಯವೂ ಬಿಟ್ಟಿ ಸಾಗಿಸಿದಂತಾಗುವುದು; ಮೊದಲನೆಯದರಿಂದ ತನಗೆ ಪ್ರಗತಿಯಿಲ್ಲ, ಎರಡನೆಯದರಿಂದ ಇತರರಿಗೂ ಸಾಕಷ್ಟು ಉಪಯೋಗವಿಲ್ಲ. ಪರಿಣಾಮ ವೇನು ? **ಮನಸ್ಸಿನ ಪಾಲಿಗೆ ದೌರ್ಬಲ್ಯ, ಕರ್ಮರಂಗದಲ್ಲಿ ಅಕೌಶಲ್ಯ.** ಧರ್ಮಜೀವನಕ್ಕೆ ಮನಸ್ಸೇ ಮೂಲ, ಅಂದ ಮೇಲೆ ಧರ್ಮಕರ್ಮಗಳೆರಡೂ ಹಾಳಾಗುವವಲ್ಲವೇ ? ''ಯೋಗಃ ಕರ್ಮಸು ಕೌಶಲಂ'' ಎಂದು ಶ್ರೀಕೃಷ್ಣನು ಹೇಳಿರುತ್ತಾನೆ. ಹೀಗಿರುತ್ತ, ಉತ್ಸಾಹ ಹೀನವಾದ ಕರ್ಮರಂಗದಲ್ಲಿ ಯೋಗವಿರುವದೆಂತು ? ಯೋಗರಾಹಿತ್ಯವೇ ಅಧೋಗತಿ.

ನಮ್ಮಲ್ಲಿ ನಾಲ್ಕು ವರ್ಣದವರು ಹಾಳಾದುದೂ ಪ್ರಾರಬ್ಧ ಮಂತ್ರವನ್ನೇ ಜಪಿಸುತ್ತ ಅನಿವಾರ್ಯವೆಂದಿಟ್ಟುಕೊಂಡು ಭಾವಕ್ಕೆ ವಿರುದ್ಧವಾದ ಕಾರ್ಯ, ಕಾರ್ಯಕ್ಕೆ ವಿರುದ್ಧವಾದ ಭಾವದಿಂದಲೇ. ಬ್ರಾಹ್ಮಣರು ಜ್ಞಾನ ವೈರಾಗ್ಯಗಳನ್ನು ಭಾವ ಸಾಮ್ರಾಜ್ಯದಲ್ಲಿ ಇಟ್ಟುಕೊಂಡು ವೇದಾಂತವನ್ನು ಆಡಿದರೂ ವೇತನಾಂತವನ್ನು ನೋಡಲಿಕ್ಕಿಳಿದು ಹಾಳಾಗಿ ವೇದನಾಂತಕ್ಕೆ ಈಗ ಮುಟ್ಟಿರುತ್ತಾರೆ. ಬ್ರಾಹ್ಮಣೇತರರು ಶುಷ್ಕವಾದ ಮಾತುಗಳಲ್ಲಿ ನಂಬಿಕೆಯನ್ನಿಟ್ಟುಕೊಂಡು ''ನಾವು ಕಡಿಮೆಯವರು'' ಎಂದು ಭಾವಿಸುತ್ತ ದುರ್ಬಲರಾದರು. ತಮ್ಮ ಕರ್ಮಗಳಿಗೆ ವಿರುದ್ಧವಾದ ಭಾವಗಳಿಂದ ಮತ್ತು ಭಾವ ವಿರುದ್ಧವಾದ ಕರ್ಮಗಳಿಂದ ಆತ್ಮವಂಚನೆಯನ್ನು ಮಾಡಿಕೊಂಡು ಹೆಮ್ಮೆಯಿಂದ ಬ್ರಾಹ್ಮಣರು ಕೆಟ್ಟರು. ಅರ್ಥವಿಲ್ಲದ ದೈನ್ಯದಿಂದ 'ದಾಸೋಹಂ' ಎನ್ನುತ್ತ ಬ್ರಾಹ್ಮಣೇತರರು ಅಧೋಗತಿಯನ್ನೈದಿದರು. ಬ್ರಾಹ್ಮಣರು ಅವರನ್ನು ಕೆಡಿಸಿದರು ಎಂದು ತಿಳಿಯುವದು ಅಯುಕ್ತವಾದ ಮಾತು. ಯಾಕೆಂದರೆ ಕೆಡಿಸುವುದಕ್ಕಾಗಲಿ ಉದ್ಧರಿಸುವದಕ್ಕಾಗಲಿ ಶಕ್ತಿಯು ಬೇಕು. ಶಕ್ತಿಯು ಎರಡು ವಿಧವಾದದ್ದು. ಅಧ್ಯಾತ್ಮಶಕ್ತಿಯೊಂದು ಭೌತಿಕಶಕ್ತಿ ಇನ್ನೊಂದು. ಮೊದಲನೆಯದಕ್ಕೆ ಇತರರನ್ನು ಹಾಳುಮಾಡುವ ವಿಚಾರವು ಸ್ವಪ್ನದಲ್ಲಿಯೂ ಬರಲಾರದು. ಅದು ಜಗದೋದ್ಧಾರಕ ಶಕ್ತಿ. ಅದು ಬ್ರಾಹ್ಮಣರಿಗಿದ್ದಿದ್ದರೆ ಅವರಿಂದ ಜಗತ್ತಿನ ಉದ್ಧಾರವೇ ಆಗುತ್ತಿತ್ತು. ಈಗ ಉಳಿಯಿತು ಎರಡನೆಯದು. ಅದು ಬಾಹುಬಲದಿಂದಲೂ ಧನ ಬಲದಿಂದಲೂ ಸಮೂಹ ಬಲದಿಂದಲೂ ಒಡಗೂಡಿದ ಶಕ್ತಿ. ಈ ಬಲಗಳು ಯಾರಿಗೆ ಅಧಿಕವಾಗಿದ್ದವು ? ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಕೂಡಿದರೆ ಈ ಮೂರು ಬಲಗಳಿಂದ ಒಡಗೂಡಿದ ಭೌತಿಕ ಶಕ್ತಿಯೂ ಬ್ರಾಹ್ಮಣೇತರರ ಬೆಂಬಲವಾಗಿಯೇ ನಿಂತಿತ್ತಷ್ಟೆ. ಈಗಲೂ ಹಾಗೆಯೇ ಇದೆಯಷ್ಟೆ. ಇಷ್ಟಿದ್ದು ಅಧ್ಯಾತ್ಮಜೀವನದಿಂದ ಚ್ಯುತಿಗೊಂಡ ಬ್ರಾಹ್ಮಣರಿಂದ ಬ್ರಾಹ್ಮಣೇತರರ ಅಧೋಗತಿ ಯುಂಟಾಗುವುದು ಹೇಗೆ ? ಇದು ಅಯುಕ್ತಿಕವಾದ ಬರಿಯ ಮಾತು. ನಿಜವಾಗಿ ನೋಡಿದರೆ ''ಯದ್ಭಾವಂ ತದ್ಭವತಿ'' ನಾಲ್ಕು ವರ್ಣದವರೂ ತಮ್ಮ ಅಜ್ಞಾನದಿಂದಲೇ ಅಯುಕ್ತ ಗರ್ವ, ದೈನ್ಯಗಳಿಂದ ಹಾಳಾಗಿರುತ್ತಾರೆ. ಈಗ ತುಸು ಜಾಗ್ರತೆಯುಂಟಾದರೂ **ಉದ್ದೇಶ, ಉಪಾಯಗಳು ಇನ್ನೂ ಸಯುಕ್ತಿಕವಾಗಿಲ್ಲ.** ಪ್ರಗಲ್ಭ ವಿಚಾರದಿಂದ ಮಾರ್ಗ ವನ್ನೆಲ್ಲರೂ ಕಂಡುಹಿಡಿಯಬೇಕು. ಜ್ಞಾನ ತಪೋಬಲಗಳನ್ನು ಮರೆತು ದುಡ್ಡು ದುಗ್ಗಾಣಿ ಬಿರುದುಗಳ ಆಸೆಯಿಂದ ಬ್ರಾಹ್ಮಣರು ಹಾಳಾದರು. ಈಗ ಇತರರೂ ದುರ್ದೈವದಿಂದ ಆ ಹಾದಿಗೆ ಬಿದ್ದಿದ್ದಾರೆ. ಆದರಿಂದ ತುಸು ಕಾಲ ಸುಖವು ತೋರಿದರೂ ಅದು ಯಾರಿಗೂ ಹಿತಕರವಲ್ಲ. ಅದು ಅನುಕೂಲ ಮಾರ್ಗ. ಆದರೆ ಅಜೇಯ್ಯವಾದ ಬಲವನ್ನು ಕೊಡುವುದು ಜ್ಞಾನಮಾರ್ಗ, ಸತ್ಕರ್ಮಮಾರ್ಗ, ಸ್ವಪರಹಿತಮಾರ್ಗ. ಅದರಿಂದಲೇ ಮನೋದೌರ್ಬಲ್ಯವು ನಾಶವಾಗಿ ವಿಚಾರವು ಪ್ರಫುಲ್ಲಿತವಾಗಿ ಕರ್ಮ ರಂಗವು ಕುಶಲವಾಗುವುದು. **ಎಲ್ಲರೂ ಭಾವ ಕೆಟ್ಟು ತಾವೂ ಕೆಟ್ಟರು. ಈಗೆಲ್ಲರೂ ಭಾವ ಶುದ್ಧಿಯಿಂದಲೇ ಮೇಲಕ್ಕೇಳಬೇಕು.** ಬಲಾಢ್ಯರಾಗಬೇಕು. ದಾಸ್ಯದ ಸಂಕೋಲೆಗಳನ್ನು ಹರಿದು ಹಾಕಬೇಕು. ಸ್ವತಂತ್ರರಾಗಬೇಕು. ದ್ವೇಷದಿಂದ ಈ ಕಾರ್ಯವಾಗಲಿಕ್ಕಿಲ್ಲ. ಪ್ರೇಮದಿಂದಲೂ ಜ್ಞಾನದಿಂದಲೂ ಆಗತಕ್ಕದ್ದು. ಭಾರತೀಯರೆಲ್ಲರಲ್ಲಿಯೂ ಸದ್ಭಾವವು ಉದಯಿಸಲಿ ! ■



## ಮಹಾಮಾಯಿ

ಮಾಯೆಯೊಳಗಿಳಿದು ಮಾಯವಾಗುವ ತವಕ
ಪೀಠ ನಾಮವು ನಶಿಸಿ ಹುಟ್ಟಿತ್ತು ತಳಮಳ ನಡುಕ
ನಿರ್ವಾತದೊಳಗಿದ್ದು ಬಾಯಿ ಮುಚ್ಚಲು ಬರದು
ಕರ್ಮಕ್ಕೆ ಪ್ರತಿಫಲವ ಅನುಭವಿಸು ಬಂಧು

ಲೋಕ ನಿಜವಲ್ಲ ಇದರಾಟಗಳು ಮಿಥ್ಯವೆಂದೆನುತ
ಶತಮಾನಗಳಿಂದ ಬೋಧಿಸುತ ದ್ವೈತ ಅದ್ವೈತ ಸಾರ
ಕರದಲ್ಲಿ ಮಡಿಕೋಲು ಕಠಿಣ ಮಂತ್ರೋಚ್ಚಾರ
ಕೇಳುಗರು ನಿಂತಿಹರಿನ್ನೂ ಕೋಲಳತೆಯ ದೂರ

ಅಡ್ಡ ಪಲ್ಲಕ್ಕಿಗಳು ಉದ್ದ ನಮನಗಳು ಹೋಮ ಹವನ
ಪವಿತ್ರ ಮಠದಾವರಣ ಶಂಖ ಜಾಗಟೆಗಳ ರಿಂಗಣ
ಕೋಟಿ ನಗನಾಣ್ಯ ರೂಪಾಯಿ ತುಂಬಿ ತುಳುಕಿದೆ ಹರಿವಾಣ
ತೆರೆಯ ಮರೆಯಲ್ಲಿ ಷಡ್ಯಂತ್ರ ಹುನ್ನಾರಗಳ ಬಿನ್ನಾಣ

ದುಡಿಜನಾಂಗವು ಬೆಳೆದ ಭತ್ತವನುಂಡು
ಮಡಿಜನಾಂಗವು ಪಟ್ಟಾಂಗ ಹೊಡೆಯುತ ಬಂದು
ಪುರಾಣಗಳ ಕಾಗೆ ಗುಬ್ಬಕ್ಕನ ಕಥೆ ಮಾಡಿ ಹಾಡಿ
ಸೀಮೋಲ್ಲಂಘನವಾಯಿತು ಮುಗ್ಧರ ಬುದ್ಧ ನುಡಿ

ಪೀಠ ಸಿಂಹಾಸನದೊಳು ಮೆರೆದು ಗತ್ತಿನಲಿ
ಈಗ ಸೆರೆವಾಸ ಅದೇ ಕರ್ಮಭೂಮಿಯಲಿ
ಅಮಾಯಕ ಜೀವಬಲಿ ದೇವಸನ್ನಿಧಿಯಲ್ಲಿ
ರಕುತ ನುಂಗಿ ಕಪ್ಪಾಗಿದೆ ಕೇಸರಿಯ ವಲ್ಲಿ

ಸಂಚಿತ 'ಸತ್ ಕರ್ಮ' ಬರಿದಾಯಿತೆ ಗುರುವೆ ?
ಚಕ್ರಬಡ್ಡಿಯ ಜೊತೆಗೆ ಹಿಂತಿರುಗಿ ಹೀಗೆ
ಆಳರಸರದಲ್ಲ ಬಹುಜನರ ಕಾಲವಿದು
ಜಗದ್ಗುರುವಿಗಿಂತ ಕಾನೂನು ದೊಡ್ಡದು

ಜಗವ ಸುತ್ತುವ ಮಾಯೆ ಗುರುವಿಗೇಕೆ ಸುತ್ತಿತು ?
ಶೂದ್ರ ಪ್ರಶ್ನೆಗೆ ಉತ್ತರ ಮುಂದೊಮ್ಮೆ ಸಿಕ್ಕೀತು
'ಅಹಂ ಬ್ರಹ್ಮಾಸ್ಮಿ', ಎಲ್ಲ ನಶ್ವರ, ಬರಿ ಮಿಥ್ಯ
'ಆಸೆ ದುಃಖಕೆ ಮೂಲ', ಇದುವೆ ಯುಗದ ಸತ್ಯ.

ಆರ್. ಟಿ. ಶರಣ್, ೧-೮೬೭/೩೮, ವೆಂಕಟೇಶ ನಗರ, ಗುಲಬರ್ಗಾ

# ಆರ್ಥಿಕ ಸಮೀಕ್ಷೆ ಜನವರಿ ೨೦೦೬

**ಡಾ|| ಟಿ. ಆರ್. ಚಂದ್ರಶೇಖರ**

ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಭಾರತದ ಮತ್ತು ಕರ್ನಾಟಕದ ಆರ್ಥಿಕತೆಗಳೆರಡೂ 'ಸಮೃದ್ಧಿ-ಸಂತೃಪ್ತಿ'ಯಿಂದ ಬೀಗುತ್ತಿರುವಂತೆ ಕಾಣುತ್ತಿವೆ. ಆರ್ಥಿಕ ಸೂಚಿಗಳಾದ ವರಮಾನ-ಉತ್ಪಾದನೆಗಳ ಮೂಲಕ ಮಾಪನ ಮಾಡಿದರೆ ನಮ್ಮ ಆರ್ಥಿಕತೆ 'ದಷ್ಟ-ಪುಷ್ಟ'ವಾಗಿ ಇರುವುದು ಕಂಡುಬರುತ್ತದೆ. ಪ್ರಸ್ತುತ ೨೦೦೫-೦೬ನೆಯ ಸಾಲಿನಲ್ಲಿ ರಾಷ್ಟ್ರದ ಜಿಡಿಪಿಯ ಬೆಳವಣಿಗೆಯ ಪ್ರಮಾಣವು ಶೇ. ೭.೫ರಷ್ಟಾಗಬಹುದೆಂದು ವಿತ್ತಮಂತ್ರಿ ಪಿ. ಚಿದಂಬರಂ ಭವಿಷ್ಯ ನುಡಿಯುತ್ತಿದ್ದಾರೆ. ಅನೇಕ ಸಮೀಕ್ಷೆಗಳೂ ಇದನ್ನು ದೃಢಪಡಿಸುತ್ತಿವೆ. ಇದೇ ಸಾಲಿನಲ್ಲಿ ಕೃಷಿ ಕ್ಷೇತ್ರದ ಬೆಳವಣಿಗೆಯು ಶೇ. ೩ರಿಂದ ಶೇ. ೩.೫ರಷ್ಟಾಗಬಹುದೆಂದು ನಿರೀಕ್ಷಿಸಲಾಗಿದೆ. ವಿದೇಶೀ ವಿನಿಮಯ ನಿಧಿಯು ಬಲೂನು ಊದಿದಂತೆ ಊದುತ್ತಿದೆ. ವಿದೇಶಗಳಲ್ಲಿ ನೆಲೆ ನಿಂತು ತಮ್ಮ ದುಡಿಮೆಯಲ್ಲಿ ಉಳಿತಾಯ ಮಾಡಿ ಕಳೆದ ವರ್ಷ ದೇಶಕ್ಕೆ ಅವರು ರವಾನಿಸಿದ ವರಮಾನ ೨೨ ಬಿಲಿಯನ್ ಡಾಲರ್ (೯೯,೦೦೦ ಕೋಟಿ ರೂ.) ಎಂದು ವಿಶ್ವ ಬ್ಯಾಂಕ್ ತಿಳಿಸಿದೆ. ಶೇರು ಮಾರುಕಟ್ಟೆಯ ಅಬ್ಬರ-ಉಬ್ಬರ ದಾಖಲೆಯತ್ತ ಸಾಗುತ್ತಿದೆ.

### ಇನ್ನೊಂದು ಹಸಿರುಕ್ರಾಂತಿ

ಜನವರಿ ೨೦೦೬ರಲ್ಲಿ ಅಭಿವೃದ್ಧಿಯ ದೃಷ್ಟಿಯಿಂದ ನಡೆದ ಬಹು ದೊಡ್ಡ ಸಂಗತಿಯೆಂದರೆ ೯೩ನೆಯ ಭಾರತೀಯ ವಿಜ್ಞಾನ ಕಾಂಗ್ರೆಸ್‌ನ ಮಹಾಧಿವೇಶನ. ಈ ಅಧಿವೇಶನದಲ್ಲಿ ಮೂವರು ದಿಗ್ಗಜರು ಜನರ ಅಭಿವೃದ್ಧಿಗೆ ಸಂಬಂಧಿಸಿದಂತೆ ಬೀಜಮಾತುಗಳನ್ನಾಡಿದ್ದಾರೆ. ಸದರಿ ಅಧಿವೇಶನವನ್ನು ಉದ್ಘಾಟಿಸುತ್ತಾ ಪ್ರಧಾನ ಮಂತ್ರಿ ಡಾ|| ಮನಮೋಹನ ಸಿಂಗ್ ಇನ್ನೊಂದು ಹಸಿರುಕ್ರಾಂತಿಗೆ ಕರೆಕೊಟ್ಟಿದ್ದಾರೆ. ಅಲ್ಲಿನ ಗೋಷ್ಠಿಯೊಂದರಲ್ಲಿ ಮಾತನಾಡುತ್ತಾ ಕೃಷಿತಜ್ಞ ಎಂ.ಎಸ್. ಸ್ವಾಮಿನಾಥನ್ ಕೃಷಿಗೆ ಸಂಬಂಧಿಸಿದಂತೆ ಭಾರತೀಯ ವಾಣಿಜ್ಯ ಸಂಸ್ಥೆ (ಐಟಿಒ)ಯೊಂದನ್ನು ಸ್ಥಾಪಿಸುವ ಜರೂರನ್ನು ಕುರಿತು ಮಾತಾಡಿದ್ದಾರೆ. ವಿಶ್ವಸಂಸ್ಥೆಯ ಆಹಾರ ಮತ್ತು ಕೃಷಿ ಸಂಸ್ಥೆ (ಎಫ್‌ಎಒ)ಯ ಮಹಾ ನಿರ್ದೇಶಕ ಜಾಕ್ವಿಸ್ ಡೈಯೊಪ್ ಅದೇ ಅಧಿವೇಶನದಲ್ಲಿ ಹಸಿವಿನಿಂದ ನರಳುತ್ತಿರುವವರಿಗೆ ಆಹಾರ ಭದ್ರತೆಯೊದಗಿಸುವಲ್ಲಿ ಭಾರತೀಯ ವಿಜ್ಞಾನಿಗಳು ಮಹತ್ವದ ಪಾತ್ರ ನಿರ್ವಹಿಸಬೇಕಾಗಿದೆಯೆಂದು ಕರೆ ನೀಡಿದ್ದಾರೆ. ಪ್ರಧಾನಿ ಡಾ|| ಸಿಂಗ್ ಅವರು ೨೦೦೫ನೆಯ ಸಾಲಿನ ಪ್ರಗತಿ ಪರಿಶೀಲನಾ ಸಭೆಯಲ್ಲಿ ಮಾತನಾಡುತ್ತಾ ೨೦೦೬ನೆಯ ಸಾಲಿಗೆ 'ರೋಜ್‌ಗಾರ್ ಬಡಾವೋ' ಘೋಷಣೆ ನೀಡಿದ್ದಾರೆ. ಬಜೆಟ್ ಪೂರ್ವ ಚರ್ಚೆಗಳಲ್ಲಿ ಭಾಗವಹಿಸುತ್ತಿರುವ ವಿತ್ತಮಂತ್ರಿ ಪಿ. ಚಿದಂಬರಂ ಮುಂದಿನ ಸಾಲಿನ ಬಜೆಟ್ಟು ಕೃಷಿಗೆ, ಗ್ರಾಮೀಣ ಪ್ರದೇಶಕ್ಕೆ ಅಭಿಮುಖವಾಗಿರುತ್ತದೆ ಎಂದು ಸೂಚನೆ ನೀಡಿದ್ದಾರೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ರಾಜ್ಯದಲ್ಲಿ ತಜ್ಞರ ಸಮಿತಿಯೊಂದು ಕೇಂದ್ರ ಯೋಜನಾ ಆಯೋಗದ ನೆರವಿನಿಂದ ಸಿದ್ಧಪಡಿಸಿರುವ 'ಕರ್ನಾಟಕ ಅಭಿವೃದ್ಧಿ ವರದಿ'ಯನ್ನು ಆಯೋಗದ ಉಪಾಧ್ಯಕ್ಷ ಡಾ|| ಮಾಂಟೆಕ್ ಸಿಂಗ್ ಅಹ್ಲುವಾಲಿಯಾ ಅವರಿಗೆ ಜನವರಿ ೨೦೦೬ರಲ್ಲಿ ಸಲ್ಲಿಸಿದೆ. ಕರ್ನಾಟಕದ ಅಭಿವೃದ್ಧಿಯ ಬಗ್ಗೆ ಚರ್ಚೆ ಮಾಡುತ್ತಾ ವರದಿಯಲ್ಲಿ ತಜ್ಞರು ಒಣಭೂಮಿ ಬೇಸಾಯದ ಅಭಿವೃದ್ಧಿ ಕುರಿತಂತೆ ಅನೇಕ ಸಲಹೆಗಳನ್ನು ನೀಡಿದ್ದಾರೆ.

ಭಾರತದ ಆರ್ಥಿಕತೆ ಕುರಿತಂತೆ ಡಾ|| ಸಿಂಗ್ ಹೇಳಿರುವ ಮಾತುಗಳಲ್ಲಿ ಮತ್ತು ಕರ್ನಾಟಕದ ಅಭಿವೃದ್ಧಿ ವರದಿಯಲ್ಲಿನ ಚರ್ಚೆಯಲ್ಲಿ ಸಮಾನವಾಗಿ ಕಂಡುಬರುವ ಒಂದು ಅಂಶವನ್ನು ನಾವು ಗುರುತಿಸಬಹುದಾಗಿದೆ. ರಾಷ್ಟ್ರದ ಜಿಡಿಪಿಗೆ ೧೯೫೦ರಲ್ಲಿ ಕೃಷಿಯಿಂದ ಪ್ರಾಪ್ತವಾಗುತ್ತಿದ್ದ ವರಮಾನ ಶೇ. ೫೫. ಇಂದು ಅದರ ಕೊಡುಗೆ ಶೇ. ೨೦ಕ್ಕೆ ಇಳಿದಿದೆ. ಅದೇ ರೀತಿ ಕರ್ನಾಟಕದ ಜಿಎಸ್‌ಡಿಪಿಗೆ ೧೯೯೩-೯೪ರಲ್ಲಿ ಕೃಷಿಯಿಂದ ಹರಿದುಬರುತ್ತಿದ್ದ ವರಮಾನದ ಪ್ರಮಾಣ ಶೇ. ೩೪.೨೯ ಆದರೆ ೨೦೦೨-೦೩ರಲ್ಲಿ ಅದರ ಕೊಡುಗೆ ಕೇವಲ ಶೇ. ೨೨.೩೬. ಆದರೆ ಕೃಷಿಯನ್ನು ಅವಲಂಬಿಸಿಕೊಂಡಿರುವ ಜನರ ಪ್ರಮಾಣ ಇಂದಿಗೂ ರಾಷ್ಟ್ರಮಟ್ಟದಲ್ಲಿ ಶೇ. ೫೮.೪ರಷ್ಟಾಗಿದ್ದರೆ ಕರ್ನಾಟಕದಲ್ಲಿ ಅವರ ಪ್ರಮಾಣ ಶೇ. ೫೫.೮. ಇದು ನಿಜವಾದ ಸಮಸ್ಯೆ. ಡಾ|| ಮನಮೋಹನ ಸಿಂಗ್ ಇದನ್ನು ಕುರಿತಂತೆ ಚರ್ಚಿಸಿದ್ದಾರೆ. ಕರ್ನಾಟಕ ಅಭಿವೃದ್ಧಿ ವರದಿಯಲ್ಲಿ ಇದರ ಬಗ್ಗೆ ವಿಶ್ಲೇಷಣೆಯಿದೆ. ದಿ. ರಾಮಕೃಷ್ಣ ಹೆಗಡೆ ಸ್ಮಾರಕ ಉಪನ್ಯಾಸ ನೀಡಿದ ಲಾರ್ಡ್ ಮೇಘನಾದ ದೇಸಾಯಿ ಇದನ್ನು ಗುರುತಿಸಿದ್ದಾರೆ.

> ಒಣಭೂಮಿ ಬೇಸಾಯ, ಬರಗಾಲ, ದಿನಗೂಲಿ, ವಲಸೆ, ಉಪವಾಸ, ಹಸಿವು, ಹಿಂದುಳಿದ ಪ್ರದೇಶ, ಆಹಾರ, ಮಹಿಳೆಯರು ಮುಂತಾದವು ಪರಸ್ಪರ ಸಂಬಂಧವಿರುವ ಸಂಗತಿಗಳಾಗಿವೆ. ಇವುಗಳ ಬಗ್ಗೆ ಮಾತನಾಡುವುದು ಇಂದು ಅಪರಾಧವಾಗಿಬಿಟ್ಟಿದೆ. ಕರ್ನಾಟಕದ ಸಂದರ್ಭದಲ್ಲಿ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ, ಮೆಟ್ರೊ ರೈಲು, ಥಳಥಳಿಸುವ ರಸ್ತೆಗಳು, ಮೂಲ ಸೌಲಭ್ಯ, ಒಳ ಮೀಸಲಾತಿ ಮುಂತಾದ ಪ್ರತಿಷ್ಠಿತರ ಇಷ್ಟಾನಿಷ್ಟಗಳೇ ಅಭಿವೃದ್ಧಿಯ ಆದ್ಯತೆಗಳಾಗಿಬಿಟ್ಟಿವೆ.

ಡಾ|| ಸಿಂಗ್ ಮಾತನಾಡುತ್ತಾ ಪ್ರಥಮ ಹಸಿರು ಕ್ರಾಂತಿಯ ಎರಡು ಪ್ರಮುಖ ಮಿತಿಗಳನ್ನು ಸರಿಯಾಗಿ ಗುರುತಿಸಿದ್ದಾರೆ.

೧. ಅದು ನೀರಾವರಿ ಬೇಸಾಯವನ್ನು ಮಾತ್ರ ಒಳಗೊಂಡಿತ್ತು.

೨. ದೊಡ್ಡ ಹಿಡುವಳಿಗಳಿಗೆ ಅದರ ತಂತ್ರಜ್ಞಾನ ಸೂಕ್ತವಾಗಿತ್ತು.

ಪ್ರಧಾನಿ ಡಾ|| ಸಿಂಗ್ ಹೇಳುವಂತೆ ಇನ್ನೊಂದು ಹಸಿರು ಕ್ರಾಂತಿಯು ಒಣಭೂಮಿ ಬೇಸಾಯಕ್ಕೆ ಒತ್ತು ನೀಡಬೇಕು ಹಾಗೂ ಸಣ್ಣ ಮತ್ತು ಅತಿಸಣ್ಣ ಹಿಡುವಳಿಗಾರರನ್ನು ಮುಖ್ಯವಾಗಿ ಒಳಗೊಳ್ಳಬೇಕು. ಕರ್ನಾಟಕ ಅಭಿವೃದ್ಧಿ ವರದಿಯಲ್ಲಿ ರಾಜ್ಯದ ಅಭಿವೃದ್ಧಿಯ ದೃಷ್ಟಿಯಿಂದ ಕೃಷಿ ಪಾತ್ರ ನಿರ್ಣಾಯಕವೆಂಬುದನ್ನು ಗುರುತಿಸಲಾಗಿದೆ.

ಇವೆಲ್ಲವೂ ಸರಿ! ಆದರೆ ಪ್ರಶ್ನೆ, ದೇಶದಲ್ಲಿ - ರಾಜ್ಯದಲ್ಲಿ ಯಾವ ವರ್ಗವು ಸಮೃದ್ಧಿಯ-ಸಂತೃಪ್ತಿಯ 'ಸ್ಥಿತಿ'ಯಿಂದ ಬೀಗುತ್ತಿದೆ? ಜಿಡಿಪಿಯ ವರ್ಧನೆ, ವಿದೇಶಿ ವಿನಿಮಯ ನಿಧಿ, ಶೇರು ಮಾರುಕಟ್ಟೆ ಅಬ್ಬರ ಮುಂತಾದವು ಸಮಾಜದಲ್ಲಿ ಯಾರ ಹಿತಾಸಕ್ತಿಗಳನ್ನು ಪೂರೈಸುತ್ತಿವೆ? ಆರ್ಥಿಕತೆಯೇನೋ ಉನ್ನತ ಮಟ್ಟದ ಮಜಲನ್ನು ಮುಟ್ಟಿರಬಹುದು! ದೇಶವು ಆಹಾರ ಭದ್ರತೆಯನ್ನು ಸಾಧಿಸಿಕೊಂಡಿರಬಹುದು! ಆದರೆ ಅಂಚಿನಲ್ಲಿರುವ ವಂಚಿತ ಜನವರ್ಗದ ಬದುಕು, ಅವರ ಆಹಾರ ಭದ್ರತೆ, ಹಸಿವು, ದುಡಿಮೆ ಏನಾಗಿದೆ ಎಂಬುದು ನಮಗೆ ಮುಖ್ಯವಾಗಬೇಕು.

### ಆಹಾರ ಅಭದ್ರತೆ

ಈ ದೇಶದ ಸರಿಸುಮಾರು ೧೦ ಕೋಟಿ ದಿನಗೂಲಿ ದುಡಿಮೆಗಾರರು ಹಸಿವಿನಿಂದ, ಆಹಾರ ಅಭದ್ರತೆಯಿಂದ ನರಳುತ್ತಿದ್ದಾರೆ. ಇವರ ಸಂಖ್ಯೆ ಕರ್ನಾಟಕದಲ್ಲಿ ೬೨ ಲಕ್ಷ. ಹಸಿರು ಕ್ರಾಂತಿ (ಪ್ರಥಮ) ದೇಶಕ್ಕೆ ಆಹಾರ ಭದ್ರತೆಯನ್ನು ಒದಗಿಸಿದೆ. ಆದರೆ ಇದು ಜನರ ಆಹಾರದ ಹಕ್ಕಾಗಿ ಪರಿವರ್ತನೆಯಾಗಲಿಲ್ಲ. ಆರ್ಥಿಕ ಅಭಿವೃದ್ಧಿಯು ಜನರ ಬದುಕಾಗಿ ಪರಿವರ್ತನೆಯಾಗಲಿಲ್ಲ. ರೈತಾಪಿ ವರ್ಗ - ದುಡಿಮೆಗಾರ ವರ್ಗ ಇಂದು ಸಂಕಷ್ಟಕ್ಕೆ ಸಿಲುಕಿದೆ.

ಒಣಭೂಮಿ ಬೇಸಾಯದಲ್ಲಿ ರಾಷ್ಟ್ರದಲ್ಲಿ ರಾಜಸ್ಥಾನಕ್ಕೆ ಪ್ರಥಮ ಸ್ಥಾನವಿದ್ದರೆ ಕರ್ನಾಟಕವು ಎರಡನೆಯ ಸ್ಥಾನದಲ್ಲಿದೆ ಎಂಬುದನ್ನು ಅವಶ್ಯ ನಾವು ತಿಳಿದುಕೊಳ್ಳಬೇಕು.

ಜನವರಿ ೨೦೦೬ರಲ್ಲಿ ರಾಷ್ಟ್ರಮಟ್ಟದಲ್ಲಿ - ರಾಜ್ಯಮಟ್ಟದಲ್ಲಿ ನಡೆದ ಚರ್ಚೆಗಳಲ್ಲಿ ಕೃಷಿ - ರೈತಾಪಿ ವರ್ಗ, ಅದರಲ್ಲೂ ಒಣ ಭೂಮಿ ಬೇಸಾಯ ಅತಿಶಯವಾದ ಗಮನವನ್ನು ಪಡೆದುಕೊಂಡಿದೆ. ಬಜೆಟ್ ಪೂರ್ವ ಚರ್ಚೆಗಳನ್ನು ಕೃಷಿಕ್ಷೇತ್ರದಲ್ಲಿ ಬಂಡವಾಳ ಹೂಡಿಕೆಯನ್ನು ಹೆಚ್ಚಿಸುವ ಬಗ್ಗೆ, ಒಣಭೂಮಿ ಬೇಸಾಯದಲ್ಲಿ ಇಳುವರಿಯನ್ನು ಉತ್ತಮಪಡಿಸುವ ಬಗ್ಗೆ ಗಮನ ಸೆಳೆಯಲಾಗಿದೆ.

**ರೈತರ ಆತ್ಮಹತ್ಯೆಗಳು**

ರೈತಾಪಿವರ್ಗದ ಆತ್ಮಸ್ಥೈರ್ಯವೇ ಇಂದು ನಂದಿಹೋದಂತೆ ಕಾಣುತ್ತಿದೆ. ಅವರು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಎನ್‌ಎಸ್‌ಎಸ್‌ಒನ ಇತ್ತೀಚಿಗಿನ ಸಮೀಕ್ಷೆ ಪ್ರಕಾರ ನಮ್ಮ ಸಮಾಜದಲ್ಲಿ ಪ್ರತಿ ಎರಡು ಕುಟುಂಬಗಳ ಪೈಕಿ ಒಂದು ಸಾಲದ ಶೂಲಕ್ಕೆ ತುತ್ತಾಗಿದೆ. ಸಹಕಾರಿ ಸಾಲ ವ್ಯವಸ್ಥೆ ಸಂಪೂರ್ಣವಾಗಿ ನೆಲಕಚ್ಚಿಬಿಟ್ಟಿದೆ. ವ್ಯಾಪಾರಿಗಳು, ಲೇವಾದೇವಿಗಾರರು, ದಲ್ಲಾಳಿಗಳ ಮೊರೆ ಹೋಗುವುದು ಸಣ್ಣ-ಪುಟ್ಟ ರೈತರಿಗೆ ಅನಿವಾರ್ಯವಾಗಿಬಿಟ್ಟಿದೆ. ರೈತರು ತಾವು ಬೆಳೆದ ಬೆಳೆಗಳನ್ನು ಮಾರುವ ಬೆಲೆಗೂ ಮತ್ತು ಅಂತಿಮವಾಗಿ ಗ್ರಾಹಕರು ಅವುಗಳಿಗೆ ನೀಡುವ ಬೆಲೆಗಳ ನಡುವೆ ಬೃಹತ್ ಅಂತರವಿದೆ. ಈ ಅಂತರದಲ್ಲಿ ವ್ಯಾಪಾರಿಗಳ, ದಲ್ಲಾಳಿಗಳ, ಲೇವಾದೇವಿಗಾರರ ಪಾತ್ರ ತುಂಬಾ ನಿರ್ಣಾಯಕವಾದುದಾಗಿದೆ. ಈ ವಿಷಚಕ್ರವನ್ನು ಭೇದಿಸುವ ಸಲುವಾಗಿ ಡಾ|| ಎಂ. ಎಸ್. ಸ್ವಾಮಿನಾಥನ್ ಕೃಷಿಗೆ ಸಂಬಂಧಿಸಿದಂತೆ 'ಭಾರತೀಯ ವಾಣಿಜ್ಯ ಸಂಸ್ಥೆ'ಯನ್ನು ಸ್ಥಾಪಿಸುವ ಕರೆ ನೀಡಿದ್ದಾರೆ. ಸಣ್ಣ- ಪುಟ್ಟ ರೈತರ, ಒಣಭೂಮಿ ಬೇಸಾಯಗಾರರ, ದಿನಗೂಲಿಗಳ, ಮಹಿಳೆಯರ, ವಂಚಿತರ ಹಿತಾಸಕ್ತಿಗಳನ್ನು ಸಂರಕ್ಷಿಸುವ ಸಾಂಸ್ಥಿಕ ವ್ಯವಸ್ಥೆಯ ಅವಶ್ಯಕತೆಯನ್ನು ನಾವು ಮನಗಾಣಬೇಕಾಗಿದೆ.



ಒಣಭೂಮಿ ಬೇಸಾಯ, ಬರಗಾಲ, ದಿನಗೂಲಿ, ವಲಸೆ, ಉಪವಾಸ, ಹಸಿವು, ಹಿಂದುಳಿದ ಪ್ರದೇಶ, ಆಹಾರ, ಮಹಿಳೆಯರು ಮುಂತಾದವು ಪರಸ್ಪರ ಸಂಬಂಧವಿರುವ ಸಂಗತಿಗಳಾಗಿವೆ. ಇವುಗಳ ಬಗ್ಗೆ ಮಾತನಾಡುವುದು ಇಂದು ಅಪರಾಧವಾಗಿಬಿಟ್ಟಿದೆ. ಕರ್ನಾಟಕದ ಸಂದರ್ಭದಲ್ಲಿ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ, ಮೆಟ್ರೊ ರೈಲು, ಥಳಥಳಿಸುವ ರಸ್ತೆಗಳು, ಮೂಲ ಸೌಲಭ್ಯ, ಒಳ ಮೀಸಲಾತಿ ಮುಂತಾದ ಪ್ರತಿಷ್ಠಿತರ ಇಷ್ಟಾನಿಷ್ಟಗಳೇ ಅಭಿವೃದ್ಧಿಯ ಆದ್ಯತೆಗಳಾಗಿಬಿಟ್ಟಿವೆ. ಡಿ. ಎಂ. ನಂಜುಂಡಪ್ಪ ವರದಿಯ ಬಗ್ಗೆ ಮಾತನಾಡುವ ಜನರು ಒಣಭೂಮಿ ಬೇಸಾಯದ ಬಗ್ಗೆ ಮಾತನಾಡುವುದಿಲ್ಲ. ಕೂಳನ್ನು ಅರಸಿಕೊಂಡು ಹೈದರಾಬಾದ್ ಕರ್ನಾಟಕದ ಜಿಲ್ಲೆಗಳ ದಿನಗೂಲಿ ದುಡಿಮೆಗಾರರು ವಲಸೆ ಹೋಗುವುದರ ಬಗ್ಗೆ ನಮ್ಮ ಜನಪ್ರತಿನಿಧಿಗಳು ಮಾತನಾಡುವುದಿಲ್ಲ. ಕರ್ನಾಟಕದಲ್ಲಿ ಪ್ರತಿದಿನ 'ದುಡಿದರೆ ಮಾತ್ರ ಕೂಳು – ಇಲ್ಲದಿದ್ದರೆ ಉಪವಾಸ' ಎಂಬಂತಹ ಬದುಕನ್ನು ದೂಡುತ್ತಿರುವ ೬೨ ಲಕ್ಷ ದಿನಗೂಲಿಗಳಿದ್ದಾರೆ. ಇವರಲ್ಲಿ ಮಹಿಳಾ ದಿನಗೂಲಿ ದುಡಿಮೆಗಾರರ ಸಂಖ್ಯೆಯೇ ೩೬ ಲಕ್ಷ. ಬಡತನದ– ದುಡಿಮೆಯ – ಮಹಿಳೀಕರಣದ ಪ್ರಕ್ರಿಯೆ ಅತ್ಯಂತ ಢಾಳಾಗಿ ನಮಗೆ ಹೈದರಾಬಾದ್-ಕರ್ನಾಟಕ ಪ್ರದೇಶದ ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಆದರೆ ಅವರು ಕೇವಲ ಕುಟುಂಬ ಯೋಜನೆಯ ಬಲಿಪಶುಗಳಾಗಿದ್ದಾರೆ. ಗಂಡ-ಮಕ್ಕಳು, ಸಂಸಾರವನ್ನು ನಿಭಾಯಿಸುವ ಗಾಣದೆತ್ತುಗಳಾಗಿದ್ದಾರೆ. ಅವರ ಅಭಿವೃದ್ಧಿ ನಿಯೋಗದ ಬಗ್ಗೆ ಸಮಾಜದಲ್ಲಿ ಇನ್ನೂ ಅರಿವು ಮೂಡಿಲ್ಲ. ರಾಷ್ಟ್ರಮಟ್ಟದಲ್ಲಿ– ಕರ್ನಾಟಕದಲ್ಲಿ ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಸರಿಸುಮಾರು ಶೇ. ೩೧ರಿಂದ ೩೫ ರಷ್ಟಿದೆ. ಅವರನ್ನು ಅಭಿವೃದ್ಧಿಯ ಕರ್ತೃಗಳೆಂದು ಪರಿಗಣಿಸುವ ಅಗತ್ಯವಿದೆ. 'ಮಹಿಳೆಯರು ಕೇವಲ ಅನುಭೋಗಿಗಳು, ಪುರುಷರು ಮಾತ್ರ ಉತ್ಪಾದಕರು' ಎಂಬ ಅಪಲಾಪವನ್ನು ಇನ್ನಾದರೂ ನಾವು ಅರ್ಥಮಾಡಿಕೊಳ್ಳಬೇಕು.

**ಉದ್ಯೋಗ ಭರವಸೆ ಯೋಜನೆ**

ಈ ಸಂದರ್ಭದಲ್ಲಿ ಚರ್ಚೆಯಾಗುತ್ತಿರುವ ಮತ್ತೊಂದು ಸಂಗತಿಯೆಂದರೆ ಉದ್ಯೋಗ ಭರವಸೆ ಯೋಜನೆ ಕಾಯಿದೆ. ವಾರ್ಷಿಕ ಕನಿಷ್ಠ ೧೦೦ ದಿನಗಳ ಉದ್ಯೋಗವನ್ನು ನೀಡುವ ಉದ್ದೇಶದಿಂದ ಆರಂಭವಾಗುತ್ತಿರುವ ಪ್ರಸ್ತುತ ಯೋಜನೆಯು ಜನರ ಸಂಘಟನೆಯಿಲ್ಲದೆ ಯಶಸ್ವಿಯಾಗುವುದು ಸಾಧ್ಯವಿಲ್ಲ. ಜನರ ಸಂಘಟನೆಯಿಲ್ಲದೆ ಕೇವಲ ಅಧಿಕಾರಿಗಳ ಮೂಲಕ ಇದನ್ನು ಅನುಷ್ಠಾನಗೊಳಿಸಿದ್ದಾದರೆ ಅದು ಕೇವಲ ಹಣ ಹಂಚಿಕೊಳ್ಳುವ ದಂಧೆಯಾಗಿಬಿಡುತ್ತದೆ. ಜನರ ಸಂಘಟನೆ ಜೊತೆಗೆ ಬಂಡವಾಳ/ಆಸ್ತಿ ನಿರ್ಮಾಣವನ್ನು ಉದ್ಯೋಗ ಭರವಸೆ ಯೋಜನೆ ಜೊತೆ ಸಂಯೋಜಿಸಬೇಕು. ಪ್ರಧಾನಿ ಡಾ|| ಸಿಂಗ್ ಅವರು ರೋಜಗಾರ್ ಬಢಾವೊ ಕರೆಕೊಟ್ಟಿದ್ದಾರೆ. ಆದರೆ ಇದು 'ಜೋಬು ಭರೋ' ಕಾರ್ಯಕ್ರಮವಾಗಿಬಿಡಬಾರದು. ಸಾಮಾಜಿಕ-ಪ್ರಾದೇಶಿಕ ಏಣಿಶ್ರೇಣಿಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಯೋಜನೆಯನ್ನು ಅನುಷ್ಠಾನಗೊಳಿಸುವ ಅಗತ್ಯವಿದೆ.

ಜನವರಿ ೨೦೦೬ರಲ್ಲಿ ನಮ್ಮ ಆರ್ಥಿಕತೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಸರಿಯಾಗಿ ಗುರುತಿಸಲಾಗಿದೆ. ಅವುಗಳ ಚಿಕಿತ್ಸೆ ಬಗ್ಗೆ ನಾವು ಗಂಭೀರವಾಗಿ ಯೋಚಿಸಬೇಕಾಗಿದೆ. ಇಂತಹ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಜನಪ್ರತಿನಿಧಿಗಳ ಪಾಳೆಗಾರಿಕೆಯನ್ನು ತಹಬಂದಿಯಲ್ಲಿಡುವುದರ ಬಗ್ಗೆ ಶಾಸನದ ಮಟ್ಟದಲ್ಲೇ ನಾವು ಯೋಚಿಸುವ ಕಾಲ ಬಂದಿದೆ. ಜನರಿಂದ ಚುನಾಯಿತರಾದಾಕ್ಷಣ ಎಲ್ಲದಕ್ಕೂ ಲೈಸನ್ಸ್ ಎಂಬಂತೆ ವರ್ತಿಸುವ ಜನಪ್ರತಿನಿಧಿಗಳ ಅಟ್ಟಹಾಸವನ್ನು ನಿಯಂತ್ರಿಸಬೇಕಾಗಿದೆ.

ಪ್ರಧಾನಿ ಡಾ|| ಸಿಂಗ್, ಕೃಷಿ ತಜ್ಞ ಡಾ|| ಎಂ. ಎಸ್. ಸ್ವಾಮಿನಾಥನ್, ಕರ್ನಾಟಕ ಅಭಿವೃದ್ಧಿ ವರದಿ ಸಿದ್ಧಪಡಿಸಿದ ತಜ್ಞರು, ಎಫ್‌ಎಒನ ಮಹಾನಿರ್ದೇಶಕ, ವಿತ್ತಮಂತ್ರಿ ಪಿ. ಚಿದಂಬರಂ – ಎಲ್ಲರೂ ವರ್ಷದ ಆರಂಭದಲ್ಲಿ ಎತ್ತಿರುವ ಪ್ರಶ್ನೆಗಳನ್ನು ನಾವೆಲ್ಲರೂ ಗಂಭೀರವಾಗಿ ಚಿಂತಿಸಬೇಕಾಗಿದೆ. ಅಭಿವೃದ್ಧಿ ಎಂಬುದನ್ನು ವಂಚಿತರ, ದಿನಗೂಲಿಗಳ, ಮಹಿಳೆಯರ, ಅಂಚಿನಲ್ಲಿರುವವರ ಬದುಕಾಗಿ ಪರಿವರ್ತಿಸುವುದು ಹೇಗೆ ಎಂಬುದೇ ನಮ್ಮ ಮುಂದಿರುವ ಬಹುದೊಡ್ಡ ಪ್ರಶ್ನೆ!

**ಡಾ|| ಟಿ. ಆರ್. ಚಂದ್ರಶೇಖರ**
ಪ್ರಾಧ್ಯಾಪಕ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

### ಕರ್ನಾಟಕದ ವಾರ್ಷಿಕ ಯೋಜನೆ : ೨೦೦೬-೦೭

ಜನವರಿ ೨೦೦೬ರಲ್ಲಿ ಕರ್ನಾಟಕದ ಅಭಿವೃದ್ಧಿಗೆ ಸಂಬಂಧಿಸಿದಂತೆ ನಡೆದ ಒಂದು ಮಹತ್ವದ ಘಟನೆಯೆಂದರೆ ಕೇಂದ್ರದ ಯೋಜನಾ ಆಯೋಗದ ಜೊತೆ ಚರ್ಚೆ ಮಾಡಿ ೨೦೦೬-೦೭ನೆಯ ಸಾಲಿನ ಅಭಿವೃದ್ಧಿ ಯೋಜನೆಯನ್ನು ಅನುಮೋದಿಸಿದ್ದಾಗಿದೆ. ಕಳೆದ ವರ್ಷ (೨೦೦೫-೦೬)ದ ಯೋಜನೆಯ ಗಾತ್ರ ರೂ. ೧೩,೦೦೦; ಪ್ರಸ್ತುತ ೨೦೦೬-೦೭ನೆಯ ಸಾಲಿನ ಯೋಜನೆಯ ಮೊತ್ತ ರೂ. ೧೬,೧೬೬ ಕೋಟಿ.

#### ಯೋಜನಾ ವೆಚ್ಚದ ವಲಯವಾರು ವರ್ಗೀಕರಣ

| | | |
|---|---|---|
| ಸಾಮಾಜಿಕ ಸೇವಾ ವಲಯ | ರೂ. ೪,೨೧೩ ಕೋಟಿ | (ಶೇ. ೨೬.೦೬) |
| ನೀರಾವರಿ ಕಾರ್ಯಕ್ರಮಗಳು | ರೂ. ೪,೧೯೮ ಕೋಟಿ | (ಶೇ. ೨೫.೯೭) |
| ವಿದ್ಯುತ್ ವಲಯ | ರೂ. ೨,೪೪೨ ಕೋಟಿ | (ಶೇ. ೧೫.೧೧) |
| ಸಾರಿಗೆ ವಲಯ | ರೂ. ೧,೭೧೫ ಕೋಟಿ | (ಶೇ. ೧೦.೬೧) |
| ಕೃಷಿ ಮತ್ತು ತತ್ಸಂಬಂಧಿ ಕಾರ್ಯಗಳು | ರೂ. ೮೪೦ ಕೋಟಿ | (ಶೇ. ೫.೧೯) |
| ಇತರೆ | ರೂ. ೨,೭೫೮ ಕೋಟಿ | (ಶೇ. ೧೭.೦೬) |
| ಒಟ್ಟು | ರೂ. ೧೬,೧೬೬ ಕೋಟಿ | (ಶೇ. ೧೦೦.೦೦) |

ಈ ಯೋಜನೆಯ ಒಟ್ಟು ಮೊತ್ತವಾದ ರೂ. ೧೬,೧೬೬ ಕೋಟಿಯಲ್ಲಿ ರಾಜ್ಯವು ಸ್ವಂತ ಮೂಲಗಳಿಂದ ಸಂಗ್ರಹಿಸಿಕೊಳ್ಳುವ ಪ್ರಮಾಣ ಶೇ. ೮೫.೫೧ (ರೂ. ೧೩,೮೨೩ ಕೋಟಿ) ಮತ್ತು ಕೇಂದ್ರದ ನೆರವಿನ ಪ್ರಮಾಣ ಶೇ. ೧೪.೪೯ (ರೂ. ೨,೩೪೨ ಕೋಟಿ). ಯೋಜನೆಗೆ ಸ್ವಂತ ಸಂಪನ್ಮೂಲವನ್ನು ಹೆಚ್ಚು ಅವಲಂಬಿಸಿಕೊಂಡಿರುವುದು ಕರ್ನಾಟಕದ ಹೆಗ್ಗಳಿಕೆಯಾಗಿದೆ.

# ಬಾಹುಬಲಿ ಸ್ವಗತ



ಆಹಾ! ನನ್ನಣ್ಣ ಭರತ ಷಟ್ಖಂಡಗಳನ್ನು ಜಯಿಸಿ ಮನುಕುಲದ ಪ್ರಥಮ ಚಕ್ರಿಯೆನಿಸಿ ಅಯೋಧ್ಯೆಗೆ ಹಿಂದಿರುಗುತ್ತಿರುವನಂತೆ. ನನ್ನ ತಂದೆಯಾದ ಕೇವಲಿ ವೃಷಭನಾಥನ ಜ್ಞಾನ ಪ್ರಭೆ ಒಂದೆಡೆಯಾದರೆ, ಅಣ್ಣನ ಶೌರ್ಯ ಪ್ರಭೆ ಮತ್ತೊಂದೆಡೆ. ಹೆಮ್ಮೆಯ ವಿಷಯವಲ್ಲವೇ? ಅಂತಹ ತಂದೆಗೆ ಮಗನಾಗಿ, ಅಣ್ಣನಿಗೆ ತಮ್ಮನಾಗಿ ಹುಟ್ಟಿದುದು ನನ್ನ ಸುಕೃತ... ಅಣ್ಣನನ್ನು ಹೋಗಿ ಕಾಣುತ್ತೇನೆ. ನನ್ನ ಸಂತಸವನ್ನು ಅವನಲ್ಲಿ ನಿವೇದಿಸಿಕೊಳ್ಳುತ್ತೇನೆ...

ಅಲ್ಲ, ನನ್ನಣ್ಣ ಹೀಗೇಕೆ ಮಾಡಿದ? ನನ್ನ ಮೇಲೇ ದಬ್ಬಾಳಿಕೆ ನಡೆಸಲು ಹೊರಟಿರುವನಲ್ಲ? ನಾನೇ ಹೋಗಿ ಅಣ್ಣನನ್ನು ಕಂಡು ಯೋಗಕ್ಷೇಮ ವಿಚಾರಿಸಿಕೊಂಡು ಬರಬೇಕೆಂದಿದ್ದೆ. ಆತನ ದಿಗ್ವಿಜಯ ಸಾಧನೆಗೆ ಸಂತೋಷ ವ್ಯಕ್ತಪಡಿಸಿ ಬರಬೇಕೆಂದಿದ್ದೆ. ಆದರೆ, ಅದಾವುದಕ್ಕೂ ಈಗ ಮನಸ್ಸಾಗುತ್ತಿಲ್ಲ. ಅದಕ್ಕೆ ಕಾರಣ ಅಣ್ಣನ ಧೋರಣೆ. ಅಲ್ಲ, ನನ್ನಣ್ಣ, ಅದರಲ್ಲೂ ಭರತಣ್ಣ ಹೀಗೆ ಮಾಡಬಹುದೇ? ನಾನು ಊಹಿಸಿಯೇ ಇರಲಿಲ್ಲ ಅವನು ಹೀಗೆ ಮಾಡುವನೆಂದು. ನಮ್ಮ ರಾಜ್ಯವನ್ನು ಅವನಿಗೆ ಕೊಟ್ಟು ತಮ್ಮಂದಿರಾದ ನಾವೆಲ್ಲರೂ ಅವನ ಪಾದಾಂಬುಜಕ್ಕೆ ಎರಗಿ ಅವನೊಂದಿಗೆ ಸುಖದಿಂದ ಇರಬೇಕಂತೆ! ಈ ಶಾಸನವನ್ನು ತಲೆಯ ಮೇಲೆ ಹೊತ್ತು ಷಟ್ಖಂಡಮಂಡಲಾಧಿಪತಿಯಾದ ಆತನ ಆಸ್ಥಾನಕ್ಕೆ ಹೋಗಿ ಭಕ್ತಿ ಗೌರವದಿಂದ ಎರಗಬೇಕಂತೆ! ಇದೇನು ಮಾತು ಇವನದು! ನನ್ನ ಆಸ್ಥಾನಕ್ಕೆ ದೂತನನ್ನು ಅಟ್ಟಿ ಹೇಳಿ ಕಳುಹಿಸುವ ಮಾತೇ ಇದು? ಎಷ್ಟೆಷ್ಟೋ ಅರಸರು ಬಂದು ಆತನ ಪಾದಗಳಿಗೆ ಎರಗಿದರಂತೆ! ಆದರೆ ನಾನು ಮಾತ್ರ ಎರಗಿಲ್ಲವಂತೆ! ಪೌದನಪುರ ಅವನ ಆಳುವಿಕೆಗೆ ಹೊರತಾಗಲು ಆತನ ಇತರ ದೇಶ-ಕೋಶಗಳ ಗೆಲವು ಅರ್ಥಹೀನವಂತೆ! ನೆನೆಯುತ್ತ ಹೋದರೆ ಕ್ರೋಧ ಉಕ್ಕೇರುತ್ತದೆ, ರಕ್ತ ಕುದಿಯುತ್ತದೆ. ಅವನು ಹೇಳಿದನೆಂದು ನನ್ನ ಇತರ ಅಣ್ಣಂದಿರಂತೆ ನಾನು ದೀಕ್ಷೆಯನ್ನು ತೆಗೆದುಕೊಳ್ಳಲೇ. ಭರತನಿಗೆ ಎರಗುವ ಸೋಲಿಗಿಂತ ಸ್ವಾಮಿ ವೃಷಭನಾಥನಿಗೆ ಎರಗಿ ಆತ್ಮಕಲ್ಯಾಣ ಮಾಡಿಕೊಳ್ಳುವುದೇ ಲೇಸೆಂದು ಆ ಸೋದರರು ಬಗೆದಿದ್ದಾರೆ. ನಾನಾದರೋ ಭರತನಿಗೆ ತಕ್ಕ ಪಾಠವನ್ನು ಕಲಿಸದೆ ಬಿಡುತ್ತೇನೆಯೆ?

ಅಣ್ಣನೆಂದು ನಮಸ್ಕರಿಸಲು ನನಗೇನೂ ತೊಂದರೆಯಿಲ್ಲ. ಹಿರಿಯಣ್ಣನಾದರೋ ಗುರುವಿಗೆ, ತಂದೆಗೆ ಸಮಾನ. ಆದರೆ ಆಳರಸೆಂಬ ಭಾವ ಸಹಿಸಲಸಾಧ್ಯ. ನನ್ನ ರಾಜ್ಯವನ್ನು ಅವನಿಗೆ ಕೊಟ್ಟು, ಅವನೊಂದಿಗೆ ರಾಜ್ಯವನ್ನು ಆಳುವುದೆಂದರೇನು? ಅಕ್ಕಿಯನ್ನು ಕೊಟ್ಟು ತಂಗಳನ್ನ ತಿಂದಂತಲ್ಲವೇ? ನನಗೇಕೆ ಅವನ ಹಂಗು? ಅಪ್ಪ ಕೊಟ್ಟು ಹೋಗಿರುವ ರಾಜ್ಯವಿದು. ಭರತನಿಗೆ ಅಯೋಧ್ಯೆಯನ್ನು ಕೊಟ್ಟಂತೆ, ನನಗೆ ಪೌದನಪುರವನ್ನು ಕೊಡಲಿಲ್ಲವೇ? ಇತರ ಅಣ್ಣಂದಿರಿಗೂ ಬೇರೆ ಬೇರೆ ಪುರಗಳನ್ನು ಕೊಡಲಿಲ್ಲವೇ ನಮ್ಮ ಅಪ್ಪ. ಅಪ್ಪ ನಮ್ಮೆಲ್ಲರನ್ನು ಸಮನಾಗಿ ನೋಡಿಕೊಂಡಿರುವನೆಂದ ಮೇಲೆ ಇವನದೇನು ಹೆಚ್ಚಳಿಕೆ?

ಅಬ್ಬಾ! ಅವನ ಹಮ್ಮು-ಬಿಮ್ಮನ್ನು ನೋಡಬೇಕು! ಪತ್ರದ ಒಕ್ಕಣೆಯುದ್ದಕ್ಕೂ ತನ್ನ ಆತ್ಮ ಪ್ರಶಂಸೆಯನ್ನೇ ಮಾಡಿಕೊಂಡಿದ್ದನಲ್ಲ. ಅವನ ದಿಗ್ವಿಜಯದ ಉಗ್ಗಡಿಕೆಯೇ ಉಗ್ಗಡಿಕೆ. ಅದಿರಲಿ, ಅವನು ಯಾವುದನ್ನು ತನ್ನ ಶೌರ್ಯಸಾಹಸವೆಂದು ಮೆರೆಯುತ್ತಿರುವನೋ, ಅದೆಲ್ಲವೂ ಏನಿದ್ದರೂ ಚಕ್ರರತ್ನದಿಂದ ಸಾಧಿಸಿದ್ದು. ಅವನು ಮಾಡಿದ ಘನಂದಾರಿ ಕೆಲಸವಾದರೂ ಏನು? ಪರಿವಾರ ಸಮೇತನಾಗಿ, ಸೈನ್ಯದೊಂದಿಗೆ ಚಕ್ರರತ್ನವನ್ನು ಹಿಂಬಾಲಿಸಿದ್ದು ಅಷ್ಟೇ. ಚಕ್ರರತ್ನ ಹಾಗೂ ಸೈನಿಕರು ಸಾಧಿಸಿದುದನ್ನು ತನ್ನ ಸಾಧನೆಯೆಂದುಕೊಳ್ಳುತ್ತಿದ್ದಾನೆ ಆ ಮಹಾವೀರ! ಇವನ್ನೆಲ್ಲ ಅವನ ಮುಖಕ್ಕೆ ರಾಚಬೇಕೆಂದೇ ಮರು ಪತ್ರವನ್ನು ಬರೆದು ಕಳುಹಿಸಿದ್ದು. ತಿಳಿದುಕೊಳ್ಳಲಿ ಭರತ ತನ್ನ ಯೋಗ್ಯತೆಯನ್ನು. ನನ್ನೊಂದಿಗೆ ಯುದ್ಧಮಾಡಿ ಗೆಲ್ಲಲಿ ನೋಡೋಣ. ನಾನೆಂದೂ ಅವನೊಂದಿಗೆ ಇದುವರೆಗೆ ಅವಿನಯದಿಂದ ವರ್ತಿಸಿದವನಲ್ಲ. ಅವನಾದರೂ ನನ್ನನ್ನು ಮುದ್ದಿನ ತಮ್ಮನಂತೆಯೇ ಕಂಡಿದ್ದ. ಆದರೆ ಇಂದು ಎಲ್ಲವೂ ಏರುಪೇರು. ಅವನಿಗೆ ಗೆಲುವೆಂಬ ಪಿತ್ತ ನೆತ್ತಿಗೇರಿದೆ. ತಮ್ಮನೆಂಬ ಅಕ್ಕರೆಗಿಂತ ಅವನಿಗೆ ಚಕ್ರವರ್ತಿತ್ವವೇ ಹೆಚ್ಚಾಗಿದೆ. ಇರಲಿ, ಇಂದವನಿಗೆ ನಾನು ಎರಗದಿದ್ದರೂ ಚಿಂತೆಯಿಲ್ಲ. ಯುದ್ಧರಂಗದಲ್ಲಿ ಕೈಮಿಲಾಯಿಸುವೆನೇ ಹೊರತು, ಅವನಿಗೆ ಕೈಜೋಡಿಸಿ ಶರಣಾಗಲಾರೆ...

ಓ! ಅಗೋ ಯುದ್ಧರಂಗ! ಚತುರಂಗಬಲ ಕಣ್ಣೋಟವನ್ನು ಮೀರಿ ಹರಿದಿದೆ. ಇದುವರೆಗೆ ಯುದ್ಧರಂಗದಲ್ಲಿ ನನ್ನ ಬಾಹುಬಲವನ್ನು ಪ್ರದರ್ಶಿಸುವ ಕಾಲ ಒದಗಿಬಂದಿರಲಿಲ್ಲ– ಈಗ ಅದಕ್ಕೆ ಸದವಕಾಶ ಒದಗಿದೆ.

ಇದೇನಿದು, ಮಂತ್ರಿಮುಖ್ಯರು ಬರುತ್ತಿದ್ದಾರೆ... ನನ್ನ ಕಡೆಗೇ... ಏಕಿರಬಹುದು?...

ಮುಖ್ಯಮಂತ್ರಿಗಳು ಹೇಳಿದ ಮಾತು ನನಗೆ ಬಹಳ ಹಿಡಿಸಿತು. ''ವೈಮನಸ್ಯವಿರುವುದು ನಿಮ್ಮಿಬ್ಬರಲ್ಲಿ; ಅಮಾಯಕ ಸೈನಿಕರು ಏಕೆ ನಾಶವಾಗಬೇಕು? ಯುದ್ಧಭೀಕರತೆ ಬಹಳ ಅಪಾಯಕಾರಿಯಾದುದು. ಯುದ್ಧ ಮಾಡುವುದಾದರೆ ದ್ವಂದ್ವಯುದ್ಧವನ್ನು – ಧರ್ಮಯುದ್ಧವನ್ನು ಮಾಡಿ'' ಎಂದು ಸೂಚಿಸಿದರಲ್ಲ. ನಿಜ, ಕೋಪದ ಆವೇಶದಲ್ಲಿ ಎಲ್ಲವನ್ನೂ ಸರ್ವನಾಶಮಾಡುವ ರಣೋತ್ಸಾಹ ದಲ್ಲಿದ್ದೆ. ಆ ಹಿರಿಯರು ನನಗೆ ಎಚ್ಚರಿಕೆ ನೀಡಿದುದು ಒಳ್ಳೆಯದಾಯಿತು. ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳಲ್ಲಿ ಜಯಾಪಜಯಗಳನ್ನು ನಿರ್ಧರಿಸಿಕೊಳ್ಳಬೇಕಂತೆ.

ಡಾ॥ ಸರಸ್ವತಿ ವಿಜಯಕುಮಾರ್

ಭರತನಿಗೂ ಇದು ಒಪ್ಪಿಗೆಯಂತೆ. ಒಳ್ಳೆಯದೇ ಆಯಿತು. ಮುಂದೆ ಒದಗಬಹುದಾಗಿದ್ದ ಹಿಂಸಾಕಾಂಡವನ್ನು ಅನರ್ಥವನ್ನು ತಪ್ಪಿಸಿದಂತಾಯಿತು. ಈ ಹೊಸರೀತಿಯ ಯುದ್ಧದಲ್ಲಿ ಯಾವುದೋ ಹೊಸ ಅರ್ಥವಿದೆ ಎನಿಸುತ್ತದೆ.

ಈಗ, ನಮ್ಮೀರ್ವರ ನಡುವೆ – ಅಣ್ಣ ತಮ್ಮಂದಿರ ನಡುವೆ ನಡೆಯುವ ದ್ವಂದ್ವ ಯುದ್ಧವನ್ನು ನೋಡಲು ರಾಜಾಧಿರಾಜರು, ಪರಿವಾರದವರು ಎಲ್ಲರೂ ಕಾತುರಗೊಂಡು ಸುತ್ತುವರಿದಿದ್ದಾರೆ. ಅದೋ ಭರತ ವೀರೋತ್ಸಾಹದಿಂದ ಎದೆ ಸೆಟೆಸಿಕೊಂಡು ಬರುತ್ತಿದ್ದಾನೆ, ಬರಲಿ. ನಾನೇನು ಕಡಿಮೆಯೇ? ಈಗ ದೃಷ್ಟಿಯುದ್ಧವಂತೆ; ಎವೆಯಿಕ್ಕದೆ ನೋಡಬೇಕಂತೆ. ರಣರಂಗ ಮಧ್ಯದಲ್ಲಿ ನಿಂತಿರುವ ಭರತನ ಎವೆಯೊಂದಿಗೆ ಎವೆ ಬೆರೆಸಿ ಅವನ ದೃಷ್ಟಿಯನ್ನು ಎದುರಿಸುತ್ತೇನೆ...

ಚತುರಂಗ ಬಲದೊಂದಿಗೆ ಮಾಡುವ ಯುದ್ಧಕ್ಕಿಂತ ಇದು ವಿನೂತನವಾಗಿ ತೋರುತ್ತಿದೆ, ವಿನೋದಮಯವೆನಿಸುತ್ತಿದೆ. ಅಣ್ಣ ಭರತನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿದೆ. ನನ್ನ ಕಣ್ಣುಗಳ ತೇಜಸ್ಸನ್ನು ಅವನಿಂದ ಎದುರಿಸಲಾಗಲಿಲ್ಲವೆನಿಸುತ್ತದೆ. ಸೂರ್ಯಕಿರಣಗಳ ಪ್ರಖರತೆಯೊಂದಿಗೆ ನನ್ನ ಕಣ್ಣುಗಳ ಪ್ರಖರತೆಯೂ ಸೇರಿ ಅವನಿಗೆ ದೃಷ್ಟಿಯೊಂದಿಗೆ ದೃಷ್ಟಿ ಕೂಡಿಸಲು ಅಸಾಧ್ಯವಾಯಿತೆನಿಸುತ್ತದೆ. ಭರತ ಎವೆ ಮಿಟುಕಿಸಿಯೇ ಬಿಟ್ಟ. ಕಣ್ಣುಗಳನ್ನು ಹೊಸಗಿಕೊಳ್ಳಲು ಪ್ರಾರಂಭಿಸಿದ. ನಾನಂದುಕೊಂಡಂತೆ ಜಯ ನನ್ನದೇ ಆಯಿತು. ಸುತ್ತ ನೆರೆದಿರುವವರು ಜಯಘೋಷಣೆ ಮಾಡತೊಡಗಿದರು. ನನ್ನ ಉತ್ಸಾಹ ಇಮ್ಮಡಿಗೊಂಡಿತು.

ಭರತನ ಮುಖದಲ್ಲಿ ಕೋಪ, ಸೋಲಿನ ದುಮ್ಮಾನ, ಮುಂದಿನ ಯುದ್ಧದಲ್ಲಿ ಗೆಲ್ಲಲೇಬೇಕೆಂಬ ರಣೋತ್ಸಾಹ ಎಲ್ಲವೂ ಒಟ್ಟಾರೆ ಮೇಳೈಸಿದಂತೆ ಕಂಡುಬರುತ್ತಿದೆ. ಇದುವರೆಗೆ ಸೋಲನ್ನೇ ಅನುಭವಿಸದ ಅಣ್ಣನಿಗೆ ಇದು ಮೊದಲನೆಯ ಸೋಲು! ಅವನ ಭಾವತುಮುಲ ಸಹಜವಾದುದೇ. ಅದೋ! ಮುಂದಿನ ಜಲಯುದ್ಧದಲ್ಲಿ ಗೆಲ್ಲಲೇ ಬೇಕೆಂಬ ಭಾವದಿಂದ ಆ ವಿಶಾಲವಾದ ಸರೋವರದ ಮಧ್ಯದಲ್ಲಿ ನಿಂತಿದ್ದಾನೆ. ಸರೋವರ ವನ್ನು ಆನೆ ಹೊಕ್ಕಂತಿದೆ ಅವನ ಠೀವಿ. ನಾನು ಈಗ ಅವನೊಂದಿಗೆ ಹೋಗಿ ಸೇರುತ್ತೇನೆ. ನೀರನ್ನು ಒಬ್ಬರಿಗೊಬ್ಬರಿಗೆ ಎರಚಾಡಬೇಕಂತೆ. ಯಾರು ಅದನ್ನು ತಡೆದುಕೊಳ್ಳಲಾರದೆ ಹಿಮ್ಮೆಟ್ಟುವರೋ ಅವರಿಗೆ ಸೋಲಂತೆ. ಭರತನಿಗೆ ನನ್ನ ಕೈಚಳಕ ತೋರಿಸುತ್ತೇನೆ...

ನಾನಂದುಕೊಂಡಂತೆ ಭರತನಿಗೆ ಈ ಯುದ್ಧದಲ್ಲೂ ಸೋಲಾಯಿತು. ಅವನಾದರೂ ಏನು ಮಾಡಿಯಾನು? ನಾನೋ ಐನೂರ ಇಪ್ಪತ್ತೈದು ಬಿಲ್ಲೆತ್ತರ. ಅವನೋ ಐನೂರು ಬಿಲ್ಲೆತ್ತರ. ಅವನು ಎರಚುತ್ತಿದ್ದ ನೀರು ಹೆಚ್ಚೆಂದರೆ ನನ್ನ ಎದೆಗೆ ಬಂದುಮುಟ್ಟುತ್ತಿತ್ತು. ಹಾರದೋಪಾದಿಯಲ್ಲಿ ಭೂಷಣಪ್ರಾಯವಾಗುತ್ತಿತ್ತು. ಅದೇ ನಾನು ಎರಚುತ್ತಿದ್ದ ನೀರು ಅವನ ಮುಖಕ್ಕೆ ನೇರವಾಗಿ ಅಪ್ಪಳಿಸುತ್ತಿತ್ತು. ಭರತನಿಗೆ ಆ ರಭಸವನ್ನು ತಡೆದು ಕೊಳ್ಳಲಾಗಲಿಲ್ಲ. ಪಕ್ಕಕ್ಕೆ ಮುಖ ತಿರುಗಿಸಿಕೊಂಡೇಬಿಟ್ಟ. ಸ್ವಸಾಮರ್ಥ್ಯವನ್ನು ಮೆರೆಯುವ ಈ ಯುದ್ಧ ಸುಲಭವಲ್ಲವೆಂದು ಅದರಲ್ಲಿಯೂ ನನ್ನೊಂದಿಗೆ ಸುಲಭಸಾಧ್ಯವಲ್ಲವೆಂದು ಈಗಲಾದರೂ ಅರಿವಾಗಬೇಕು. ನನಗಂತೂ ಜಲಯುದ್ಧ ಒಂದು ಮಾದರಿಯ ಜಲಕೇಳಿ ಯಂತೆ ತೋರಿತು. ಭರತ ಹಿಂದಕ್ಕೆ ಸರಿಯದಿದ್ದರೆ ಇನ್ನೂ ಒಂದಷ್ಟು ಮಜ ತೆಗೆದುಕೊಳ್ಳ ಬಹುದಿತ್ತು ಎನಿಸಿತು. ಈ ಕಡೆ ಭರತನ ಸಿಗ್ಗು, ಕೋಪಾವೇಶದಲ್ಲಿ ಮಾರ್ಪಾಡಾಗಿತ್ತು.

ಜಯಘೋಷದ ಧ್ವನಿ ಇನ್ನೂ ಮಾರ್ದನಿಸುತ್ತಿರುವಂತೆಯೇ ಮಲ್ಲಯುದ್ಧ ಪ್ರಾರಂಭವಾಗಿಯೇ ಬಿಟ್ಟಿತು. ಮಲ್ಲಯುದ್ಧಕ್ಕೆ ನಿಂತ ನಮ್ಮನ್ನು ನೋಡಿ ಜನ ಕಣ್ಣುತುಂಬಿ ಕೊಳ್ಳುತ್ತಿದ್ದಂತೆ ಕಂಡುಬಂತು. ನಾನು ಸುತ್ತ ನೆರೆದ ಜನರ ಮೇಲೆ ನನ್ನ ದೃಷ್ಟಿಯನ್ನು ಹಾಯಿಸುತ್ತಿದ್ದೆ. ಭರತನಿಗೆ ಇದ್ಯಾವುದರ ಮೇಲೂ ಪರಿವೆಯಿಲ್ಲ, ನನ್ನ ಮೇಲೆ ಬಿದ್ದು ಮಲ್ಲಯುದ್ಧದಲ್ಲಿ ಗೆಲ್ಲಬೇಕೆಂಬ ಆತುರ. ನನ್ನ ಮೇಲೆ ಅವನು ಆವೇಶದಿಂದ ಎರಗಿದ. ನಾನು ತಕ್ಷಣ ಎಚ್ಚೆತ್ತು ಕೊಂಡೆ. ಅವನು ನಿಜಕ್ಕೂ ನಾನಾ ಪಟ್ಟುಗಳನ್ನು ಮೆರೆದ. ಆವೇಶಭರಿತನಾಗಿದ್ದ. ನಾನು ಸಮಯ ನೋಡಿ ಒಮ್ಮೆಗೇ ಅವನನ್ನು ಹಿಡಿದೆ, ಮೇಲಕ್ಕೆತ್ತಿದೆ, ಅದೂ ಸಲೀಸಾಗಿ. ನನ್ನ ಎರಡು ತೋಳುಗಳನ್ನು ಆಕಾಶಕ್ಕೆ ಚಾಚಿ ಭರತನನ್ನು ಅಡ್ಡಡ್ಡ ಮಲಗಿಸಿ ಹಿಡಿದು ಮೇಲಕ್ಕೆ, ಅತಿ ಮೇಲಕ್ಕೆ ಚಾಚಿ ಹಿಡಿದೆ. ಹಾಗೆ ಅವನನ್ನು ಎತ್ತಿ ಹಿಡಿದು ನಿಂತಾಗ, ದಿಗ್ವಿಜಯದ ಹೆಮ್ಮೆ ನನ್ನನ್ನು ಆವರಿಸಿತು. ಅಲ್ಲೇ ಅವನನ್ನು ಗರಗರ ತಿರುಗಿಸಿದೆ. ಇನ್ನೇನು ಅವನನ್ನು ಕೆಳಗೆ ಕುಕ್ಕಿ ವಿಜಯದ ಕೊನೆಯನ್ನು ಮುಟ್ಟಬೇಕೆಂದಿರುವಷ್ಟರಲ್ಲಿ, ಅರಿವಿನ ಮಿಂಚೊಂದು ಮನದಾಳದಿಂದ ನುಸುಳಿಬಂತು. 'ನಾನು ಮಾಡುತ್ತಿರುವುದು ಸರಿಯೇ? ಅಣ್ಣನಿಗೆ ಪಾಠ ಕಲಿಸಬೇಕೆಂದು ಹೊರಟ ನಾನು ತಿಳಿಗೇಡಿಯಾಗುತ್ತಿರುವೆನಲ್ಲ. ಭರತನೇನು ಸಾಮಾನ್ಯನೇ? ಹಿರಿಯಣ್ಣ, ಚಕ್ರವರ್ತಿ – ಇಂತಹ ಮಹಿಮೆಯುಳ್ಳ ಅವನನ್ನು ಕೆಳಗೆ ಕುಕ್ಕಿ ಅವಮಾನಗೊಳಿಸಲು ಹೊರಟಿರುವೆನಲ್ಲ,



ನನ್ನ ಬುದ್ಧಿಗೆ ಮಂಕು ಕವಿಯಿತಾದರೂ ಏಕೆ? ಸದ್ಯ ಈಗಲಾದರೂ ಬುದ್ಧಿಬಂತಲ್ಲ' ಎಂದುಕೊಂಡು ಮೆಲ್ಲನೆ ಅಣ್ಣನನ್ನು ಕೆಳಗೆ ಇಳಿಸಿದೆ.

ಜಯಘೋಷ ಮೊಳಗುತ್ತಿತ್ತು. ಆದರೆ ಆ ಜಯಘೋಷ ಎಂದಿನ ಸಂತಸ-ಸಂಭ್ರಮಗಳನ್ನು ನನಗೆ ತಂದುಕೊಡಲಿಲ್ಲ. ಏನೋ ಮುಜುಗರ. 'ಇದೆಲ್ಲ ಬೇಕಿತ್ತೇ? ನಾನು ಮಾಡಿದುದು ಸರಿಯೇ? ಪ್ರೀತಿಪಾತ್ರನಾದ ಅಣ್ಣನನ್ನು ನೋಯಿಸಿದೆನಲ್ಲ...' ಎಂದೆಲ್ಲ ಯೋಚಿಸುತ್ತಿರುವಷ್ಟರಲ್ಲಿ ಭರತಣ್ಣ ನನ್ನ ಮೇಲೆ ಚಕ್ರರತ್ನವನ್ನು ಪ್ರಯೋಗಿಸಿಬಿಟ್ಟ. ಆದರೆ ಆಶ್ಚರ್ಯ, ಅದು ನನಗೆ ಪ್ರದಕ್ಷಿಣೆ ಬಂದು, ಬಲಭಾಗದಲ್ಲಿ ವಿಧೇಯವಾಗಿ ಯೆಂಬಂತೆ ನಿಂತುಕೊಂಡುಬಿಟ್ಟಿತು.

ಭರತನ ಕಡೆಯಿಂದ ನಾನು ಅಂತಹ ಕೃತ್ಯವನ್ನು ನಿರೀಕ್ಷಿಸಿರಲಿಲ್ಲ; ಅಥವಾ ಚಕ್ರವರ್ತಿ ಎನಿಸಿಕೊಂಡ ಅವನು ತನ್ನ ಪರಾಭವವನ್ನು ಸಹಿಸದೆ ಹಾಗೆ ಚಕ್ರರತ್ನ ಪ್ರಯೋಗ ಮಾಡಿದುದರಲ್ಲಿ ಆಶ್ಚರ್ಯವಿಲ್ಲವೋ ಏನೋ. ಆದರೆ ನನಗೆ ಮಾತ್ರ ಅದು ಹೊಸ ಪಾಠವನ್ನೇ ಕಲಿಸಿತು. ಅಣ್ಣನಿಗೆ ಪಾಠಕಲಿಸ ಹೊರಟ ನಾನು, ನಿಜವಾಗಿ ಪಾಠ ಕಲಿತೆ! ಜೀವನ ರಹಸ್ಯವನ್ನು ಅರಿತೆ!

ಭರತನಿಗೆ ಎಲ್ಲರೂ ಛೀಮಾರಿ ಹಾಕಲು ಪ್ರಾರಂಭಿಸಿದರು. ಸಲ್ಲದ ಕೆಲಸವನ್ನು ಮಾಡಿದುದಕ್ಕಾಗಿ ಕುಲವೃದ್ಧರು ಆತನನ್ನು ಧಿಕ್ಕರಿಸಿದರು, ತಿರಸ್ಕರಿಸಿದರು. ನನಗೆ ಆಸೆ-ಪ್ರತ್ಯಾಸೆಗಳ ಬಗೆಗೆ ತಿರಸ್ಕಾರ ಮೂಡಿತು. ಆದರೆ ಭರತನ ಮೇಲಲ್ಲ. 'ಈ ರಾಜ್ಯ ವ್ಯಾಮೋಹ ವೃಷಭನ ಮಕ್ಕಳನ್ನೂ ತಪ್ಪುದಾರಿಗೆ ಎಳೆಯಿತೆಂದ ಮೇಲೆ ಹೇಳುವುದೇನು? ಸೋದರ ಸೋದರರ ನಡುವೆ ಜಗಳ ತಂದೊಡ್ಡುವ ಈ ರಾಜ್ಯ ಸಂಪತ್ತನ್ನು ಆಶ್ರಯಿಸುವುದಾದರೂ ಹೇಗೆ? ಆಶಿಸುವುದಾದರೂ ಎಂತು? ನಾನು ಇದುವರೆಗೆ ಅನುಭವಿಸಿದ ರಾಜ್ಯಸಂಪತ್ತು ಭೋಗೋಪಭೋಗಗಳೆಲ್ಲವೂ ಶಾಶ್ವತವಾದುದಲ್ಲ' ಎಂಬ ಗಟ್ಟಿಭಾವ ನೆಲೆಗಟ್ಟುತ್ತ ಹೋಯಿತು. ಅಯ್ಯನಾದ ವೃಷಭನಾಥ ಇವೆಲ್ಲವನ್ನೂ ತ್ಯಜಿಸಿ ಶಾಶ್ವತ ಸುಖವನ್ನು, ಆತ್ಮಾನಂದವನ್ನು ಪಡೆದುಕೊಂಡ ನೆಲೆ ಮನದಾಳದಲ್ಲಿ ಬೇರೂರಿಬಿಟ್ಟಿತು. ಅಯ್ಯನಂತೆ ನಾನೂ ಆಗಬೇಕು ಎಂಬ ದೃಢತೆ ನನ್ನಲ್ಲಿ ಉಂಟಾಯಿತು. ದೀಕ್ಷೆಯನ್ನು ತೆಗೆದುಕೊಳ್ಳಲು ನಿಶ್ಚಯಿಸಿದೆ. ಅಲ್ಲದೆ ಭರತನ ಸ್ಥಿತಿಯನ್ನು ನನಗೆ ನೋಡಲಾಗಲಿಲ್ಲ. ಅವನನ್ನು ಸಮಾಧಾನಪಡಿಸಿ ನುಡಿದೆ – 'ಅಣ್ಣ, ನಾಚಿಕೆ ಬಿಡು. ಅಣ್ಣ ತಮ್ಮಂದಿರ ನಡುವಣ ಕಲಹ ಹೊಸದೇನಲ್ಲ. ನನ್ನ ಇದುವರೆಗಿನ ಅವಿನಯವನ್ನು ಕ್ಷಮಿಸು. ನನಗೆ ಈ ರಾಜ್ಯಲಕ್ಷ್ಮಿ ಬೇಡ. ನೀನು ಬಯಸಿದ ಈ ರಾಜ್ಯಲಕ್ಷ್ಮಿಯನ್ನು ಬಯಸಿದರೆ, ನೀನು ಬಯಸಿದ ಹೆಣ್ಣನ್ನು ನಾನು ಬಯಸಿದಂತೆ ಆಗಲಿಲ್ಲವೇ? ನಮ್ಮ ಕುಲಕ್ಕೆ ಮಸಿ ಬಳಿದಂತೆ ಆಗುವುದಿಲ್ಲವೇ? ಅಣ್ಣ, ತೆಗೆದುಕೋ ಈ ರಾಜ್ಯವನ್ನು. ತಪಸ್ಸಿಗೆ ನಿಂತು ನಾನು ಇದುವರೆಗೆ ಮಾಡಿದ ದೋಷಗಳನ್ನು ನೀಗುತ್ತೇನೆ. ನನ್ನನ್ನು ಕ್ಷಮಿಸು' ಎಂದು ಬೇಡಿಕೊಂಡೆ. ನಿಜಕ್ಕೂ ನಾನಾಡಿದ ಮಾತುಗಳು ನನ್ನಂತರಂಗದ ಪಶ್ಚಾತ್ತಾಪದಿಂದ ಪುಟಿದು ಬಂದ ಮಾತುಗಳಾಗಿದ್ದುವು.

ಭರತ, ಎಷ್ಟೆಂದರೂ ನನ್ನಣ್ಣನಲ್ಲವೇ? ಅಯ್ಯನ ಹಿರಿಯ ಮಗನಲ್ಲವೇ? ಪಶ್ಚಾತ್ತಾಪದ ಬೇಗುದಿಯಲ್ಲಿ ಅವನೂ ನನ್ನಂತೆಯೇ ಬೆಂದಿದ್ದ. ತಾನು ಚಕ್ರವರ್ತಿ ಎಂಬ ಭಾವ ಅವನಲ್ಲಿ ಈಗ ನುಸುಳಿಹೋಗಿತ್ತು. ಸೋದರ ವಾತ್ಸಲ್ಯ ಭುಗಿಲೆದ್ದಿತು. ನಾನು ರಾಜ್ಯವನ್ನು ತೊರೆದು, ದೀಕ್ಷೆಯನ್ನು ಕೈಗೊಳ್ಳುತ್ತಿರುವ ವಿಚಾರ ಅವನಿಗೆ ರುಚಿಸದಾಯಿತು. ಅವನು ನನ್ನನ್ನು ಕೇಳಿಕೊಂಡ – 'ಬೇಡಮ್ಮ... ಉಳಿದ ತಮ್ಮಂದಿರೂ ದೀಕ್ಷಿತರಾಗಿ ಹೊರಟುಹೋದರು. ಮನು ಕುಲತಿಲಕನಾಗಿ ತಮ್ಮನಾಗಿ ಉಳಿದಿರುವವ ನೀನೊಬ್ಬನೇ. ನೀನೂ ತಪಸ್ಸಿಗೆ ಹೊರಟುಹೋದರೆ ನಾನು ಯಾರೊಡನೆ ಈ ಸುಖ ಸಂಪತ್ತನ್ನು ಹಂಚಿಕೊಳ್ಳಲಿ...' ಆದರೆ, ಅಣ್ಣನ ಈ ಮೊರೆ ನನ್ನನ್ನು ವಿಚಲಿತನನ್ನಾಗಿಸಲಿಲ್ಲ. ನನ್ನ

ವೈರಾಗ್ಯ ಭಾವದ ಭಾವರಸದಲ್ಲಿ ನಾನು ಸಂಪೂರ್ಣ ಮುಳುಗಿಹೋಗಿದ್ದೆ. ಭರತಣ್ಣ ಅಷ್ಟಕ್ಕೇ ಸುಮ್ಮನಿರದೆ ನನ್ನ ಪಾದಗಳ ಬಳಿ ಕುಳಿತು ಕಣ್ಣೀರು ಸುರಿಸಿದ. ನನಗೂ ತಡೆಯಲಾಗಲಿಲ್ಲ ನನಗೂ ಅರಿವಿಲ್ಲದಂತೆ ಕಣ್ಣೀರಿನ ಧಾರೆ ಹರಿಯಿತು. ಭರತಣ್ಣ ಕಣ್ಣೀರಿನಿಂದ ನನ್ನ ಪಾದಗಳನ್ನು ತೊಳೆಯುತ್ತಿದ್ದಾನೆ! ನಾನಾದರೋ ಅವನಿಗೆ ಕಣ್ಣೀರಿನಿಂದ ರಾಜ್ಯಾಭಿಷೇಕ ಧಾರೆ ಎರೆಯುತ್ತಿದ್ದೇನೆ!

ಅಂತೂ ಭರತಣ್ಣನನ್ನು ಒಪ್ಪಿಸಿ ನಾನು ವೃಷಭನಾಥನ ಸಮವಸರಣಕ್ಕೆ ಹೋದೆ. ಆ ಪಾವನ ಉಪದೇಶ ಮಂಟಪದಲ್ಲಿ, ಅಯ್ಯನಿಂದಲೇ ದೀಕ್ಷೆಯನ್ನು ತೆಗೆದುಕೊಂಡೆ. ಆಗ ಅಲ್ಲಿ ನೆರೆದ ದೇವ-ಮಾನವಾದಿಗಳು ಮೊಳಗಿಸಿದ ಜಯಕಾರ ನನ್ನಲ್ಲಿ ಒಂದು ರೀತಿಯ ಆತ್ಮಾನಂದವನ್ನು ತಂದುಕೊಟ್ಟಿತು. ನಾನು ಭರತಣ್ಣನನ್ನು ಸೋಲಿಸಿದಾಗ ಪಡೆದ ಜಯಕಾರಕ್ಕೂ ಇಲ್ಲಿನ ಜಯಕಾರಕ್ಕೂ ಎಷ್ಟು ವ್ಯತ್ಯಾಸ? ಒಂದು ಅಹಮಿಕೆಗೆ ಭೂಮಿಕೆಯಾದರೆ ಮತ್ತೊಂದು ಅಹಂ ನಿರಸನಕ್ಕೆ!

ದೀಕ್ಷಿತನಾದ ನಾನು ಸಮವಸರಣದಿಂದ ಬಂದು, ಹೊರಗೆ ತಪಸ್ಸಿಗೆ ನಿಂತೆ. ಈ ಪ್ರಪಂಚದ ಜಂಜಡದಿಂದ, ಹುಟ್ಟು-ಸಾವಿನಿಂದ ದೂರಾಗುವ ದೃಢತೆಯಿಂದ ತಪವನ್ನು ಆಚರಿಸಿದೆ. ಸಮ್ಯಕ್ ಪಥವನ್ನು ತುಳಿದೆ. ವರ್ಷದವರೆಗೆ ಆತ್ಮಧ್ಯಾನದಲ್ಲಿ ಪ್ರತಿಮಾಯೋಗದಲ್ಲಿ ನಿಂತೆ. ಹುತ್ತ ಮೈಮೇಲೆ ಬೆಳೆದರೂ, ಬಳ್ಳಿಗಳು ನನ್ನನ್ನು ತಬ್ಬಿನಿಂತರೂ ನಾನು ವಿಚಲಿತನಾಗಲಿಲ್ಲ. ಆದರೂ ಏಕೋ ಸಂಪೂರ್ಣ ಆತ್ಮಾನಂದ ಜ್ಞಾನಪ್ರಭೆ ನನಗೆ ಇನ್ನೂ ಒದಗಿಬಂದಿರಲಿಲ್ಲ. ಮನದ ಮೂಲೆಯಲ್ಲಿ ಎಲ್ಲೋ ಒಂದು ಕಡೆ 'ಇದು ಭರತನ ಭೂಮಿ, ಅವನ ಭೂಮಿಯಲ್ಲಿ ನಿಂತು ನಾನು ತಪಸ್ಸನ್ನು ಮಾಡುತ್ತಿದ್ದೇನೆ' – ಎಂಬ ಭಾವ ಹೊಳೆದುಹೋಗುತ್ತಿತ್ತು. ಕೊನೆಗೆ ಭರತಣ್ಣ ಬಂದು 'ಇದು ನೀನು ಬಿಟ್ಟುಹೋದ ರಾಜ್ಯ. ನೀನು ಕೊಟ್ಟದ್ದು. ನನ್ನದು, ನಿನ್ನದು ಎಂಬ ಭಾವಬಿಡು. ಮನಃಕಷಾಯವನ್ನು ತೊರೆ, ನಿನ್ನನ್ನು ನೀನು ಬಗೆ' ಎಂದು ವಿವೇಕದ ಮಾತುಗಳನ್ನಾಡುವವರೆಗೆ ಆ ಭಾವ ಆಗಿಂದಾಗ್ಗೆ ಬಂದುಹೋಗುತ್ತಿತ್ತು. ಕೊನೆಗೆ, ಅವನು ಹಾಗೆ ನುಡಿಯುತ್ತಿದ್ದಂತೆ ನನ್ನಲ್ಲಿ ಉಳಿದಿದ್ದ ಆ ಮನಃಕಷಾಯ ಸಂಪೂರ್ಣ ಸೋರಿಹೋಯಿತು! ನನ್ನಲ್ಲಿ ಸಂಪೂರ್ಣ ಆತ್ಮಾನಂದ ನೆಲೆ ಯೂರಿತು. ನಾನು ನಾನಾದೆ, ಕೇವಲ ಜ್ಞಾನಿಯಾದೆ!

'ಸೋಹಂ-ಬುದ್ಧೋಹಂ-ಸಿದ್ಧೋಹಂ-ನಿತ್ಯೋಹಂ...'

ಡಾ|| ಸರಸ್ವತಿ ವಿಜಯಕುಮಾರ್
ನಂ. ೨೮, ೧ನೇ ಹಂತ, ನೃಪತುಂಗ ರಸ್ತೆ, ಕುವೆಂಪು ನಗರ, ಮೈಸೂರು – ೨೩

# ಆಹಾ ! ಮಹಾನಗರಿಯಲ್ಲೊಂದು ಆರ್ತನಾದ

ಆಗೋ ! ನೋಡಿ,
ಆಹಾ ನಗರಿಯ ನಟ್ಟನಡುವಿನಲ್ಲಿ,
ನೀಲಿ ಸ್ಕೂಟರನೇರಿ ತೇಲಿಹೋದಳು ಪೋರಿ.
ಅಪ್ಪ ಆಫಿಷಿಯಲ್ ಟೂರು, ಅಮ್ಮ ಆಫೀಸು-ಫೈಲು
ಇವಳು ಕಟಿಬದ್ಧ ಮೊಬೈಲು.
(ಬೆ. ೮ರಿಂದ ಸಂ. ೬) ನೀವು ಕರೆಮಾಡಿದ ಸಂಖ್ಯೆ ಕಾರ್ಯ ನಿರತವಾಗಿದೆ;
ದಯವಿಟ್ಟು, ಸ್ವಲ್ಪ ಹೊತ್ತಿನ ನಂತರ ಪ್ರಯತ್ನಿಸಿ.
ಮಗಳಿಗೆ ಏನು ಬೇಕೆಂದು ಹೇಗೆ ಹೇಳಲಿ ನಾನು –
ನೀವೇ ಕೇಳಬಾರದೇನು ?
(ಸಂ. ೬ರಿಂದ ರಾ. ೮) ನೀವು ಕರೆ ಮಾಡಿದ ಚಂದಾದಾರರು
ಸ್ವಿಚಾಫ್ ಮಾಡಿದ್ದಾರೆ – ದಯವಿಟ್ಟು...
ಸಂಜೆ ಒಂದೆರಡು ಗಂಟೆ ತಡವಾಯಿತೆಂದು
ಬಡಬಡಿಸಿದರೆ ಹೇಗೆ, ಹಳೆಯ ಕಾಲದವರ ಹಾಗೆ ?
ಬ್ರೌಸಿಂಗ ಸೆಂಟರಿನಲ್ಲಿರುತ್ತಾಳೆ-ತೆರೆದ ಕಪಾಟಿನೊಳಗೆ;
ಬಂದೇ ಬರುತ್ತಾಳೆ ಮನೆಗೆ – ಹತ್ತರ ಒಳಗೆ.
ಒಂದೆ ತಾಳಮ್ಮ; ಇಲ್ಲೇ ಇದ್ದೇನೆ ಕೆಫೆಟೇರಿಯಾದಲ್ಲಿ
ಅಭಿಷೇಕನೂ ಇದ್ದಾನೆ ಜೊತೆಯಲ್ಲಿ,
ಇನ್ನೂ ಎಂಟು ಆಗಿಲ್ಲ, ಆಗಲೇ ಶುರುವಾಯಿತಲ್ಲ...
ಬೇಗ ಹೋಗಬಾರದೆ, ಮಗಳೆ ?
ಪಾಪ ! ಮನೆಯಲ್ಲಿ ಅಮ್ಮ ಒಬ್ಬಳೆ.
(ರಾ. ೮ರಿಂದ ಬೆ. ೮) ನೀವು ಕರೆ ಮಾಡಿದ ಚಂದಾದಾರರು
ವ್ಯಾಪ್ತಿಯಿಂದ ಹೊರಗಿದ್ದಾರೆ; ದಯ...
ಪುಟ್ಟಿಗೆ ನೀನು ಹೆಚ್ಚು ಏನೂ ಹೇಳಬೇಡ ;
ಮುಂದಿನ ತಿಂಗಳು ಹೇಗೂ ನಾನು ಬರುತ್ತೇನೆ.
ಕ್ರೈಂ ಧಾರಾವಾಹಿಗಳನ್ನು ನೋಡುವುದಾದರೂ ಯಾತಕ್ಕೆ –
ಹೀಗೆ, ಸುಮ್ಮನೆ ತಲೆಕೆಡಿಸಿಕೊಳ್ಳುವುದಕ್ಕೆ ?

ಹೇಳಿ, ನೀಲಿ ನೀಲಿ ಸ್ಕೂಟರನೇರಿ.
ಬಂದಳೆ ನಮ್ಮ-ನಿಮ್ಮ ಕಿಶೋರಿ –
ಆಹಾ ನಗರಿಯ ಕತ್ತಲೆ ಸೀಳಿ !?
ನೀವು ಕರಕರೆ ಮಾಡಿದ ಚಂದಾದಾರರು ಸ್ವಿಚಾಫ್ ಮಾಡಿದ್ದಾರೆ
ಅಥವಾ ವ್ಯಾಪ್ತಿಯಿಂದ ಹೊರಗಿದ್ದಾರೆ;
ಅಥವಾ ಸದ್ಯ ಪ್ರತಿಕ್ರಿಯಿಸುತ್ತಿಲ್ಲ; ದಯವಿಟ್ಟು...
ಸ್ವಲ್ಪ ವರ್ಷಗಳ ನಂತರ ಪ್ರಯತ್ನಿಸಿ.

ಅಲಕ ತೀರ್ಥಹಳ್ಳಿ
೮೨, ತ್ಯಾಗರಾಜ ರಸ್ತೆ, ಸೀಬಿನಕೆರೆ ಅಂಚೆ
ತೀರ್ಥಹಳ್ಳಿ - ೫೭೭ ೪೩೨



# ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ
# Karnataka State Pollution Control Board

ನೆನಪಿಡಿ !!

## ಆಸ್ಪತ್ರೆಗಳು
## ರೋಗ ಉಪಶಮನದ ಕೇಂದ್ರ – ರೋಗವೃದ್ಧಿಯ ತಾಣವಲ್ಲ





**ಆಸ್ಪತ್ರೆಗಳು ರೋಗವೃದ್ಧಿಯ ಕೇಂದ್ರಗಳು ಹೇಗಾಗುತ್ತವೆ ?**
**ಮುಖ್ಯವಾಗಿ ಆಸ್ಪತ್ರೆಯ ತ್ಯಾಜ್ಯ ವಸ್ತುಗಳು.**

ದೇಶದೆಲ್ಲಡೆ ಆಸ್ಪತ್ರೆಯ ತ್ಯಾಜ್ಯ ವಸ್ತುಗಳ ಅವೈಜ್ಞಾನಿಕ ವಿಲೇವಾರಿಯಿಂದ ಪರಿಸರ ಮಾಲಿನ್ಯ ದಿನದಿಂದ ದಿನಕ್ಕೆ ಭಯಾನಕವಾಗಿ ಬೆಳೆಯುತ್ತಿದೆ. ಆಸ್ಪತ್ರೆಯ ತ್ಯಾಜ್ಯ ವಸ್ತುಗಳಾದ ತುಂಡರಿಸಿದ ಅಂಗಾಂಗಗಳು, ಸೂಕ್ಷ್ಮಜೀವಿ ಸಮೂಹ, ಸಿರಂಜ್, ಬ್ಲೇಡ್, ಬ್ಯಾಂಡೇಜ್ ಬಟ್ಟೆಗಳನ್ನು, ಬಳಸಿದ ಹಾಸಿಗೆಗಳು ಮತ್ತು ಐ.ವಿ. ಟ್ಯೂಬ್‌ಗಳು ಹಾಗೂ ರಕ್ತ, ದೇಹವನ್ನು ತೊಳೆದ ನೀರು ಇವುಗಳು ವಾಯು, ಜಲ ಹಾಗೂ ನೆಲ/ಮಣ್ಣಿನಲ್ಲಿ ಬೆರೆತು ಮಾಲಿನ್ಯಗೊಂಡು ಹಾನಿಕಾರಕ ಸೂಕ್ಷ್ಮಜೀವಿಗಳಿಂದ ಪ್ರಾಣಿ, ಪಕ್ಷಿ ಮತ್ತು ಮನುಸಂಕುಲದ ನಾಶಕ್ಕೆ ನಾಂದಿ ಹಾಡಬಹುದು.

**ಆಸ್ಪತ್ರೆಯ ತ್ಯಾಜ್ಯ ವಸ್ತುಗಳಿಂದಾಗುವ ದುಷ್ಪರಿಣಾಮಗಳು**

ಆಸ್ಪತ್ರೆಯ ತ್ಯಾಜ್ಯ ವಸ್ತುಗಳ ಅವೈಜ್ಞಾನಿಕ ವಿಲೇವಾರಿಯಿಂದ ಮಾರಣಾಂತಿಕವಾಗಬಹುದಾದ ಏಡ್ಸ್, ಟಿ.ಬಿ., ಕ್ಯಾನ್ಸರ್, ಕಾಲರಾ, ಮಲೇರಿಯಾ, ಚರ್ಮರೋಗಗಳು ಬರಬಹುದು.

**ಕಾನೂನು/ನಿಯಮ, ಕಟ್ಟಳೆಗಳು ಇವೆಯೆ ?**

* 1998ರಲ್ಲಿ ಪ್ರಕಟಿಸಲಾದ ಆಸ್ಪತ್ರೆಯ ತ್ಯಾಜ್ಯ ವಸ್ತುಗಳ (ವ್ಯವಸ್ಥಾಪನೆ ಹಾಗೂ ನಿರ್ವಹಣೆ) ನಿಯಮಗಳ ಪ್ರಕಾರ ಆಸ್ಪತ್ರೆಯ ತ್ಯಾಜ್ಯ ವಸ್ತುಗಳನ್ನು ವೈಜ್ಞಾನಿಕವಾಗಿ ಮಾನವ ಇಲ್ಲವೇ ಪರಿಸರಕ್ಕೆ ಯಾವ ಧಕ್ಕೆ ಇಲ್ಲದಂತೆ ವಿಲೇವಾರಿ ಮಾಡಬೇಕಾಗಿರುತ್ತದೆ.
* ಬೇರೆ ಸಾಮಾನ್ಯ ತ್ಯಾಜ್ಯ ವಸ್ತುಗಳ ಜೊತೆ ಬೆರೆಸಬಾರದು. ಆಸ್ಪತ್ರೆ ತ್ಯಾಜ್ಯ ವಸ್ತುಗಳನ್ನು ಮೂಲ ಸ್ಥಳದಲ್ಲೇ ವಿಂಗಡಿಸಿ ನಿಯಮದಂತೆ ಶೇಖರಿಸಬೇಕಾಗಿದೆ.
* ಶೇಖರಿಸುವ ಪೆಟ್ಟಿಗೆ ಅಥವಾ ಡಬ್ಬಿಗಳನ್ನು ಸೂಕ್ತ ರೀತಿಯಲ್ಲಿ ಹೆಸರಿಸಬೇಕು.
* ವಸ್ತುಗಳನ್ನು ನಿಯಮಿತ ವಾಹನದಲ್ಲೇ ರವಾನಿಸಬೇಕು. ೪೮ ಘಂಟೆಯೊಳಗಿಂತಲೂ ಹೆಚ್ಚು ಕಾಲ ಶೇಖರಿಸಬಾರದು. ಈ ನಿಯಮವನ್ನು ಉಲ್ಲಂಘಿಸಿದವರಿಗೆ ಪರಿಸರ ಸಂರಕ್ಷಣೆ ಕಾಯ್ದೆ ೧೯೮೬ರಡಿಯಲ್ಲಿ ರೂ. ೧.೦೦ ಲಕ್ಷದವರೆಗೆ ಜುಲ್ಮಾನೆ ಅಥವಾ ಜೈಲು ಶಿಕ್ಷೆ ವಿಧಿಸಬಹುದಾಗಿರುತ್ತದೆ. ಅಥವಾ ಎರಡನ್ನೂ ವಿಧಿಸಬಹುದು. ಇಲ್ಲವೆ ಆರೋಗ್ಯ ಕೇಂದ್ರವನ್ನು ಮುಚ್ಚಲೂಬಹುದು.

**ಆರೋಗ್ಯ ಕೇಂದ್ರ ಮಾಲೀಕರಾಗಿ ನೀವೇನು ಮಾಡಬಹುದು ?**

* ಆಸ್ಪತ್ರೆಯ ತ್ಯಾಜ್ಯ ವಸ್ತುಗಳನ್ನು ಮೂಲ ಸ್ಥಳದಲ್ಲೇ ನಿಯಮದ ಪ್ರಕಾರ ವಿಂಗಡಿಸಿ ಶೇಖರಿಸಿ.
* ಶೇಖರಿಸುವ ಪೆಟ್ಟಿಗೆ ಅಥವಾ ಡಬ್ಬಿಗಳನ್ನು ನಿಯಮಾನುಸಾರ ಹೆಸರಿಸಿ.
* ಶೇಖರಿಸಲು ಬಣ್ಣದ ಡಬ್ಬಿಗಳನ್ನು ಬಳಸಿ.
* ವೈಜ್ಞಾನಿಕ ರೀತಿಯಲ್ಲಿ ವಿಲೇವಾರಿ ಮಾಡಿ.
* ಬ್ಲೇಡ್, ಸಿರಂಜ್‌ಗಳನ್ನು ರಕ್ಷಣಾ ಪರಿಕರಗಳೊಂದಿಗೆ ವ್ಯವಹರಿಸಿ ಅಥವಾ ವಿಲೇವಾರಿ ಮಾಡಿ. ಸಾಮಾನ್ಯ ತ್ಯಾಜ್ಯ ವಸ್ತುಗಳೊಂದಿಗೆ ಬೆರಸಬೇಡಿ.
* ಬೀದಿ ಕಸ ಆಯುವವರನ್ನು ಆಸ್ಪತ್ರೆಯ ತ್ಯಾಜ್ಯ ವಸ್ತುಗಳೊಂದಿಗೆ ದೂರವಿಡಿ. ನಿಮ್ಮ ಆರೋಗ್ಯ ಕೇಂದ್ರವನ್ನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ನೋಂದಾಯಿಸಿ ಪರವಾನಿಗೆ ಪಡೆದುಕೊಳ್ಳಿ.

**ಜನಸಾಮಾನ್ಯರು**

* ಆರೋಗ್ಯ ಕೇಂದ್ರದ ಹೊರಗೂ ಮತ್ತು ಒಳಗೂ ಶುಚಿ ಮತ್ತು ಸುರಕ್ಷಿತವಾದ ಸೇವೆಯನ್ನು ಒತ್ತಾಯಿಸಿ ಪಡೆಯಿರಿ. ಸಂಪೂರ್ಣ ರೋಗಾಣು ಮುಕ್ತಗೊಳಿಸಿದ ಉಪಕರಣಗಳನ್ನು ಬಳಸಿ.
* ಆಸ್ಪತ್ರೆಯ ಪರಿಕರಗಳು/ಉಪಕರಣಗಳನ್ನು ಮರುಬಳಕೆ ಮಾಡಬೇಡಿ.
* ಆಸ್ಪತ್ರೆಯ ತ್ಯಾಜ್ಯ ವಸ್ತುಗಳನ್ನು ಚೆಲ್ಲದಿರಿ/ಮುಟ್ಟದಿರಿ.
* ಶೌಚಾಲಯಗಳನ್ನು ಶುಚಿಯಾಗಿಡಿ, ಉಗುಳು ಡಬ್ಬಿಗಳನ್ನು ಬಳಸಿ.
* ಆಸ್ಪತ್ರೆಯನ್ನು ಶುಚಿಯಾಗಿಡಲು ಸಹಕರಿಸಿ.
* ನಿಯಮ ಪಾಲನೆಯಿಂದಾಗುವ ಪ್ರಯೋಜನಗಳು.
* ವಾಯು, ಜಲ ಮತ್ತು ನೆಲದಲ್ಲಿ ಮಲಿನಕಾರಕಗಳು ಮತ್ತು ರೋಗಾಣುಗಳ ಮಟ್ಟ ಮಹತ್ತರವಾಗಿ ಕಡಮೆಯಾಗುವುದು. ಇದರಿಂದ ಭಯಾನಕ ರೋಗಗಳ ಹರಡುವಿಕೆ ನಿಲ್ಲುವುದು.



ಸಾರ್ವಜನಿಕ ಹಿತದೃಷ್ಟಿಯ ಪ್ರಕಟಣೆ

**ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ**

4 ಮತ್ತು 5ನೇ ಮಹಡಿಗಳು, ಪರಿಸರ ಭವನ, ನಂ. 49, ಚರ್ಚ್ ರಸ್ತೆ, ಬೆಂಗಳೂರು-1.
ಫೋನ್ : 2558 6520 ಫ್ಯಾಕ್ಸ್ : 080-2558 6321 ಗ್ರಾಮ್ಸ್ : ಜಲರಕ್ಷಾ

"ಬನ್ನಿ ಜೊತೆಗೂಡಿ ಕೆಲಸ ನಿರ್ವಹಿಸೋಣ
ನಮ್ಮ ಭೂಮಿಯನ್ನು ಮತ್ತು ಅದರ
ಪರಿಸರವನ್ನು ರಕ್ಷಿಸಿ ಉಳಿಸೋಣ."

# ಪರ್ಯಾಯ ರಾಜಕಾರಣ : ಚಿಂತೆ, ಚಿಂತನೆ

**ಇಂ**ದುಧರ ಹೊನ್ನಾಪುರ ಅವರು ಕಾರಣಾಂತರಗಳಿಂದ ಬಂದಿಲ್ಲ. ಆದರಿಂದ ''ದಲಿತರು ಮತ್ತು ಪರ್ಯಾಯ ರಾಜಕಾರಣ'' ಎಂಬ ಈ ಗೋಷ್ಠಿಯ ಕೇಂದ್ರ ವಿಷಯದ ಮೇಲೆ ಪ್ರಬಂಧಮಂಡನೆ ಆಗಲಿಲ್ಲ. ಪರ್ಯಾಯ ರಾಜಕಾರಣ ಕಟ್ಟಬೇಕೆಂದು ಮುಂದಾಗಿರುವ ಮುಖ್ಯರಲ್ಲಿ ಇಂದುಧರ ಅವರೂ ಒಬ್ಬರು. ದಲಿತ ಚಿಂತಕರಲ್ಲಿಯೂ ಅವರು ಗಣ್ಯರು. ಈ ಸಂದರ್ಭದಲ್ಲಿ ಅವರ ಚಿಂತನೆಯ ಬಗ್ಗೆ ತಿಳಿಯುವುದು, ಇಂಥ ಪ್ರಜ್ಞಾವಂತರ ಸಭೆಯಲ್ಲಿ ಅವರ ಚಿಂತನೆ ಕುರಿತಂತೆ ಚರ್ಚೆ ನಡೆಯುವುದು ಅಗತ್ಯವಾಗಿತ್ತು; ಉಪಯುಕ್ತವೂ ಆಗುತ್ತಿತ್ತು. ಆ ಪ್ರಬಂಧಮಂಡನೆ ಆಗದೇ ಇರುವುದರಿಂದ ಈ ಗೋಷ್ಠಿಗೆ ಸಮಗ್ರತೆ ಬಂದಿಲ್ಲ; ಒಂದು ಬಗೆಯ ಕೊರತೆ ಉಂಟಾಗಿದೆ.

''ಮಹಿಳೆ ಮತ್ತು ಪರ್ಯಾಯ ರಾಜಕಾರಣ'' ಎಂಬ ವಿಷಯದ ಮೇಲೆ ಡಾ|| ಪಿ. ಎಲ್. ಧರ್ಮ ಅವರು ಪ್ರಬಂಧ ಮಂಡಿಸಿದರು. ಅವರ ಪ್ರಬಂಧದ ಬಗ್ಗೆ ಹೆಚ್ಚಿನ ಚರ್ಚೆ ಆಗಲಿಲ್ಲ. ''ರೈತ ಮತ್ತು ಪರ್ಯಾಯ ರಾಜಕಾರಣ'' ಎಂಬ ವಿಷಯದ ಮೇಲೆ ರಾಜ್ಯರೈತ ಸಂಘದ ಅಧ್ಯಕ್ಷ ಶ್ರೀ ಕೆ. ಎಸ್. ಪುಟ್ಟಣ್ಣಯ್ಯನವರು ಪ್ರಬಂಧ ಮಂಡಿಸಲಿಲ್ಲ; ಮಾತನಾಡಿದರು. ಅವರು ಅವರ ಭಾಷಣದಲ್ಲಿ ಪ್ರಸ್ತಾಪಿಸಿದ ಅಂಶಗಳ ಒಳಗೂ ಹೊರಗೂ ಮಹತ್ವದ ಚರ್ಚೆ ನಡೆಯಿತು. ಚರ್ಚೆಯ ಸಂದರ್ಭದಲ್ಲಿ ಮೊಗಳ್ಳಿ ಗಣೇಶ್ ಮೊದಲಾದವರು ಕೆಲವು ಮಹತ್ವದ ಪ್ರಶ್ನೆಗಳನ್ನು ಎತ್ತಿದರು. ಭೂರಹಿತ ಕೂಲಿ-ಕಾರ್ಮಿಕ ಜನಸಮೂಹವಾಗಿರುವ ದಲಿತರು ಮತ್ತು ಭೂ ಒಡೆತನದ ರೈತಸಮೂಹ ಒಂದೇ ವೇದಿಕೆಯ ಅಡಿಯಲ್ಲಿ ಸಮಾನ ಕಾರಣ/ಸಮಸ್ಯೆಗಳಿಗಾಗಿ ಹೋರಾಟ ಮಾಡುವುದು ನಮ್ಮ ಸಾಮಾಜಿಕ ವಾಸ್ತವದ ಸಂದರ್ಭದಲ್ಲಿ ಹೇಗೆ ಸಾಧ್ಯ ? ರೈತ ಸಂಘಗಳು ಮತ್ತು ದಲಿತ ಸಂಘರ್ಷ ಸಮಿತಿಗಳು ಒಟ್ಟುಗೂಡಿ ನಡೆಸಬೇಕೆಂದು ಹೊರಟಿರುವ ಪರ್ಯಾಯ ರಾಜಕಾರಣದ ಸ್ವರೂಪ ಯಾವ ಬಗೆಯದಾಗಿರುತ್ತದೆ ? – ಎಂಬಂಥ ಕೆಲವು ಗಂಭೀರ ಪ್ರಶ್ನೆಗಳ ಸುತ್ತ ಚರ್ಚೆ ಬೆಳೆಯಿತು.


ಕನ್ನಡ ವಿಶ್ವವಿದ್ಯಾಲಯ ಹಂಪಿಯ ದಲಿತ ಅಧ್ಯಯನ ಪೀಠ, ಮೈಸೂರು ವಿಶ್ವವಿದ್ಯಾನಿಲಯದ ಡಾ|| ಬಿ. ಆರ್ ಅಂಬೇಡ್ಕರ್ ಸಂಶೋಧನ ಮತ್ತು ವಿಸ್ತರಣ ಕೇಂದ್ರ – ಇವುಗಳ ಸಹಯೋಗದಲ್ಲಿ ಪರ್ಯಾಯ ರಾಜಕಾರಣ ಕುರಿತು ನಡೆದ ವಿಚಾರ ಸಂಕಿರಣದ 'ದಲಿತರು ಮತ್ತು ಪರ್ಯಾಯ ರಾಜಕಾರಣ' ವಿಚಾರ ಗೋಷ್ಠಿಯ (29-12-2004) ಅಧ್ಯಕ್ಷ ಭಾಷಣದ ವಿಸ್ತೃತ ರೂಪ.

ಪ್ರೊ|| ಜಿ. ಎಚ್. ನಾಯಕ

ಪರ್ಯಾಯ ರಾಜಕಾರಣ ಕಟ್ಟಬೇಕೆಂದು ಮುಂದಾಗಿ ಇರುವ ಮುಖ್ಯರಲ್ಲಿ ಪುಟ್ಟಣ್ಣಯ್ಯನವರೂ ಒಬ್ಬರು. ಅದಕ್ಕೆ ಸಂಬಂಧಿಸಿದಂತೆ ಅವರ ಚಿಂತನೆಗೆ ಮಹತ್ವ ಇದೆ. ಅವರು ಎಂಥ ಚಿಂತನೆಯ ಹಿನ್ನೆಲೆಯಿಂದ ಪರ್ಯಾಯ ರಾಜಕಾರಣ ಕಟ್ಟಲು ಮುಂದಾಗಿದ್ದಾರೆ, ಎಂಬುದು ಸ್ಪಷ್ಟವಾಗಿ ತಿಳಿಯ ಬೇಕಾದದ್ದು ಅಗತ್ಯ. ಚರ್ಚೆಯ ಸಂದರ್ಭದಲ್ಲಿ ಪ್ರಸ್ತಾಪವಾದ ಎಲ್ಲ ಅಂಶಗಳೂ, ಸೂಚಿತವಾದ ಎಲ್ಲ ಸಲಹೆಗಳೂ ತುಂಬ ಮಹತ್ವದವು, ಒಪ್ಪಲೇಬೇಕಾದಂಥವು ಎಂದೇನಿಲ್ಲ. ಆದರೆ ಅವುಗಳಲ್ಲಿ ಕೆಲವಾದರೂ ಗಂಭೀರ ಪರಿಶೀಲನೆಗೆ, ಚಿಂತನೆಗೆ ಅರ್ಹವಾದವು. ಪುಟ್ಟಣ್ಣಯ್ಯನವರು ಅಂಥವುಗಳನ್ನು ಗಂಭೀರವಾಗಿ ಪರಿಶೀಲಿಸುವುದು ಅಗತ್ಯ; ಉಪಯುಕ್ತ.

- ೨ -

ಕೇಂದ್ರದ ಮಾಜಿ ಮಂತ್ರಿ ಶ್ರೀನಿವಾಸ ಪ್ರಸಾದ್ ಅವರು ಉದ್ಘಾಟನಾ ಭಾಷಣ ಮಾಡಿದರು. ಈಗ ಬೇಕಾಗಿರುವುದು ಪರ್ಯಾಯ ರಾಜಕಾರಣವಲ್ಲ; ಪರ್ಯಾಯ ರಾಜಕೀಯ ವ್ಯವಸ್ಥೆ ಎಂಬುದು – ನಾನು ಗ್ರಹಿಸಿರುವಂತೆ ಅವರು ಪ್ರಸ್ತಾಪಿಸಿದ ಮುಖ್ಯ ಅಂಶವಾಗಿತ್ತು.

ಇಂಥ ಮಾತು, ಇಂಥ ಅಭಿಪ್ರಾಯ ಹೊಸತೇನಲ್ಲ; ಅದನ್ನು ಗಂಭೀರವಾಗಿಯೆ ಪರಿಶೀಲಿಸಬೇಕಾಗುತ್ತದೆ.

ರಾಮಕೃಷ್ಣ ಹೆಗಡೆಯವರು ಈಗಿರುವ ಸಂಸದೀಯ ಪದ್ಧತಿಯ ರಾಜಕೀಯ ವ್ಯವಸ್ಥೆಯ ಬದಲು ಅಧ್ಯಕ್ಷೀಯ ಪದ್ಧತಿಯ ರಾಜಕೀಯ ವ್ಯವಸ್ಥೆ ಬೇಕು, ಎಂದು ಪ್ರತಿಪಾದಿಸಿದ್ದರು. ವಾಜಪೇಯಿ, ಅಡ್ವಾನಿ ಬಳಗದ ಬಿಜೆಪಿ ನೇತೃತ್ವದ ಎನ್.ಡಿ.ಎ. (ನ್ಯಾಷನಲ್ ಡೆಮೋಕ್ರೆಟಿಕ್ ಅಲಿಯನ್ಸ್) ಸರ್ಕಾರ ಕೇಂದ್ರದಲ್ಲಿ ಆಳುತ್ತಿದ್ದಾಗ ಹಿಂದೂ ರಾಷ್ಟ್ರದ ಪರಿಕಲ್ಪನೆಯ ರಾಜ್ಯ ವ್ಯವಸ್ಥೆಯ ಪರ ಒಲವುಳ್ಳದ್ದಾಗಿತ್ತು. ಅದರ ಭಾಗವಾಗಿ ಸಂವಿಧಾನ ಮರುಪರಿಶೀಲನೆ ಕುರಿತು ಚಿಂತನೆ ನಡೆಸಿ ಆ ಬಗ್ಗೆ ವರದಿ ಸಲ್ಲಿಸಲೆಂದು ಒಂದು ಸಮಿತಿಯನ್ನು ನೇಮಿಸಿತ್ತು. ಶ್ರೀನಿವಾಸ ಪ್ರಸಾದ್ ಅವರು ಆ ಎನ್.ಡಿ.ಎ. ಸರ್ಕಾರದ ಸಹಭಾಗಿತ್ವದ ರಾಜಕೀಯ ಪಕ್ಷವೊಂದರ ಸದಸ್ಯರಾಗಿದ್ದವರು. ಆ ಸರ್ಕಾರದಲ್ಲಿ ಮಂತ್ರಿಯಾಗಿದ್ದವರು. ಸಂವಿಧಾನ ಮರುಪರಿಶೀಲನೆಗೆ ಸಂಬಂಧಿಸಿದಂತೆ ಆ ಸರ್ಕಾರದ ನಿಲುವಿಗೆ ಅವರ ವಿರೋಧವೇನೂ ಇರಲಿಲ್ಲ. ಅದಕ್ಕೆ ಅವರು ಬದ್ಧರಾಗಿದ್ದರು. ಅದರ ಪರವಾಗಿಯೆ ಅವರು ಸಾರ್ವಜನಿಕವಾಗಿಯೂ ಮಾತನಾಡಿದ್ದುಂಟು.

ಎನ್.ಡಿ.ಎ. ಸರ್ಕಾರದ ಸಂವಿಧಾನ ಮರುಪರಿಶೀಲನೆಯ ಹಿಂದೆ ಮತಧರ್ಮೀಯ ಪ್ರಜಾಸತ್ತಾತ್ಮಕ ವ್ಯವಸ್ಥೆಯ ಬಗೆಗಿನ ಒಲವಿತ್ತು. ನಮ್ಮ ದೇಶದ ಈಗಿರುವ ಸಂವಿಧಾನ ಪ್ರತಿಪಾದಿಸುವ ಸೆಕ್ಯುಲರ್, ಸೋಷಿಯಲಿಸ್ಟ್ ಅಂದರೆ ಜಾತಿ-ಮತಧರ್ಮ ನಿರಪೇಕ್ಷ, ಸಮಾಜವಾದೀ ಪ್ರಜಾಸತ್ತಾತ್ಮಕ ವ್ಯವಸ್ಥೆಯ ಕಡೆ ಒಲವಿರಲಿಲ್ಲ. ಪರ್ಯಾಯ ರಾಜಕೀಯ ವ್ಯವಸ್ಥೆಯ ಅಗತ್ಯದ ಬಗ್ಗೆ ಮಾತನಾಡುತ್ತಾ ಈಗಿರುವ ರಾಜಕೀಯ ವ್ಯವಸ್ಥೆಯಲ್ಲಿಯೇ ತಪ್ಪೇನಾದರೂ ಇದೆಯೇ, ಸಂವಿಧಾನದಲ್ಲಿ ತಪ್ಪುಗಳೇನಾದರೂ ಇವೆಯೆ ? ಸಂವಿಧಾನವನ್ನು ಬಳಸಿಕೊಂಡ ರೀತಿಯಲ್ಲೇ ಏನಾದರೂ ತಪ್ಪಾಗಿದೆಯೆ – ಎಂಬಂಥ ಪ್ರಶ್ನೆಗಳನ್ನು ಕೇಳಿಕೊಂಡು ಉದ್ದಕ್ಕೂ ಶ್ರೀನಿವಾಸ ಪ್ರಸಾದ್ ಗಂಭೀರವಾಗಿಯೆ ಮಾತನಾಡಿದರು; ಪರ್ಯಾಯ ರಾಜಕೀಯ ವ್ಯವಸ್ಥೆಯ ಅಗತ್ಯವನ್ನು ಪ್ರತಿಪಾದಿಸಿದರು. ಆದರೂ ನಿರ್ದಿಷ್ಟವಾಗಿ ಯಾವ ಸ್ವರೂಪದ ಪರ್ಯಾಯ ರಾಜಕೀಯ ವ್ಯವಸ್ಥೆಯ ಪರಿಕಲ್ಪನೆ ಅವರ ಚಿಂತನೆಯ ಹಿಂದೆ ಇದೆ, ಎಂಬುದು ನನಗೆ ಸ್ಪಷ್ಟವಾಗಿ ಗೊತ್ತಾಗಲಿಲ್ಲ.

ದೇಶದ ರಾಜಕಾರಣ ಗಬ್ಬೆದ್ದುಹೋಗಿದೆ. ಈ ಅಭಿಪ್ರಾಯ ಸಾರ್ವತ್ರಿಕವಾಗಿದೆ. ಶ್ರೀನಿವಾಸ ಪ್ರಸಾದ್ ಅವರೂ ಅವರ ಭಾಷಣದಲ್ಲಿ ರಾಜಕಾರಣ ಗಬ್ಬೆದ್ದು ಹೋಗಿದೆ ಎಂದರು. ನಾವೂ ನೀವೂ ಎಲ್ಲರೂ ಈ ವಿಷಯದಲ್ಲಿ ಏಕಾಭಿಪ್ರಾಯ ಉಳ್ಳವರೇ ಆಗಿದ್ದೇವೆ. ಹೀಗೆ ಗಬ್ಬೆದ್ದುಹೋಗಿರುವ ಸ್ಥಿತಿ ಉಂಟಾಗಿರುವುದರಿಂದ ಪರ್ಯಾಯ ರಾಜಕಾರಣದ ಅಗತ್ಯ ಉಂಟಾಗಿದೆ, ಎಂಬುದು ಪರ್ಯಾಯ ರಾಜಕಾರಣದ ಮಾತನಾಡುತ್ತಿರುವವರ ಸಾಮಾನ್ಯ ಅಭಿಪ್ರಾಯವಾಗಿದೆ ಎಂಬುದು ನಿಜ.

ಹೀಗೆ ರಾಜಕಾರಣ ಗಬ್ಬೆದ್ದುಹೋಗಿರುವುದಕ್ಕೆ ಕಾರಣ ಅಥವಾ ಕಾರಣಗಳು ಏನು ? ಈವರೆಗೆ ರಾಜಕಾರಣ ಮಾಡುತ್ತ, ಆಡಳಿತ ನಡೆಸುತ್ತ ಬಂದ ರಾಜಕಾರಣಿಗಳು ಕಾರಣವೊ ಅಥವಾ ಬೇರೆ ಏನಾದರೂ ಕಾರಣ ಅಥವಾ ಕಾರಣಗಳು ಇವೆಯೊ, ಎಂಬುದು ಪ್ರಶ್ನೆಯಾಗಿದೆ.

ನಾವು ಒಪ್ಪಿರುವ ರಾಜಕೀಯ ವ್ಯವಸ್ಥೆಯೇ ಅದಕ್ಕೆ ಕಾರಣ ಎಂದು ಹೇಳುವವರು ಕಳೆದ ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲದಿಂದ ದೇಶದ ಆಡಳಿತವನ್ನು ನಡೆಸುತ್ತ, ಆ ಪ್ರಕ್ರಿಯೆಯಲ್ಲಿ ಪಾಲುದಾರರಾಗುತ್ತ ಬಂದ ರಾಜಕಾರಣಿಗಳ ಮೇಲೆ ನೇರ ಆರೋಪ ಹೊರಿಸುವುದಿಲ್ಲ. ಸ್ವಾತಂತ್ರ್ಯಾನಂತರದ ಕಾಲದಲ್ಲಿ ನಾವು ಒಪ್ಪಿಕೊಂಡು ಬಂದ ರಾಜಕೀಯ ವ್ಯವಸ್ಥೆಯ ಮೇಲೆಯೇ ಅವರು ಹೆಚ್ಚಿನ ಹೊಣೆ ಹೊರಿಸುತ್ತಾರೆ. ಶ್ರೀನಿವಾಸ ಪ್ರಸಾದ್ ಅವರ ಚಿಂತನೆಯ ಧಾಟಿ, ಧೋರಣೆ ಆ ಬಗೆಯದಾಗಿ ನನಗೆ ತೋರಿತು. ಮತಧರ್ಮೀಯ ರಾಜ್ಯ ವ್ಯವಸ್ಥೆಯ ಪರ ವಾದಿಗಳ ಹಾಗೆ ಅಥವಾ ಮಾರ್ಕ್ಸ್‌ವಾದಿಗಳ ರೀತಿಯಲ್ಲಿ ಪರ್ಯಾಯ ರಾಜಕೀಯ ವ್ಯವಸ್ಥೆ ಕುರಿತು ಯಾವುದೇ ಒಂದು ನಿರ್ದಿಷ್ಟ

ರಾಜಕೀಯ ವಿಚಾರವಾದದ ಅಂದರೆ 'ಪೊಲಿಟಿಕಲ್ ಐಡಿಯಾಲಜಿ'ಯ ಹಿನ್ನೆಲೆಯಿಂದ ಶ್ರೀನಿವಾಸ ಪ್ರಸಾದ್ ಅವರು ಯೋಚಿಸುತ್ತಿರುವಂತೆಯೂ ಕಾಣಲಿಲ್ಲ.

ನಮ್ಮ ಈಗಿನ ರಾಜಕೀಯ ವ್ಯವಸ್ಥೆಯ ನಿರೂಪಣೆ ನಮ್ಮ ಸಂವಿಧಾನದಲ್ಲಿದೆ. ಅದರ ಪ್ರಸ್ತಾವನೆಯಲ್ಲಿ ನಮ್ಮ ಈಗಿನ ರಾಜಕೀಯ ವ್ಯವಸ್ಥೆಯ ನಿರೂಪಣೆಯಾಗಿರುವ ಸಂವಿಧಾನವು ಭಾರತದ ಸಮಗ್ರ ಜನತೆ ತಮಗೆ ತಾವೆ ಕೊಟ್ಟುಕೊಂಡ ಆಡಳಿತ ಸಂಹಿತೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಯಾರೇ ಯಾವುದೇ ರಾಜಕೀಯ ಅಧಿಕಾರ ವಹಿಸಿಕೊಳ್ಳುವಾಗ ಸಂವಿಧಾನಕ್ಕೆ ನಿಷ್ಠೆ ವ್ಯಕ್ತಪಡಿಸುವ ಪ್ರಮಾಣವಚನವನ್ನು ಸ್ವೀಕರಿಸಬೇಕಾಗುತ್ತದೆ.

ಇಂದು ದೇಶದ ರಾಜಕಾರಣ ಗಬ್ಬೆದ್ದು ಹೋಗಿದ್ದಕ್ಕೆ, ರಾಜಕಾರಣಿಗಳು ಭ್ರಷ್ಟರಾಗಿದ್ದಕ್ಕೆ, ಜನ ಹೊಣೆಗೇಡಿಗಳಾಗಿ ನಡೆದುಕೊಳ್ಳುವಂತಾಗಿದ್ದಕ್ಕೆ ಈಗಿರುವ ಸಂವಿಧಾನ ಮತ್ತು ಅದು ನಿರೂಪಿಸುವ ರಾಜ್ಯ ವ್ಯವಸ್ಥೆಯೇ ಕಾರಣ; ಆದ್ದರಿಂದ ಸಂವಿಧಾನದಲ್ಲಿ, ರಾಜಕೀಯ ವ್ಯವಸ್ಥೆಯಲ್ಲಿ ಬದಲಾವಣೆಯಾದರೆ ಮಾತ್ರ ಈ ಗಬ್ಬೆದ್ದುಹೋಗಿರುವ ಸ್ಥಿತಿಯಿಂದ ಹೊರಗೆ ಬರಬಹುದು, ಎಂಬುದು ರಾಜಕೀಯ ವ್ಯವಸ್ಥೆಯ ಬದಲಾವಣೆಯಲ್ಲಿಯೆ ಪರ್ಯಾಯ ರಾಜಕಾರಣದ ಪರಿಕಲ್ಪನೆಯನ್ನು ಪ್ರತಿಪಾದಿಸುತ್ತಿರುವವರ ಅಭಿಪ್ರಾಯ ಎಂದಾಗುತ್ತದೆ. ಇಂಥ ಯೋಚನಾಕ್ರಮಕ್ಕೆ ಸಮರ್ಥನೆ ಇದೆಯೇ ?

ದೇಶದ ಸಮಗ್ರ ಜನತೆಯ ಹೆಸರಿನಲ್ಲಿ ಸಂವಿಧಾನ ಇದೆಯಾದರೂ ವಾಸ್ತವದಲ್ಲಿ ಆ ಸಂವಿಧಾನವನ್ನು ಜನತೆ ರಚಿಸಿದ್ದಲ್ಲ; ಸಮಗ್ರ ಜನತೆ ಸಂವಿಧಾನ ರಚಿಸುವುದು ಸಾಧ್ಯವೂ ಇಲ್ಲ. ಜನತೆಯ ಪರವಾಗಿ ಜನಪ್ರತಿನಿಧಿ ರಾಜಕಾರಣಿಗಳು, ಆ ಜನಪ್ರತಿನಿಧಿ ರಾಜಕಾರಣಿಗಳು ಆಯ್ಕೆ ಮಾಡಿದ ಸಂವಿಧಾನ ತಜ್ಞರು ದೇಶದ ಸಂವಿಧಾನವನ್ನು, ಆ ಮೂಲಕ ದೇಶದ ರಾಜಕೀಯ ವ್ಯವಸ್ಥೆಯನ್ನು ರೂಪಿಸಿದವರಾಗಿದ್ದಾರೆ; ನಿರೂಪಿಸಿದವರಾಗಿದ್ದಾರೆ. ಕಾನೂನು ದೃಷ್ಟಿಯಿಂದ ಅದು ಸಮಗ್ರ ಜನತೆಯ ಆಶೋತ್ತರಗಳನ್ನು ಪ್ರತಿನಿಧಿಸುವಂಥದೇ ಆಗಿರುತ್ತದೆ; ಜನತೆ ತನಗೆ ತಾನೆ ಕೊಟ್ಟುಕೊಂಡದ್ದಾಗಿರುತ್ತದೆ. ಆದ್ದರಿಂದ ರಾಜಕಾರಣಿಗಳು ಮಾತ್ರವಲ್ಲ, ಅವರೂ ಸೇರಿದಂತೆ ದೇಶದ ಸಮಗ್ರ ಜನತೆ ಅದರ ಹೊಣೆಗಾರಿಕೆಯನ್ನು ಹೊರಬೇಕಾಗುತ್ತದೆ; ಆ ಸಂವಿಧಾನಕ್ಕೆ ಸಂಪೂರ್ಣ ನಿಷ್ಠೆಯಿಂದ ನಡೆದುಕೊಳ್ಳಬೇಕಾಗುತ್ತದೆ. ಆ ಸಂವಿಧಾನ ಪ್ರತಿಪಾದಿಸುವ ರಾಜಕೀಯ ವ್ಯವಸ್ಥೆಯನ್ನು ಸಂವಿಧಾನ ರಚನಾ ಸಮಿತಿಯೊ, ಸಂವಿಧಾನ ತಜ್ಞರೊ ದೇಶಕ್ಕೆ ನೀಡಿದ್ದೊ, ಸೂಚಿಸಿದ್ದೊ ಅಲ್ಲ. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಕಲ್ಪಿಸಿಕೊಂಡಿದ್ದ ಸ್ವತಂತ್ರ ಭಾರತದ ರಾಜ್ಯವ್ಯವಸ್ಥೆಯಾದ ಪ್ರಜಾಪ್ರಭುತ್ವ ವ್ಯವಸ್ಥೆಗೆ ಭಾರತದ ವಾಸ್ತವಸಂದರ್ಭದ ವಿವೇಕದಲ್ಲಿ ಆ ಕಾಲದ ತಜ್ಞರು, ಪ್ರಾಜ್ಞರು ರೂಪಿಸಿದ್ದು ಆ ಸಂವಿಧಾನ. ರಾಷ್ಟ್ರೀಯ ಕಾಂಗ್ರೆಸ್ಸಿನ ಹಾಗೂ ಅದರ ಪ್ರಶ್ನಾತೀತ ನೇತಾರರಾಗಿದ್ದ ಗಾಂಧೀಜಿಯವರ ನಿಲುವು, ಚಿಂತನೆಗಳನ್ನು ಉದ್ದಕ್ಕೂ ವಿರೋಧಿಸುತ್ತ ಬಂದ ಡಾ. ಅಂಬೇಡ್ಕರ್ ಅವರೂ ಈ ರಾಜಕೀಯ ವ್ಯವಸ್ಥೆಯನ್ನು ಒಪ್ಪಿಯೇ ರೂಪಿಸಿದ ಸಂವಿಧಾನ ಅದು. ಈ ಅಂಶವನ್ನು ಸರಿಯಾಗಿ ಗ್ರಹಿಸಬೇಕು.

ನವೆಂಬರ್ ೬, ೨೦೦೪ರಂದು ತಮಿಳುನಾಡಿನ ಪುತಿಯ ತಮಿಝುಗಂನ ಸ್ಥಾಪಕ ಅಧ್ಯಕ್ಷರೂ, ತಮಿಳುನಾಡಿನ ಮಾಜಿ ಶಾಸನಸಭಾ ಸದಸ್ಯರೂ ಆದ ಡಾ. ಕೆ. ಕೃಷ್ಣಸ್ವಾಮಿ, ಎಂ. ಡಿ. ಅವರು ನನಗೆ ಫ್ಯಾಕ್ಸ್ ಮೂಲಕ ಒಂದು ಪತ್ರ ಕಳಿಸಿದ್ದರು. 'Self Determination of S.C's/S.T's for Democracy at Grassroot Level' ಎಂಬ ವಿಷಯದ ಮೇಲೆ ೪-೬, ಡಿಸೆಂಬರ್ ೨೦೦೪ ರಂದು ನವದೆಹಲಿಯಲ್ಲಿ ನಡೆಯುವ ರಾಷ್ಟ್ರಮಟ್ಟದ ವಿಚಾರ ಸಂಕಿರಣಕ್ಕೆ ಬಂದು ಭಾಗವಹಿಸಬೇಕೆಂದು ನನ್ನನ್ನು ಆಹ್ವಾನಿಸಿದ್ದರು. ದಲಿತರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರದ ಬಗ್ಗೆ ಹಕ್ಕೊತ್ತಾಯ ಮಾಡುವುದು, ಆ ಕುರಿತ ಹೇಳಿಕೆಯನ್ನು ಬಿಡುಗಡೆ ಮಾಡುವುದು ಆ ವಿಚಾರ ಸಂಕಿರಣದ ಉದ್ದೇಶ ಎಂದು ತಿಳಿಸಿದ್ದರು. ಅವರ ಆ ಅಭಿಪ್ರಾಯ, ನಿಲುವಿನ ಬಗ್ಗೆ ನನ್ನ ಸಹಮತ ಇಲ್ಲದ್ದರಿಂದ ಆ ವಿಚಾರ ಸಂಕಿರಣದಲ್ಲಿ ಭಾಗವಹಿಸಲು ನನ್ನ ಒಪ್ಪಿಗೆ ಇಲ್ಲ ಎಂದು ಫ್ಯಾಕ್ಸ್ ಮೂಲಕವೇ ನವೆಂಬರ್ ೮, ೨೦೦೪ರಂದು ನಾನು ತಿಳಿಸಿದ್ದೆ. ಆ ವಿಚಾರ ಸಂಕಿರಣ ನಡೆಯಿತೆ ಇಲ್ಲವೆ ಎಂಬುದು ನನಗೆ ಆಮೇಲೆ ಗೊತ್ತಾಗಲಿಲ್ಲ.

ಡಾ|| ಅಂಬೇಡ್ಕರ್ ಅವರು ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿರಲು ಒಪ್ಪಿದ್ದು, ಸಂವಿಧಾನ ರಚಿಸಿದ್ದು ಪುಣೆ ಒಪ್ಪಂದದ ನಂತರದ ಕಾಲದಲ್ಲಿ, ಅಂದರೆ ದಲಿತರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರ ಬೇಕು ಎಂಬ ಅವರ ಹಕ್ಕೊತ್ತಾಯವನ್ನು ಬಿಟ್ಟುಕೊಟ್ಟು ದಲಿತರ ಹಿತಾಸಕ್ತಿಗೆ ಸಂಬಂಧಿಸಿದ ಇತರ ಹಲವು ಅವಕಾಶ, ಸೌಲಭ್ಯಗಳನ್ನು ಅವರು ಪಡೆದಂಥ, ಗಾಂಧೀಜಿ ಮತ್ತು ಡಾ|| ಅಂಬೇಡ್ಕರ್ ನಡುವಿನ ಒಪ್ಪಂದದ ಅನಂತರದ ಕಾಲದಲ್ಲಿ. ಈ ಅಂಶವನ್ನೂ ಮರೆಯಬಾರದು.

ಯಾವ ಕಾರಣಕ್ಕೇ ಆಗಲಿ ಆಮರಣ ಉಪವಾಸ ಮಾಡುವುದು ಪ್ರಜಾಸತ್ತಾತ್ಮಕ ಮನೋಧರ್ಮಕ್ಕೆ ಸಂಗತವಾದದ್ದಲ್ಲ ಎಂಬ ಡಾ|| ಲೋಹಿಯಾ ಅವರ ಅಭಿಪ್ರಾಯದ ಬಗ್ಗೆ ನನ್ನ ಸಹಮತವಿದೆ. ಆದರೂ ಗಾಂಧೀಜಿಯ ಆ ಆಮರಣ ಉಪವಾಸದ ಹಿಂದಿದ್ದ ಉದ್ದೇಶವು ರಾಜಕೀಯ ಮುತ್ಸದ್ದಿತನದ್ದು ಮಾತ್ರವಲ್ಲ, ದಾರ್ಶನಿಕ ದೂರದರ್ಶಿತ್ವದ್ದಾಗಿತ್ತೆಂದೂ ನಾನು ತಿಳಿದಿದ್ದೇನೆ. ಆ ಸಂದರ್ಭದಲ್ಲಿ ಡಾ|| ಅಂಬೇಡ್ಕರ್ ಅವರು ತಳೆದ ನಿಲುವು, ಅವರು ಪರಿಸ್ಥಿತಿಯನ್ನು ನಿಭಾಯಿಸಿದ ರೀತಿ ಕೂಡ ಮಹಾಮುತ್ಸದ್ದಿಯ ರಾಜಕೀಯ ವಿವೇಕದ್ದಾಗಿತ್ತೆಂದೂ ನಾನು ತಿಳಿದಿದ್ದೇನೆ. ಗಾಂಧೀಜಿ ಮತ್ತು ಡಾ|| ಅಂಬೇಡ್ಕರ್ ಇಬ್ಬರಿಂದಲೂ ಆ ಒಪ್ಪಂದದ ಮೂಲಕ ದಲಿತರಿಗೆ ಮತ್ತು ಒಟ್ಟಿನಲ್ಲಿ ದೇಶಕ್ಕೆ ಚಾರಿತ್ರಿಕ ಮಹತ್ವದ ಹಿತಸಾಧನೆ ಆಯಿತೆಂದು ನಾನು ಭಾವಿಸಿದ್ದೇನೆ. ಗಾಂಧೀಜಿಯನ್ನು ಆ ವಿಷಯದಲ್ಲಿ ಆಕ್ಷೇಪಿಸುವುದಾಗಲಿ, ದಲಿತರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರದ ಮರುಹಕ್ಕೊತ್ತಾಯ ಮಾಡುವುದಾಗಲಿ ಸರಿಯೆಂದು ನನಗೆ ಅನಿಸುವುದಿಲ್ಲ. ಅದರಿಂದ ದಲಿತರಿಗಾಗಲಿ, ಸಮಗ್ರ ದೇಶಕ್ಕಾಗಲಿ ಒಳ್ಳೆಯದಾಗುತ್ತಿತ್ತು ಅಥವಾ ಒಳ್ಳೆಯದಾದೀತು ಎಂಬ ವಾದ ಸರಿಯಾದದ್ದಲ್ಲ. ಆ ಸಂದರ್ಭದ ಗಾಂಧೀಜಿ ಮತ್ತು ಡಾ|| ಅಂಬೇಡ್ಕರ್ ಅವರು ಸಾಮಾನ್ಯ ರಾಜಕಾರಣಿಗಳ ರೀತಿಯಲ್ಲಿ ನಡೆದುಕೊಳ್ಳದೆ ಮಹಾ ರಾಜನೀತಿಜ್ಞರ ರೀತಿಯಲ್ಲಿ, ಮಹಾ ಮಾನವತಾವಾದಿಗಳ ರೀತಿಯಲ್ಲಿ ನಡೆದುಕೊಂಡಿದ್ದಾರೆ. ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲದ ಭಾರತದ ರಾಜಕೀಯವು ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ. ಆ ಬಗ್ಗೆ ನಾನು ಇಲ್ಲಿ ಮಾತು ಬೆಳೆಸುವುದಿಲ್ಲ.

- ೩ -

ದೇಶದ ಸಂವಿಧಾನಕ್ಕೆ ರಾಜಕಾರಣಿಗಳು, ಸಮಗ್ರ ಜನತೆ ಸಂಪೂರ್ಣ ನಿಷ್ಠೆಯಿಂದ ನಡೆದುಕೊಂಡುಬಂದಿದ್ದರೂ ಪರಿಸ್ಥಿತಿ ಗಬ್ಬೆದ್ದುಹೋಗಿದೆ ಎಂಬುದು ನಿಜವಾಗಿದ್ದರೆ ಆಗ ನಮ್ಮ ದೇಶದ ಸಂವಿಧಾನದಲ್ಲಿಯೇ, ನಮ್ಮ ರಾಜಕೀಯ ವ್ಯವಸ್ಥೆಯಲ್ಲಿಯೇ ದೋಷವಿದೆ; ಆ ಕಾರಣದಿಂದಲೇ ದೇಶದ ರಾಜಕೀಯ ಗಬ್ಬೆದ್ದುಹೋಗಿದೆ, ಎಂಬ ತೀರ್ಮಾನಕ್ಕೆ ಬರಬಹುದಾಗಿತ್ತು. ಆದರೆ ಹಾಗಾಗಿದೆಯೆ ?

ಭ್ರಷ್ಟಾಚಾರ ಎಲ್ಲ ದೇಶಗಳಿಗೂ ಸಾಮಾನ್ಯವಾದ ಪಿಡುಗು. ಒಂದು ದೇಶದಲ್ಲಿ ಅದರ ಪ್ರಮಾಣ ಹೆಚ್ಚು ಇನ್ನೊಂದರಲ್ಲಿ ಅದರ ಪ್ರಮಾಣ ಕಡಮೆ. ಒಂದು ದೇಶದಲ್ಲಿಯೆ ಒಂದು ಕಾಲದಲ್ಲಿ ಹೆಚ್ಚು ಇನ್ನೊಂದು ಕಾಲದಲ್ಲಿ ಅದರ ಪ್ರಮಾಣ ಕಡಮೆ ಅಷ್ಟೆ. ಸಂಪೂರ್ಣ ಭ್ರಷ್ಟಾಚಾರಮುಕ್ತ ದೇಶ ಎಂಬುದಾಗಲಿ, ರಾಜಕಾರಣಿಗಳೆಂಬವರಾಗಲಿ, ಜನತೆ ಎಂಬುದಾಗಲಿ ಇಲ್ಲ; ಇರಲಿಲ್ಲ; ಇರುವುದು ಸಾಧ್ಯವೂ ಇಲ್ಲ. ಏನಿದ್ದರೂ ಅದು

ಪರ್ಯಾಯ ರಾಜಕಾರಣ ಮಾಡಬೇಕೆನ್ನುವವರು ರಾಜಕೀಯ ನಾಯಕತ್ವದ ಸ್ವರೂಪದ ಬಗ್ಗೆಯೂ ಗಂಭೀರವಾಗಿ ಚಿಂತನೆ ಮಾಡಬೇಕಾದ ಸಂದರ್ಭ ಕೂಡ ಇದೆ. ಜಾತಿ, ಮತಧರ್ಮೀಯ ವೋಟ್ ಬ್ಯಾಂಕ್ ರಾಜಕಾರಣದಿಂದಾಗಿ ಇಂಥ ಜಾತಿಯವರ ನಾಯಕರು, ಇಂಥ ಮತಧರ್ಮದವರ ನಾಯಕರು ಎಂದು ಮಾತ್ರ ಗುರುತಿಸುವುದು ಸಾಧ್ಯವಾಗುವಂಥ ರೀತಿಯ ರಾಜಕೀಯ ನಾಯಕರು ಎಲ್ಲೆಲ್ಲೂ ಕಾಣಿಸುತ್ತಿದ್ದಾರೆ. ಕಮ್ಯುನಿಸ್ಟ್ ಪಕ್ಷ ಬಿಟ್ಟರೆ ಉಳಿದ ಎಲ್ಲ ರಾಜಕೀಯ ಪಕ್ಷಗಳ ನಾಯಕರು ಈ ಸ್ವರೂಪ, ಚರ್ಯೆಯವರೇ ಆಗಿಬಿಟ್ಟಿದ್ದಾರೆ; ಆಗುತ್ತಿದ್ದಾರೆ. ಜಾತಿ, ಮತಧರ್ಮ ಭೇದವಿಲ್ಲದೆ ಎಲ್ಲ ಜನರೂ ಇವರು ನಮ್ಮ ನಾಯಕರು ಎಂದು ಹೇಳಿಕೊಳ್ಳುವಂಥ ಜನನಾಯಕರು ಕಾಣಿಸುತ್ತಿಲ್ಲ, ಅಥವಾ ಅಂಥವರು ತೀರಾ ತೀರಾ ಅಪರೂಪವಾಗುತ್ತಿದ್ದಾರೆ. ಸಾರ್ವತ್ರಿಕ ಮನ್ನಣೆಗೆ ಪಾತ್ರರಾಗುವಂಥ ಜನನಾಯಕರಾಗಬೇಕೆಂಬ ಕನಸು, ಆದರ್ಶ ಹೊತ್ತವರಿದ್ದರೆ ಅವರಿಗೆ ಹಾಗೆ ಬೆಳೆಯುವುದಕ್ಕೆ ಬಿಡದಂಥ ವಾತಾವರಣವೇ ನಿರ್ಮಾಣವಾಗಿಬಿಟ್ಟಿದೆ. ಇಂಥ ಉಸಿರು ಕಟ್ಟಿಸುವ ಪ್ರತಿಗಾಮೀ ವಾತಾವರಣವನ್ನು ಭೇದಿಸಲೇಬೇಕಾದ ಸವಾಲನ್ನು ಕೂಡ ಪರ್ಯಾಯ ರಾಜಕಾರಣ ಮಾಡುವವರು ಎದುರಿಸಬೇಕಾಗಿದೆ.

ಸಾಪೇಕ್ಷ ವ್ಯತ್ಯಾಸದ ಮಾತಷ್ಟೆ. ಈ ಮಾತು ಕಟು ಸತ್ಯವಾದರೂ ಅದು ವಾಸ್ತವ ಎಂಬುದನ್ನು ಅರಿತಿರಬೇಕು. ಎಲ್ಲಿಯವರೆಗೆ ಮನುಷ್ಯರು ಲೌಕಿಕರಾಗಿರುತ್ತಾರೆಯೊ ಅಲ್ಲಿಯವರೆಗೆ ಅದು ಅಷ್ಟೊ ಇಷ್ಟೊ ಇರುವಂಥದೇ. ಕ್ರಿ.ಪೂ. ೪೦೦ರ ಸುಮಾರಿನ ಪ್ರಾಜ್ಞ ಪ್ಲೇಟೋ ಅವನ ಗಣರಾಜ್ಯದಲ್ಲಿಯೆ ಕಾಲ, ಜನ ಕೆಟ್ಟುಹೋಗಿದ್ದಾರೆಂದು ಹೇಳಿರುವುದುಂಟು. ಹಾಗೆ ನೋಡಿದರೆ ರಾಜಕೀಯ ವ್ಯವಸ್ಥೆ ಅದು ಯಾವುದೇ ಆಗಿರಲಿ, ಅದು ಲೌಕಿಕ ವ್ಯವಸ್ಥೆಯೆ ಆಗಿರುತ್ತದೆ; ಲೌಕಿಕರಾಗಿರುವ ಮನುಷ್ಯ ಸಾಮಾನ್ಯರಿಗೆ ಸಂಬಂಧಿಸಿದ್ದೇ ಆಗಿರುತ್ತದೆ. ಆದ್ದರಿಂದ ಭ್ರಷ್ಟಾಚಾರದ ಪ್ರಮಾಣವನ್ನು ತೀರಾ ಕಡಮೆ ಪ್ರಮಾಣಕ್ಕೆ ಇಳಿಸುವ ಕಡೆಗೆ, ಅದರ ಸೂಚ್ಯಂಕವನ್ನು ತೀರಾ ಕನಿಷ್ಠಾಂಶದ ಕಡೆಗೆ ತಳ್ಳುವುದರತ್ತ ನಮ್ಮ ಪ್ರಯತ್ನ, ಸಂಕಲ್ಪ ಇರಬೇಕಾಗುತ್ತದೆ, ಅಷ್ಟೆ ಭ್ರಷ್ಟಾಚಾರವನ್ನು ಸಂಪೂರ್ಣ ಅಳಿಸಿಹಾಕುತ್ತೇವೆ ಎಂಬುದು ಕನಸಿನಸ್ವರ್ಗದ ಅಂದರೆ ಯೂಟೋಪಿಯಾದ ಮಾತು.

ಭ್ರಷ್ಟಾಚಾರ ಎಂಬುದು ಲಂಚ, ರುಷುವತ್ತುಗಳ ವ್ಯವಹಾರಕ್ಕೆ ಮಾತ್ರವೆ ಸಂಬಂಧಿಸಿದ್ದಲ್ಲ; ಸೀಮಿತವಾದದ್ದಲ್ಲ. ಅದೇನೊ ಇದ್ದೇ ಇದೆ. ಲಂಚ ರುಷುವತ್ತುಗಳ ಭ್ರಷ್ಟಾಚಾರ ವ್ಯಕ್ತಿಸ್ವಾರ್ಥಕ್ಕೆ , ವ್ಯಕ್ತಿಗಳ ಶೀಲದೋಷಕ್ಕೆ ಸಂಬಂಧಿಸಿದ್ದು. ನಮ್ಮ ದೇಶದ ಚರಿತ್ರೆಯಲ್ಲಿ ವ್ಯಕ್ತಿಶೀಲದೋಷದ ಭ್ರಷ್ಟಾಚಾರಕ್ಕಿಂತ ಸಮೂಹಶೀಲದೋಷದ ಭ್ರಷ್ಟಾಚಾರ ಹೆಚ್ಚು ಭಯಂಕರವಾಗಿ ನಡೆದುಕೊಂಡು ಬಂದಿದೆ. ಮನುಷ್ಯ ಮನುಷ್ಯರಲ್ಲಿ ಭೇದ, ಹುಟ್ಟಿನಿಂದ ಮೇಲು-ಕೀಳು ಎಣಿಸುವ ಜಾತಿ-ವರ್ಣಗಳು, ಮತಧರ್ಮಗಳ ನಂಬಿಕೆ, ಅವುಗಳ ನಡುವಿನ ಸ್ಪರ್ಧೆ-ದ್ವೇಷ, ಅವುಗಳನ್ನು ವೈಯಕ್ತಿಕ ಸ್ವಾರ್ಥಕ್ಕೆ, ಜಾತಿ-ಮತಧರ್ಮ ಮೂಲವಾದ ನಿರ್ದಿಷ್ಟ ಜನಸಮೂಹದ ಸ್ವಾರ್ಥಕ್ಕೆ ಬಳಸಿಕೊಳ್ಳುವ ಹುನ್ನಾರ - ಇವುಗಳಲ್ಲಿ ಭ್ರಷ್ಟಾಚಾರದ ಬಲವಾದ ಬೇರುಗಳಿವೆ. ವ್ಯಕ್ತಿಸ್ವಾರ್ಥಮೂಲದ ಭ್ರಷ್ಟಾಚಾರಿಗಳನ್ನು ಕೂಡ ತಮ್ಮ ಜಾತಿಯಲ್ಲೊ, ತಮ್ಮ ಮತಧರ್ಮದಲ್ಲೊ ಹುಟ್ಟಿದವರೆಂಬ ಕಾರಣಕ್ಕೇ ರಕ್ಷಿಸುವ, ಪೋಷಿಸುವ ಕವಚವಾಗಿಯೂ ಗುರಾಣಿಯಾಗಿಯೂ ಈ ಜಾತಿ-ಮತಧರ್ಮಗಳ ನಂಬಿಕೆ, ನಿಷ್ಠೆ ಸ್ವಜನ ಪಕ್ಷಪಾತಗಳು ಕೆಲಸಮಾಡುತ್ತವೆ; ಹಾಗೆ ಮಾಡುತ್ತ ಬಂದಿವೆ.

ವ್ಯಕ್ತಿಶೀಲದೋಷ ಮೂಲದ ಭ್ರಷ್ಟಾಚಾರವನ್ನು ಬಹಿರಂಗವಾಗಿ ಮಾಡುವುದಕ್ಕೆ ಒಂದಷ್ಟು ನಾಚಿಕೆ, ಭಯ ಈಗಲೂ ಸಂಬಂಧಪಟ್ಟವರಲ್ಲಿ ಉಳಿದುಕೊಂಡು ಬಂದಿದೆ; ಕದ್ದು ಮುಚ್ಚಿ ಮಾಡಲು ದಾರಿ ಹುಡುಕುತ್ತಿರುತ್ತಾರೆ. ಆದರೆ, ಸಮೂಹಶೀಲಭ್ರಷ್ಟತೆಯ ಮೂಲದ ಅಂದರೆ ಜಾತಿ-ಮತಧರ್ಮವೇ ಮೂಲಕಾರಣವಾದ ಭ್ರಷ್ಟಾಚಾರವನ್ನು ಬಹಿರಂಗವಾಗಿ ಮಾಡುವುದಕ್ಕೆ ಜನರಲ್ಲಿ ನಾಚಿಕೆಯಾಗಲಿ, ಭಯವಾಗಲಿ ಇಲ್ಲದಂಥ ಸ್ಥಿತಿ ನಿರ್ಮಾಣವಾಗಿ ಬಿಟ್ಟಿದೆ. ಜಾತಿ-ಮತಧರ್ಮದ ಹೆಸರಿನಲ್ಲಿ ನಡೆಯುವ ಸಮೂಹ ಶೀಲದೋಷದ ಬಗ್ಗೆ ಬಹಿರಂಗದಲ್ಲಿಯೂ ನಾಚಿಕೆಯಾಗದಂಥ, ಅಂತರಂಗದಲ್ಲಿಯೂ ಅಪರಾಧೀಭಾವ ಕಾಡದಂಥ ಮನಸ್ಸಿನ ಸ್ಥಿತಿ ಎಲ್ಲೆಲ್ಲೂ ಎಲ್ಲರಲ್ಲೂ ಕಾಣಸುತ್ತಿದೆ. ಅಪವಾದರೂಪದ ವ್ಯಕ್ತಿಗಳೊ ಸಂಸ್ಥೆಗಳೊ ಇಲ್ಲವೇ ಇಲ್ಲ ಎಂಬಂತಿಲ್ಲ. ಅವುಗಳ ಪ್ರಮಾಣ ತೀರಾ ಕಡಮೆ.

ಇನ್ನೊಂದು ಜಾತಿ-ಮತಧರ್ಮದವರ ಬಗ್ಗೆ ಅಂತಃಕರಣದ ಸಂವೇದನೆಯೆ ಮೊಂಡುಬಿದ್ದು ಹೋಗಿರುವಂಥ ಮನೋಧರ್ಮ ವಿಜೃಂಭಿಸುತ್ತಿದೆ. ಅದು ತನ್ನ ಪಾತಳಿಯನ್ನು ದಿನೇದಿನೇ ಹೆಚ್ಚಿಸಿಕೊಳ್ಳುತ್ತಲೇ ಹೋಗುತ್ತಿದೆ. ನಮ್ಮ ದೇಶದ ಸಂವಿಧಾನ ಪ್ರತಿಪಾದಿಸುವ ಜಾತಿ-ಮತಧರ್ಮ ನಿರಪೇಕ್ಷತೆ, ಸೋದರತೆ ಮೊದಲಾದ ಪದಗಳು ಕ್ರಿಯಾಶೀಲ ಪರಿಕಲ್ಪನೆಗಳಾಗದೆ ಹೆಸರಿಗೆ ಮಾತ್ರ ಇರುವ ಶಬ್ದಗಳಾಗಿ ತತ್ವ, ಸತ್ವ ಎರಡನ್ನೂ ಕಳೆದುಕೊಳ್ಳುತ್ತಿವೆ. ದೇಶದ ಬಗೆಗಿನ ಪ್ರೇಮ, ನಿಷ್ಠೆಗಿಂತ, ಜಾತಿ-ಮತಧರ್ಮಗಳ ಬಗೆಗಿನ ಪ್ರೇಮ, ನಿಷ್ಠೆ ದಿನೇ ದಿನೇ ಜನರಲ್ಲಿ ಬೆಳೆಯುತ್ತಿದೆ ಅಥವಾ ಬೆಳೆದಂತೆ ತೋರಿಸಿಕೊಳ್ಳಲಾಗುತ್ತಿದೆ. ನಿಜವಾಗಿ ನೋಡಿದರೆ ಅಂಥವರಲ್ಲಿ ಹೆಚ್ಚು ಜನಕ್ಕೆ ದೇಶದ ಬಗ್ಗೆಯಾಗಲಿ, ಜಾತಿ-ಮತಧರ್ಮದ ಬಗ್ಗೆಯಾಗಲಿ ನಿಜವಾದ ಪ್ರೇಮವೊ, ನಿಷ್ಠೆಯೊ, ಕಾಳಜಿಯೊ ಇಲ್ಲ; ವೈಯಕ್ತಿಕ ಸ್ವಾರ್ಥಕ್ಕಾಗಿ ಜಾತಿ-ಮತಧರ್ಮದ ಹೆಸರನ್ನು ಬಳಸಿಕೊಳ್ಳುವ ಧೂರ್ತತನ ಮಾತ್ರ ಇದೆ.

ಭಾರತದ ಸಂವಿಧಾನ ರಚನಾ ಸಮಿತಿ ಸಿದ್ಧಪಡಿಸಿದ ಸಂವಿಧಾನದ ಕರಡನ್ನು ಸಂವಿಧಾನ ರಚನಾಸಭೆ ೨೫,೨೬ ನವೆಂಬರ್ ೧೯೪೯ರ ಸಭೆಗಳಲ್ಲಿ ಚರ್ಚಿಸಿ ೨೬.೧೧.೧೯೪೯ರಂದು ಅಂಗೀಕರಿಸಿತು. ಆ ಸಂದರ್ಭದಲ್ಲಿ ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾದ ಡಾ. ಬಿ. ಆರ್. ಅಂಬೇಡ್ಕರ್ ಹಾಗೂ ಸಂವಿಧಾನ ರಚನಾ ಸಭೆಯ ಅಧ್ಯಕ್ಷ ಡಾ. ರಾಜೇಂದ್ರ ಪ್ರಸಾದ್ ಅವರು ಹೇಳಿದ ಮಾತುಗಳ ಸ್ವಲ್ಪ ಭಾಗವನ್ನು ಗೊತ್ತಿದ್ದವರಿಗೆ ಇಲ್ಲಿ ನೆನಪಿಸುತ್ತೇನೆ; ಗೊತ್ತೇ ಇಲ್ಲದಿದ್ದವರಿಗೆ ಅವರ ಗಮನಕ್ಕೆ ತರುತ್ತೇನೆ:

''ಸಂವಿಧಾನ ಎಷ್ಟೇ ಉತ್ತಮವಾಗಿದ್ದರೂ ಅದನ್ನು ಬಳಸುವವರು ಕೆಟ್ಟವರಾಗಿದ್ದರೆ ಅದು ನಿಶ್ಚಿತವಾಗಿ ಕೆಡುತ್ತದೆ. ಸಂವಿಧಾನ ಎಷ್ಟೇ ಕೆಟ್ಟದ್ದಾಗಿದ್ದರೂ ಅದನ್ನು ಬಳಸುವವರು ಒಳ್ಳೆಯವರಾಗಿದ್ದರೆ ಅದು ನಿಶ್ಚಿತವಾಗಿ ಉತ್ತಮವಾಗುತ್ತದೆ ಎಂಬುದು ನನ್ನ ಭಾವನೆ. ಸಂವಿಧಾನದ ಬಳಕೆ ಅದರ ಸ್ವರೂಪವನ್ನೇ ಇಡಿಯಾಗಿ ಅವಲಂಬಿಸಿಲ್ಲ. ಸಂವಿಧಾನವು ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳಂಥ ರಾಜ್ಯದ ಅಂಗಗಳನ್ನು ಮಾತ್ರ

## ಬುದ್ಧ ಮತ್ತು ಸಾಸಿವೆಕಾಳು

ಬುದ್ಧ,
ನೀ ಬೋಧಿಸಿದ ಸಾಸಿವೆಕಾಳು ತರದೆ;
ಸೋತ ಗೋತಮಿ ಮನದಲ್ಲೇ ಮರುಗಿದಳು
ಅಂತೆಯೆ ನನ್ನೀ ಜನರೂ,
ಸಾಸಿವೆಕಾಳಿನಷ್ಟು ದಾಹಕ್ಕೆ ಸಾಗರದಷ್ಟು ಕಣ್ಣೀರು ಬಸಿದರು...

ಬುದ್ಧ,
ಗೋತಮಿ ಸಾಸಿವೆಕಾಳಿಗಾಗಿ ಪರದಾಡಿದ್ದು
ಸಾವು ಜಯಿಸುವ ಭ್ರಾಂತಿಯಿಂದಲ್ಲ;
ಮುಗ್ಧ ಹರಣದ ಮೇಲಿದ್ದ ಮಮತೆಗೆ...!
ಆದರೆ ನನ್ನೀ ಜನ ಅನೂಚಾನವೆಂಬಂತೆ
ಮಾರಣಹೋಮಗೈಯ್ಯುತ್ತಾರೆ ಮತಾಂಧತೆಯ ಕಹಳೆಗೆ...

ಬುದ್ಧ,
ಸಾಸಿವೆಕಾಳಿಡುವ ಜಾಗದಲ್ಲಿಯೇ, ಈಗ
ಮಾನವೀಯತೆಗೆ ಹೊಗ ನಟ್ಟಿರುವಾಗ
ಕಾವಿಯ ಮಡಿಲಲ್ಲೆಲ್ಲಾ ಚಾಕು-ಬಂದೂಕುಗಳು
ನಿರಾಳವಾಗಿ ಉಸಿರಾಡುತ್ತವೆ...

ಇಲ್ಲಾ ಬುದ್ಧ,
ನಾನು ಸೂತಕವಿರದ ಮನೆ ಕಟ್ಟುತ್ತೇನೆ;
ಬೊಗಸೆ ತುಂಬಾ ಸಾಸಿವೆಕಾಳು ತರುತ್ತೇನೆ !
ಮತ್ತೇ ನೀ ಜೀವತಳೆಯುತ್ತೇನೆಂದರೆ...



**ಮಂಜು ಶೆಟ್ಟರ್**, C/o. ಈರಪ್ಪ ಎಂ. ಕಂಬಳಿ, ಡಿ-೧೫೪, ಜೀವನಬೀಮಾನಗರ, ಬೆಂಗಳೂರು - ೫೬೦ ೦೭೫

ಒದಗಿಸುತ್ತದೆ. ರಾಜ್ಯದ ಈ ಅಂಗಗಳು ಕೆಲಸಮಾಡುವ ಅಂಶಗಳು ಜನತೆ ಹಾಗೂ ಅವರು ತಮ್ಮ ಆಶಯ ಮತ್ತು ರಾಜಕೀಯಗಳನ್ನು ನಡೆಸಲು ನಿಯೋಜಿಸುವ ರಾಜಕೀಯ ಪಕ್ಷಗಳನ್ನು ಅವಲಂಬಿಸಿವೆ. ಭಾರತದ ಜನತೆ ಮತ್ತು ರಾಜಕೀಯ ಪಕ್ಷಗಳವರು ಹೇಗೆ ವರ್ತಿಸುತ್ತಾರೆ ಎಂದು ಯಾರು ಹೇಳಬಲ್ಲರು ?

''...ಜಾತಿ ಮತ್ತು ಮತಗಳ ರೂಪದ ನಮ್ಮ ಹಳೆಯ ಶತ್ರುಗಳ ಜತೆಗೆ ವೈವಿಧ್ಯಮಯವೂ ಪರಸ್ಪರ ವಿರೋಧಿಗಳೂ ಆಗಿರುವ ಹಲವು ರಾಜಕೀಯ ಪಕ್ಷಗಳನ್ನು ನಾವು ಪಡೆಯಲಿದ್ದೇವೆ. ಭಾರತೀಯರು ತಮ್ಮ ದೇಶವನ್ನು ಮತಕ್ಕಿಂತ ಮೇಲೆ ಇಡಬಲ್ಲರೆ ಅಥವಾ ಮತವನ್ನು ದೇಶಕ್ಕಿಂತ ಮೇಲೆ ಇಡುತ್ತಾರೆಯೆ? ನನಗೆ ಗೊತ್ತಿಲ್ಲ. ಆದರೆ ಪಕ್ಷಗಳು ತಮ್ಮ ರಾಜಕೀಯ ತತ್ವವನ್ನು ದೇಶಕ್ಕಿಂತ ಮೇಲೆ ಇಟ್ಟಲ್ಲಿ ನಮ್ಮ ಸ್ವಾತಂತ್ರ್ಯಕ್ಕೆ ಎರಡನೆಯ ಬಾರಿ ಧಕ್ಕೆಯಾಗುತ್ತದೆ, ನಾವು ಅದನ್ನು ಬಹುಶಃ ಶಾಶ್ವತವಾಗಿ ಕಳೆದುಕೊಳ್ಳುತ್ತೇವೆ. ಈ ಅನಾಹುತವಾಗದಂತೆ ದೃಢಸಂಕಲ್ಪ ಮಾಡಿ ಕಾಯ್ದುಕೊಳ್ಳಬೇಕು. ನಮ್ಮ ರಕ್ತದ ಕೊನೆಯ ಹನಿ ಇರುವವರೆಗೆ ನಮ್ಮ ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳುವುದಕ್ಕೆ ನಾವು ದೃಢಸಂಕಲ್ಪ ಉಳ್ಳವರಾಗಬೇಕು.''

*– ಡಾ।। ಬಿ. ಆರ್. ಅಂಬೇಡ್ಕರ್*

''ಚುನಾಯಿತರಾದವರು ಸಮರ್ಥರೂ ಶೀಲವಂತರೂ ವ್ಯಕ್ತಿತ್ವದ ಘನತೆಯುಳ್ಳವರೂ ಆಗಿದ್ದಲ್ಲಿ ದೋಷಯುಕ್ತ ಸಂವಿಧಾನದಿಂದಲೂ ಅವರು ಅತ್ಯುತ್ತಮ ಪ್ರಯೋಜನವನ್ನು ಪಡೆಯಬಲ್ಲರು. ಅವರಲ್ಲಿ ಅವೇ ಇಲ್ಲದಿದ್ದಲ್ಲಿ ಸಂವಿಧಾನವು ದೇಶವನ್ನು ಕಾಪಾಡಲಾರದು. ದೇಶದ ಹಿತವನ್ನು ತಮ್ಮ ಎದುರು ಇರಿಸಿಕೊಂಡಿರುವ ಅಂಥ ಪ್ರಾಮಾಣಿಕ ವ್ಯಕ್ತಿಗಳ ತಂಡಕ್ಕಿಂತ ಹೆಚ್ಚಿನದೇನೂ ಇಂದು ಭಾರತಕ್ಕೆ ಅಗತ್ಯವಿಲ್ಲ... ನಮ್ಮಲ್ಲಿ ಕೋಮು ಭಿನ್ನತೆಗಳಿವೆ, ಜಾತಿ ಭಿನ್ನತೆಗಳಿವೆ, ಭಾಷಾ ಭಿನ್ನತೆಗಳಿವೆ, ಪ್ರಾಂತೀಯ ಭಿನ್ನತೆಗಳಿವೆ ಮತ್ತೂ ಏನೇನೊ ಇವೆ. ಅವನ್ನು ಎದುರಿಸಲು ಸಣ್ಣ ಗುಂಪು, ಪ್ರದೇಶಗಳಿಗಾಗಿ ಸಮಸ್ತ ದೇಶದ ಹಿತವನ್ನು ಬಲಿಕೊಡದಿರುವ, ಅಂಥ ಭಿನ್ನಾಭಿಪ್ರಾಯಗಳಿಂದ ಹುಟ್ಟುವ ಪೂರ್ವಗ್ರಹಗಳನ್ನು ಮೀರಬಲ್ಲಂಥ ಶಕ್ತಿಶಾಲಿ ಶೀಲವಂತ ದಾರ್ಶನಿಕ ವ್ಯಕ್ತಿಗಳ ಅಗತ್ಯ ಇದೆ. ಅಂಥ ವ್ಯಕ್ತಿಗಳನ್ನು ದೇಶ ಸಮೃದ್ಧವಾಗಿ ನೀಡುತ್ತದೆ ಎಂದು ಮಾತ್ರ ಆಶಿಸಬಹುದು.''

*– ಡಾ।। ರಾಜೇಂದ್ರ ಪ್ರಸಾದ್*

ಡಾ।। ಬಿ. ಆರ್. ಅಂಬೇಡ್ಕರ್ ಮತ್ತು ಡಾ।। ರಾಜೇಂದ್ರ ಪ್ರಸಾದ್ ಅವರುಗಳ ಅಂದಿನ ಆತಂಕ, ಭಯ ನಿಜವಾಗಿ, ಅವರ ಆಶಾವಾದ ಹುಸಿಯಾಗಿರುವಂಥ ಕಾಲಸಂದರ್ಭದಲ್ಲಿ ನಾವಿಂದು ಇದ್ದೇವೆ.

- ೪ -

ಡಾ।। ರಾಮಮನೋಹರ ಲೋಹಿಯಾ ಅವರು ಶೀಲದೋಷ, ತಿಳಿವಳಿಕೆಯ ದೋಷ ಇವುಗಳ ಬಗ್ಗೆ ಹೇಳುತ್ತಾರೆ. ಶೀಲದೋಷದಿಂದ ಸಮೂಹದ ಬದುಕಿನ ಮೇಲೆ ಆಗುವ ದುಷ್ಪರಿಣಾಮಕ್ಕಿಂತ ತಿಳಿವಳಿಕೆಯ ದೋಷದಿಂದ ಉಂಟಾಗುವ ದುಷ್ಪರಿಣಾಮ ಹೆಚ್ಚು ಗಂಭೀರವಾದದ್ದು ಎನ್ನುತ್ತಾರೆ. ಶೀಲದೋಷ ಇದ್ದರೆ ಅದನ್ನು ತಿದ್ದಬಹುದು, ಸರಿಪಡಿಸಬಹುದು. ತಿಳಿವಳಿಕೆಯ ದೋಷ ಇದ್ದರೆ ಅದನ್ನೂ ಸರಿಪಡಿಸಬಹುದು. ಆದರೂ ತಿಳಿವಳಿಕೆಯ ದೋಷವನ್ನು ತಿದ್ದಿಕೊಳ್ಳುವವರೆಗೆ, ಸರಿಪಡಿಸುವವರೆಗೆ ಆ ದಿಕ್ಕಿನಲ್ಲಿ ಮಾಡಿದ ಎಲ್ಲ ಪ್ರಯತ್ನ, ಹಾಕಿದ ಎಲ್ಲ ಶ್ರಮ ವ್ಯರ್ಥವಾಗುತ್ತವೆ; ಅವು ದುಷ್ಪರಿಣಾಮವನ್ನೇ ಮಾಡಿರುತ್ತವೆ. ಆದ್ದರಿಂದ ತಿಳಿವಳಿಕೆಯ ದೋಷ ಇದ್ದಲ್ಲಿ ಶೀಲಶುದ್ಧಿ ಇದ್ದಷ್ಟೂ ಆ ಅಪಾಯ, ಆ ದುಷ್ಪರಿಣಾಮ ಹೆಚ್ಚು. ಯಾಕೆಂದರೆ ತನ್ನ ತಿಳಿವಳಿಕೆಯಂತೆ ಅದರ ಸಾಧನೆಗಾಗಿ ಪ್ರಾಮಾಣಿಕ ನಿಷ್ಠೆಯಿಂದ, ಶೀಲಶುದ್ಧಿಯಿಂದ ಆ ವ್ಯಕ್ತಿ ದುಡಿದಿರುತ್ತಾನೆ. ಅಂದರೆ ದೋಷಯುಕ್ತವಾದದ್ದನ್ನು ಸಮರ್ಥವಾದ ರೀತಿಯಲ್ಲಿ ಕಾರ್ಯರೂಪಕ್ಕೆ ತರುವುದಕ್ಕೆ ಆ ವ್ಯಕ್ತಿಯ ಪ್ರಾಮಾಣಿಕ ನಿಷ್ಠೆ, ಶೀಲಶುದ್ಧಿ ಬಳಕೆಯಾಗಿರುತ್ತದೆ. ಹಾಗಾದಾಗ ಪ್ರಾಮಾಣಿಕನಿಷ್ಠೆ, ಶೀಲಶುದ್ಧಿಗಳೆಂಬ ಗುಣಾಂಶಗಳೂ, ಸದ್ಗುಣಗಳೂ ದೋಷವನ್ನು ಉಲ್ಬಣಗೊಳಿಸುವ ಸಾಧನಗಳಾಗಿ ಪರಿವರ್ತಿತವಾಗಿಬಿಡುತ್ತವೆ. ಆದ್ದರಿಂದ ವ್ಯಕ್ತಿಜೀವನದಲ್ಲಾಗಲಿ, ಸಮೂಹ ಬದುಕಿನಲ್ಲಾಗಲಿ ಶೀಲದೋಷ, ತಿಳಿವಳಿಕೆಯ ದೋಷ ಎರಡೂ ಉಂಟಾಗದಂತೆ ಲಕ್ಷ್ಯ ವಹಿಸುವುದು ಅಗತ್ಯವಾಗುತ್ತದೆ. ಅವುಗಳಲ್ಲಿಯೂ ಶೀಲದೋಷಕ್ಕಿಂತ ತಿಳಿವಳಿಕೆಯ ದೋಷ ಸಮೂಹ ಬದುಕಿನ ಸಂದರ್ಭದಲ್ಲಿ ಹೆಚ್ಚು ಅಪಾಯಕಾರಿಯಾದದ್ದು ಎಂದು ಡಾ।। ಲೋಹಿಯಾ ಪ್ರತಿಪಾದಿಸುತ್ತಾರೆ.




ಕೊಡಗಿನ ವಿರಾಜಪೇಟೆಯಲ್ಲಿ ಪ್ರಾರಂಭವಾದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ವಿರಾಜಪೇಟೆ ಕರ್ನಾಟಕ ಸಂಘದ ಅಧ್ಯಕ್ಷರಾದ ಶ್ರೀ ಬೋಪಯ್ಯ ಅವರು ಉದ್ಘಾಟಿಸಿದರು.

ರಾಜಕಾರಣ ಸಮೂಹ ಬದುಕಿಗೆ ಸಂಬಂಧಿಸಿದ ಚಟುವಟಿಕೆ. ಆದ್ದರಿಂದ ರಾಜಕಾರಣದಲ್ಲಿ ತಿಳಿವಳಿಕೆಯ ದೋಷವಾಗದಂತೆ ಹೆಚ್ಚಿನ ಎಚ್ಚರ, ಲಕ್ಷ್ಯ ವಹಿಸಬೇಕಾಗುತ್ತದೆ. ನಮ್ಮ ದೇಶದಲ್ಲಿ ಪರಂಪರಾಗತವಾಗಿ ಉಳಿದು ಬೆಳೆದುಬಂದಿರುವ ಜಾತಿ, ಮತಧರ್ಮಗಳು ಮತ್ತು ಅವುಗಳ ರಾಜಕಾರಣಗಳು ತಿಳಿವಳಿಕೆಯ ದೋಷದ ಫಲಗಳಾಗಿವೆ ಎಂಬುದು ಚರಿತ್ರೆಯ ಅನುಭವದಿಂದ ತಿಳಿದುಬಂದಿರುವ ಸಂಗತಿಯಾಗಿದೆ. ಆ ಸಂಬಂಧವಾದ ತಿಳಿವಳಿಕೆಯ ದೋಷದ ಬಗ್ಗೆ ಆಧುನಿಕ ಕಾಲದಲ್ಲಿ ಹೆಚ್ಚಿನ ಪ್ರಜ್ಞೆ, ಪರಿಜ್ಞಾನ ಉಂಟಾದದ್ದರ ಫಲವಾಗಿಯೇ ಸೆಕ್ಯುಲರ್ ಜಾತಿ-ಮತಧರ್ಮ ನಿರಪೇಕ್ಷವಾದ, ಸೋಷಿಯಲಿಸ್ಟ್ ಸಮಾಜವಾದೀ ಸಮಾಜ, ಸಂಸ್ಕೃತಿ ನಿರ್ಮಾಣದ ಅಗತ್ಯವನ್ನು, ಆದರ್ಶವನ್ನು ನಮ್ಮ ಸಂವಿಧಾನದಲ್ಲಿ ಪ್ರತಿಪಾದಿಸಲಾಗಿದೆ.

ನಮ್ಮ ಸಂವಿಧಾನದಲ್ಲಿ ಪ್ರತಿಪಾದಿತವಾದ ಸಾಮಾಜಿಕ ನ್ಯಾಯದ ಪರಿಕಲ್ಪನೆ ಕೂಡ ಪ್ರಧಾನವಾಗಿ ಈ ತಿಳಿವಳಿಕೆಯ ಫಲವೇ ಆಗಿದೆ. ಡಾ।। ಬಿ. ಆರ್. ಅಂಬೇಡ್ಕರ್, ಡಾ।। ರಾಮಮನೋಹರ ಲೋಹಿಯಾ ಮುಂತಾದವರು ಜಾತಿ ವಿನಾಶದ ಬಗ್ಗೆ ಏರುದನಿಯಲ್ಲಿ ಉದ್ದಕ್ಕೂ ಪ್ರತಿಪಾದಿಸುತ್ತ ಬಂದ ಚರಿತ್ರೆ ಸಾಮಾಜಿಕ ನ್ಯಾಯದ ಪರಿಕಲ್ಪನೆಗೆ ದೃಢ ಹಿನ್ನೆಲೆಯಾಗಿ ಇದೆ. ಜಾತಿವಿನಾಶ ಮಾಡುವುದಕ್ಕಾಗಿಯೆ, ಜಾತಿ-ಮತಧರ್ಮ ನಿರಪೇಕ್ಷವಾದ ಸಮಾಜ ಸಂಸ್ಕೃತಿಯತ್ತ ಸಾಗುವುದಕ್ಕಾಗಿಯೇ ಶೋಷಿತ ಜಾತಿ-ಪಂಗಡಗಳನ್ನು ಗುರುತಿಸಿ ವಿಶೇಷ ಸೌಲಭ್ಯಗಳನ್ನು, ಅವಕಾಶಗಳನ್ನು ಮೀಸಲಾತಿ ಹೆಸರಿನಲ್ಲಿ ಕಲ್ಪಿಸಲಾಯಿತು. ಅದು ಅಗತ್ಯವೂ ಆಗಿತ್ತು; ಆಗಿದೆ. ಆದರೆ ಸಾಮಾಜಿಕ ನ್ಯಾಯ ವಿತರಣೆಯ ಕಾರಣಕ್ಕಾಗಿ ಗುರುತಿಸಲ್ಪಟ್ಟ ಜಾತಿ-ಮತಧರ್ಮ ಪಂಗಡಗಳವರೂ ಸಾಮಾಜಿಕ ಅನ್ಯಾಯಕ್ಕೆ ಕಾರಣವಾದ ಪರಂಪರಾಗತವಾಗಿ ಬಂದ ಜಾತೀಯತೆ ಮತೀಯತೆಗಳನ್ನು ಮರಳಿ ಪೋಷಿಸುವಂತಾಗಿರುವ, ಆಗುತ್ತಿರುವ ಅಪಾಯ ಈಗ ಎಲ್ಲೆಲ್ಲೂ ಕಾಣಿಸುತ್ತಿದೆ. ಜಾತಿ-ಮತಧರ್ಮ ಪರವಾದ ಸಂಘ-ಸಂಘಟನೆಗಳು, ಜಾತಿ ಹೆಸರಿನಲ್ಲಿ ಹೊಸ ಹೊಸ ಮಠಗಳ ಸ್ಥಾಪನೆ, ಒಳಮೀಸಲಾತಿಯ ಹಕ್ಕೊತ್ತಾಯಗಳು, ಸಾಮಾಜಿಕ ನ್ಯಾಯ ಪಡೆದುಕೊಳ್ಳುವುದಕ್ಕಾಗಿ ಅಗತ್ಯವಾಗಿವೆ ಎಂದು ಹೇಳುತ್ತಲೇ ಜಾತಿ - ಮತಧರ್ಮಗಳ ಭೇದಭಾವವನ್ನು, ಅವುಗಳ ಪ್ರತ್ಯೇಕ ಅಸ್ತಿತ್ವವನ್ನು ಬಲಗೊಳಿಸುವುದರಲ್ಲಿ, ಅದನ್ನು ನಿರಂತರಗೊಳಿಸುವುದರಲ್ಲಿ ಸ್ಪರ್ಧಾತುರದಲ್ಲಿ ನಿರತವಾಗಿವೆ. ಚರಿತ್ರೆಯ ಆ ದುಷ್ಟ ಪರಂಪರೆ ಪುನರಾವರ್ತನೆಯಾಗುತ್ತಿದೆ. ದಿನೇದಿನೇ ಹೆಚ್ಚುತ್ತಲೇ

ಹೋಗುತ್ತಿದೆ. ಇದು ಇಂದು ದೇಶದ ಪ್ರಜಾಪ್ರಭುತ್ವ ವ್ಯವಸ್ಥೆ ಎದುರಿಸುತ್ತಿರುವ ದೊಡ್ಡ ಅಪಾಯವಾಗಿದೆ.

ಈ ಮನೋಧರ್ಮದ ಕಾರಣದಿಂದಾಗಿಯೆ ಹಿಂದುತ್ವವಾದದ ಹೆಸರಿನಲ್ಲಿ ಮತೀಯವಾದೀ ರಾಜಕಾರಣವನ್ನು ಅಥವಾ ಅಂಥ ರಾಜಕೀಯ ವ್ಯವಸ್ಥೆಯನ್ನು ಪ್ರತಿಪಾದಿಸುವ ಬಿಜೆಪಿ ಮತ್ತು ಸಂಘಪರಿವಾರದವರ ರಾಜಕಾರಣವು ವೇಗದಲ್ಲಿ ಕೇಂದ್ರದಲ್ಲಿ ಅಧಿಕಾರವನ್ನು ಹಿಡಿದುಕೊಳ್ಳುವಷ್ಟು ಶಕ್ತಿಶಾಲಿಯಾಗಿ ಬೆಳೆಯುವುದಕ್ಕೆ ಸಾಧ್ಯವಾಯಿತು. ಆ ರಾಜಕಾರಣವು ಅಧಿಕಾರ ಹಿಡಿಯುತ್ತಿದ್ದಂತೆಯೆ ಬಿಜೆಪಿ ತನಗೆ ಸರಳ ಬಹುಮತ ಕೂಡ ಇಲ್ಲದಿದ್ದಾಗಲೂ ಸಂವಿಧಾನ ಮರುಪರಿಶೀಲನೆಯ ಅಗತ್ಯವನ್ನು ಪ್ರತಿಪಾದಿಸಿತು. ಈಗಿರುವ ಸಂವಿಧಾನ ಪ್ರತಿಪಾದಿಸುತ್ತಿರುವ ರಾಜ್ಯ ವ್ಯವಸ್ಥೆಯ ಬುಡವನ್ನೇ ಅಲ್ಲಾಡಿಸುವ ಅಥವಾ ಸಾಧ್ಯವಾದರೆ ಬುಡಮೇಲು ಮಾಡುವ ಹೊಂಚು, ಹುನ್ನಾರ ಮರುಪರಿಶೀಲನೆಯ ಹಿಂದೆ ಇತ್ತು. ಸಂಘಪರಿವಾರದ ಮತೀಯವಾದೀ ರಾಜಕಾರಣದ ಅಬ್ಬರಕ್ಕೆ ಕಳೆದ ಸಾರ್ವತ್ರಿಕ ಚುನಾವಣೆ ಕೆಲಮಟ್ಟಿಗೆ ಕಡಿವಾಣ ಹಾಕಿದೆ ಎಂಬುದೇನೊ ನಿಜ. ಆದರೆ ಅದು ಬಿರುಗಾಳಿ ಬಂದು ಮತ್ತೊಂದು ಬಿರುಗಾಳಿಯ ಬಿರುಬೀಸು ಬರುವುದಕ್ಕೆ ನಡುವಿನ ಸ್ತಬ್ಧ ಅಥವಾ ರಭಸರಹಿತ ಸ್ಥಿತಿಯಾಗಿದ್ದರೂ ಆಗಿರಬಹುದು ಎಂಬುದನ್ನು ಮರೆಯುವಂತಿಲ್ಲ. ಕಳೆದ ಚುನಾವಣೆಯಲ್ಲಿ ನಮ್ಮ ರಾಜ್ಯದಲ್ಲಿಯೇ ಮೊತ್ತಮೊದಲಬಾರಿಗೆ ಜನತೆ ಬೇರೆ ಯಾವೊಂದು ರಾಜಕೀಯ ಪಕ್ಷಕ್ಕಿಂತ ಬಿಜೆಪಿ ಅಭ್ಯರ್ಥಿಗಳನ್ನೇ ಹೆಚ್ಚಿನ ಸಂಖ್ಯೆಯಲ್ಲಿ ವಿಧಾನಸಭೆಗೆ ಆರಿಸಿ ಕಳಿಸಿತೆಂಬ ಸಂಗತಿಯನ್ನು ನೆನಪಿನಲ್ಲಿಟ್ಟುಕೊಳ್ಳುವುದು ಅಗತ್ಯ.

ಜಾತಿ-ಮತಧರ್ಮೀಯ ರಾಜಕಾರಣ ಮಾಡುವುದು ತಪ್ಪು; ಮತಧರ್ಮೀಯ ರಾಜಕಾರಣದಿಂದಾಗಿ ದೇಶ ಸ್ವಾತಂತ್ರ್ಯ ಪಡೆಯುತ್ತಿದ್ದಾಗಲೆ ಹೋಳಾಯಿತು; ಮತ್ತೆ ಅಂಥ ಸಂದರ್ಭ ಪುನರಾವರ್ತನೆ ಆಗದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ, ಹೊಣೆ ಎಂಬ ತಿಳಿವಳಿಕೆ ಜನರಲ್ಲಿ ಇಲ್ಲ ಎಂಬಂತಿಲ್ಲ. ಈ ತಿಳಿವಳಿಕೆ ಜನರಲ್ಲಿ ಇದೆ. ಅಂದರೆ ಜನರಲ್ಲಿರುವ ತಿಳಿವಳಿಕೆಯ ದೋಷ ಇಂದಿನ ಈ ನೀತಿಗೇಡಿ ಪರಿಸ್ಥಿತಿಗೆ ಕಾರಣವಲ್ಲ. ಸಾಮಾನ್ಯ ಜನರಲ್ಲಿ ಈ ಜಾತಿ-ಮತ ಧರ್ಮೀಯ ರಾಜಕಾರಣದ ಕೀಳು ರುಚಿಯನ್ನು, ದುಷ್ಟ ರುಚಿಯನ್ನು ಬೆಳೆಸುತ್ತಿರುವವರು ಮತ್ತು ಪೋಷಿಸುತ್ತಿರುವವರು ಕುರ್ಚಿರೋಗದ ರಾಜಕಾರಣಿಗಳು ಮತ್ತು ವ್ಯಕ್ತಿ ಸ್ವಾರ್ಥದ ವಿದ್ಯಾವಂತರು. ಇದರಿಂದ ಪ್ರಚೋದಿತರಾದ ಜನಸಾಮಾನ್ಯರಲ್ಲಿ ತಿಳಿವಳಿಕೆಯ ದೋಷ ಸ್ವಲ್ಪಮಟ್ಟಿಗೆ ಇದ್ದೀತೇನೊ ! ಆದರೆ ಧೂರ್ತ ರಾಜಕಾರಣಿಗಳಲ್ಲಿ, ವ್ಯಕ್ತಿಸ್ವಾರ್ಥಸಾಧಕ ವಿದ್ಯಾವಂತರಲ್ಲಿ ಇಂಥ ರಾಜಕಾರಣ ತಪ್ಪು, ಒಟ್ಟೂ ದೇಶದ ಹಿತದೃಷ್ಟಿಯಿಂದ ವಿನಾಶಕಾರಿ ಎಂಬ ತಿಳಿವಳಿಕೆ ಇಲ್ಲ ಎಂಬಂತಿಲ್ಲ; ಆ ವಿಷಯದಲ್ಲಿ ಅವರಲ್ಲಿಯೂ ತಿಳಿವಳಿಕೆಯ ದೋಷ ಇದೆ ಎಂಬಂತಿಲ್ಲ. ಇಲ್ಲಿಯೂ ರಾಜಕಾರಣಿಗಳ ಹಾಗೂ ವ್ಯಕ್ತಿಸ್ವಾರ್ಥಸಾಧಕ ವಿದ್ಯಾವಂತರ ಶೀಲದೋಷವೇ ಇದೆ. ಅದು ಸೋಂಕು ರೋಗವಾಗಿ ಜನಸಾಮಾನ್ಯರ ಮೆದುಳನ್ನು ಮೇಯುತ್ತಿದೆ. ಶೀಲದೋಷಕ್ಕಿಂತ ತಿಳಿವಳಿಕೆಯ ದೋಷವು ಸಮೂಹ ಜೀವನ ಅಥವಾ ರಾಷ್ಟ್ರ ಜೀವನದಲ್ಲಿ ಹೆಚ್ಚು ಅಪಾಯಕಾರಿ ಎಂದು ಡಾ॥ ಲೋಹಿಯಾ ಹೇಳಿದ್ದಾರಷ್ಟೆ. ತಿಳಿವಳಿಕೆಯ ದೋಷ ಇಲ್ಲದೆ ದೋಷಯುಕ್ತವಾದ ತಿಳಿವಳಿಕೆಯನ್ನೇ ಪ್ರತಿಪಾದಿಸುವುದಕ್ಕೆ, ಪ್ರಚಾರಮಾಡುವುದಕ್ಕೆ, ನಂಬಿಸುವುದಕ್ಕೆ ಕಾರಣ ಶೀಲದೋಷ ಎಂದು ಬೇರೆ ಹೇಳಬೇಕಾಗಿಲ್ಲ. ಇಂಥ ಸಮೂಹ ಶೀಲದೋಷವು ಅಂದರೆ ಜಾತಿ-ಮತ ಧರ್ಮ ಸಂಬಂಧವಾದ ಶೀಲದೋಷವು ವ್ಯಕ್ತಿಶೀಲದೋಷಕ್ಕಿಂತ, ವ್ಯಕ್ತಿಯ ಮತ್ತು/ಅಥವಾ ಸಮೂಹದ ಸಾಮಾನ್ಯ ತಿಳಿವಳಿಕೆಯ ದೋಷಕ್ಕಿಂತ ಹೆಚ್ಚು ಅಪಾಯಕಾರಿ ಎಂಬುದು ಹೆಚ್ಚು ಹೆಚ್ಚಾಗಿ ಅನುಭವಕ್ಕೆ ಬರುತ್ತಲಿದೆ.




ವಿಷಸಾಗರದಲ್ಲೂ ಅರಳುತ್ತದೆ
ಪ್ರೀತಿ ಎಂಬ ಹೂವು
ಇದಕ್ಕಿಲ್ಲ ನಿನ್ನೆ ನಾಳೆಯ ಸಾವು.

ಅಂದು ಕ್ಷೀರಸಾಗರದಿ ಅರಳಿತು
ಅಮೃತ ಪಾರಿಜಾತ
ಇಂದು ವಿಷಸಾಗರದಲಿ ಅರಳಿತು
ನೆಮ್ಮದಿರಹಿತ ಕುಸುಮ.

**ಎನ್. ಗುರುಕಿರಣ್**
೩೭೫೭/೯, ೧೪ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ
ಗಾಯತ್ರಿನಗರ, ಬೆಂಗಳೂರು – ೫೬೦ ೦೨೧

ನಮ್ಮ ದೇಶ ಅವಿದ್ಯಾವಂತರ ಸಂಖ್ಯೆ ಹೆಚ್ಚಿರುವ ದೇಶ. ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಉಳಿಸಿ ಬೆಳೆಸುವುದಕ್ಕೆ ಅವರ ತಿಳಿವಳಿಕೆಯ ದೋಷ ಮಾರಕವಾಗಬಹುದು ಎಂಬ ಆತಂಕ ಸ್ವಾತಂತ್ರ್ಯ ಬರುವ ಮತ್ತು ಬಂದ ಕಾಲದಲ್ಲಿ ವಿಚಾರವಂತರಲ್ಲಿ ಇತ್ತು. ಆದರೆ ಈಗ ವಿದ್ಯಾವಂತರ, ಪದವೀಧರರ ಸಂಖ್ಯೆ ಹೆಚ್ಚಿದೆ. ತಿಳಿವಳಿಕೆಯ ದೋಷ ಈಗ ಹಿಂದಿನಷ್ಟಿಲ್ಲ. ಆದರೆ ಶೀಲದೋಷ ರಾಷ್ಟ್ರೀಯ ಜೀವನದ ಮಟ್ಟವನ್ನು ಅಧೋಗತಿಗೆ ಒಯ್ಯುತ್ತಲಿದೆ. ಬೇರೆ ಜಾತಿ-ಮತಧರ್ಮಗಳಿಗೆ ಸೇರಿದವರಿಗೆ ಕೆಡುಕೊ, ಅನ್ಯಾಯವೊ ಆದರೆ ಆಗಲಿ ನಮಗೆ ಮಾತ್ರ ಅನುಕೂಲವಾದರೆ ಸಾಕು ಎಂಬಂಥ ಸಂಕುಚಿತ ಮನೋಭಾವ, ಸ್ವಾರ್ಥಪರ ದೃಷ್ಟಿ ದೇಶದ ಜನತೆಯ ಮನಸ್ಸನ್ನು ಆಳುತ್ತಿರುವಂಥ ಸ್ಥಿತಿಯ ನಿರ್ಮಾಣ ವೇಗದಲ್ಲಿ ಆಗುತ್ತಿದೆ. ಇದು ದುರಂತ. ಇದರಿಂದ ದೇಶ, ದೇಶದ ಜನ ಪಾರಾಗುವಂಥ ರಾಜಕಾರಣದ ಅಗತ್ಯ ಇಂದು ತುರ್ತಾಗಿ ಇದೆ. ಪರ್ಯಾಯ ರಾಜಕಾರಣದ ಬಗ್ಗೆ ಯೋಚಿಸುವವರು ಈ ಬಗ್ಗೆ ಗಂಭೀರ ಚಿಂತನೆ ನಡೆಸಿ ಕಾರ್ಯಪ್ರವೃತ್ತರಾಗಬೇಕಾಗಿದೆ.

೫

ಡಾ॥ ನಟರಾಜ್ ಹುಳಿಯಾರ್ ಅವರು ಪ್ರಬಂಧಮಂಡನೆಯ ಒಂದು ಸಂದರ್ಭದಲ್ಲಿ ಪರ್ಯಾಯ ರಾಜಕಾರಣಕ್ಕೆ ಕೋಮುಸೌಹಾರ್ದ ವೇದಿಕೆಯನ್ನು ವೇದಿಕೆಯನ್ನಾಗಿ ಮಾಡಿಕೊಳ್ಳಬೇಕೆಂದು ಸಲಹೆ ಮಾಡಿದರು. ಇಂಥ ಸಲಹೆ ಮತ್ತು ಇಂಥ ಯೋಚನೆ ಸರಿಯಾದದ್ದಲ್ಲ, ಎಂಬುದು ನನ್ನ ಅಭಿಪ್ರಾಯ.

ಭಿನ್ನ ಕೋಮುಗಳ ನಡುವೆ ಕೋಮು ಸಂಬಂಧವಾದ ಕಾರಣಗಳಿಗಾಗಿ ಘರ್ಷಣೆಯೊ, ಗಲಭೆಯೊ, ಹಿಂಸಾಚಾರವೊ ನಡೆಯುವುದುಂಟು. ಅಂಥ ಸಂದರ್ಭಗಳಲ್ಲಿ ಅದು ಬೆಳೆದು ಉಲ್ಬಣಗೊಳ್ಳದಂತೆ ನೋಡಿಕೊಳ್ಳುವುದು ಅಗತ್ಯವಾಗುತ್ತದೆ. ಸರ್ಕಾರ ಅದನ್ನು ಕಾನೂನು ಮತ್ತು ಸುವ್ಯವಸ್ಥೆಯ ಸಮಸ್ಯೆಯೆಂದು ಪರಿಗಣಿಸಿ ವಾತಾವರಣವನ್ನು ಶಾಂತಸ್ಥಿತಿಗೆ ತರಲು ಪ್ರಯತ್ನಿಸುತ್ತದೆ. ಸಂಬಂಧಪಟ್ಟ ಕೋಮುಗಳಿಗೆ ಸೇರಿದ ಅಥವಾ ಯಾವ ಕೋಮುಗಳಿಗೂ ಸೇರದೆ ಇರುವ ಶಾಂತಿಪ್ರಿಯ ನಾಗರಿಕರು ಕೋಮುಗಳ ನಡುವೆ ಸೌಹಾರ್ದ, ಶಾಂತಿ ನೆಲೆಸುವಂತೆ ಮಾಡಲು ಪ್ರಯತ್ನಿಸುವುದೂ ಅಗತ್ಯವಾಗುತ್ತದೆ. ಅಂಥ ಸಂದರ್ಭಗಳಲ್ಲಿ ಕೋಮುಸೌಹಾರ್ದ ವೇದಿಕೆ ಅಥವಾ ಶಾಂತಿ ಸಮಿತಿ ರಚಿಸಿಕೊಂಡು ಕಾರ್ಯಪ್ರವೃತ್ತರಾಗುವ ಅಗತ್ಯವುಂಟಾಗುತ್ತದೆ.

ಉದ್ವಿಗ್ನ ಸ್ಥಿತಿ ಮುಗಿದು ಶಾಂತಿ ಅಥವಾ ಸಮಸ್ಥಿತಿ ಮರಳಿದಮೇಲೆ ಅಂಥ ವೇದಿಕೆ ಅಥವಾ ಸಮಿತಿಗಳ ಅಗತ್ಯವಿರುವುದಿಲ್ಲ. ಆ ಗಲಭೆಯ ಸಂದರ್ಭದಲ್ಲಿ ಹಿಂಸಾಚಾರಕ್ಕೆ ಒಳಗಾಗಿ ಸಂತ್ರಸ್ತರಾದವರಿಗೆ ನೆರವು, ಸಾಂತ್ವನ ನೀಡುವ ಅಗತ್ಯ ಇರುವವರೆಗೂ ಅಂಥ ವೇದಿಕೆ ಅಥವಾ ಸಮಿತಿಗಳ ಮುಂದುವರಿಕೆ ಅಗತ್ಯವಾದೀತು. ಶಾಂತಿ ಸಮಿತಿಯೊ, ಕೋಮುಸೌಹಾರ್ದ ವೇದಿಕೆಯೊ ಶಾಶ್ವತ ಸಮಿತಿಯಾಗಿ ಅಥವಾ ವೇದಿಕೆಯಾಗಿ ಇರುವುದು ಸಾಧ್ಯವೂ ಇಲ್ಲ; ಅಗತ್ಯವೂ ಇಲ್ಲ. ಭೂಕಂಪ, ನೆರೆಹಾವಳಿ ಮುಂತಾದ ಪ್ರಕೃತಿ ವಿಕೋಪ, ಅಥವಾ ಬೇರೆ ದೊಡ್ಡ ಪ್ರಮಾಣದ ಅಪಘಾತ, ಅವಘಡಗಳಾದಾಗ ಸಂತ್ರಸ್ತರ ನೆರವಿಗೆ ನಾಗರಿಕ ವೇದಿಕೆಗಳು ಕೆಲಸ ಮಾಡುತ್ತವೆ. ಅವು ಶಾಶ್ವತ ವೇದಿಕೆ ಅಥವಾ ಸಮಿತಿಗಳಾಗಿರುವುದಿಲ್ಲ. ಕೋಮುಸೌಹಾರ್ದ ವೇದಿಕೆ ಅಥವಾ ಶಾಂತಿ ಸಮಿತಿಗಳೂ ಕೂಡ ಆ ಸ್ವರೂಪದವೆ. ಹೀಗಿರುವಾಗ ಕೋಮುಸೌಹಾರ್ದ ವೇದಿಕೆಯನ್ನು ಪರ್ಯಾಯ ರಾಜಕಾರಣದ ವೇದಿಕೆಯಾಗಿ ಮಾಡಿಕೊಳ್ಳಬೇಕೆಂಬ, ಬಾಬಾಬುಡನ್‌ಗಿರಿ ಸೌಹಾರ್ದ ವೇದಿಕೆಯ ಸಂಚಾಲಕ ಮಂಡಲಿಯ ಸದಸ್ಯರಾದ ಡಾ॥ ನಟರಾಜ್ ಹುಳಿಯಾರ್ ಅವರ ಸಲಹೆ ಒಪ್ಪುವಂಥದ್ದಲ್ಲ; ಹಾಗೆ ಮಾಡುವುದರಲ್ಲಿ ಅರ್ಥವಿಲ್ಲ; ಹಾಗೆ ಯೋಚಿಸುವುದರಲ್ಲಿಯೂ ನನಗೆ

ಅರ್ಥ ಕಾಣುವುದಿಲ್ಲ.

ಕೋಮುಸೌಹಾರ್ದ ವೇದಿಕೆ ಭಿನ್ನ ಕೋಮುಗಳ ನಡುವೆ ಗಲಭೆ, ಘರ್ಷಣೆ ಉಂಟಾದ ಕಾಲದಲ್ಲಿ ಮಾತ್ರವಲ್ಲ, ಉಳಿದ ಸಂದರ್ಭಗಳಲ್ಲಿಯೂ ಸೌಹಾರ್ದ ಉಳಿಸಲು, ಬೆಳೆಸಲು ಕೆಲಸ ಮಾಡಬಹುದು ಎಂದು ವಾದಿಸಬಹುದು. ಆದರೆ ಆ ವಾದ ಭಿನ್ನ ಕೋಮುಗಳ ಪ್ರತ್ಯೇಕ ಅಸ್ತಿತ್ವ ಮತ್ತು ಮುಂದುವರಿಕೆಯನ್ನು ಒಪ್ಪುತ್ತದೆ, ಪ್ರತಿಪಾದಿಸುತ್ತದೆ ಎಂಬ ಅಂಶವನ್ನು ಗಮನಿಸಬೇಕು. ಕೋಮುಗಳು ಪ್ರತ್ಯೇಕ ಪ್ರತ್ಯೇಕವಾಗಿ ಇದ್ದೂ ಸೌಹಾರ್ದ ಉಳಿಸಿಕೊಳ್ಳುವುದು ಸಾಧ್ಯ ಎಂದು ಹಾಗೆ ವಾದಿಸುವವರು ನಂಬುತ್ತಾರೆ. ಕೋಮು ಗಲಭೆ, ಘರ್ಷಣೆ, ಹಿಂಸಾಚಾರಗಳ ರೂಪದಲ್ಲಿ ಬಹಿರಂಗವಾಗಿ ಆಗೊಮ್ಮೆ ಈಗೊಮ್ಮೆ ಏರುದನಿಯಲ್ಲಿ ಅಬ್ಬರದಲ್ಲಿ ಪ್ರಕಟಗೊಳ್ಳುವ ಘಟನೆ, ಸಂಗತಿಗಳಷ್ಟಕ್ಕೇ, ಅವುಗಳನ್ನು ತಾತ್ಕಾಲಿಕವಾಗಿ ಶಮನ ಗೊಳಿಸುವಷ್ಟಕ್ಕೇ ಅವರ ಆ ಕೋಮುಸೌಹಾರ್ದದ ಪರಿಕಲ್ಪನೆ ಸೀಮಿತವಾಗಿರುತ್ತದೆ. ನಮ್ಮ ದೇಶದಲ್ಲಿ ಜಾತಿ, ಕೋಮು, ಮತಧರ್ಮಗಳ ಸೌಹಾರ್ದ ಸಹಬಾಳ್ವೆ ತೋರಿಕೆಯದಾಗಿದೆಯೇ ಹೊರತು, ಕಾನೂನಿನ ನಿರ್ಬಂಧಕ್ಕೆ ಅಳುಕಿ ಒಂದಷ್ಟು ತಗ್ಗಿ ಬಗ್ಗಿ ನಡೆಯುವಂತಾಗಿದೆಯೇ ಹೊರತು ನಿಜವಾದ ಅರ್ಥದಲ್ಲಿ ಸೋದರತ್ವವನ್ನು ಬೆಳೆಸುವಂಥದಾಗಿಲ್ಲ. ಅವುಗಳ ಪ್ರತ್ಯೇಕ ಅಸ್ತಿತ್ವ ಉಳಿಸಿಕೊಂಡಿರುವವರೆಗೆ ಅದು ಸಾಧ್ಯವೂ ಇಲ್ಲ. ಅವುಗಳ ಸ್ವರೂಪವೇ ಅಂಥದು, ಎಂಬುದನ್ನು ನಮ್ಮ ದೇಶದ ಪ್ರಾಚೀನ ಮತ್ತು ಆಧುನಿಕ ಚರಿತ್ರೆ ನಮಗೆ ಮನವರಿಕೆ ಮಾಡಿಕೊಟ್ಟಿದೆ; ಮಾಡಿಕೊಡುತ್ತಲೇ ಇದೆ. ಆಧುನಿಕ ಭಾರತದ ಶ್ರೇಷ್ಠ ಸಮಾಜ-ಸಂಸ್ಕೃತಿ-ರಾಜಕೀಯ ಚಿಂತಕರಾದ ಡಾ|| ಬಿ. ಆರ್. ಅಂಬೇಡ್ಕರ್, ಡಾ|| ರಾಮಮನೋಹರ ಲೋಹಿಯಾರವರು ಜಾತಿ ವಿನಾಶದ ಬಗ್ಗೆ ಸುಧಾರಣಾವಾದೀ ಚಿಂತಕರಿಗಿಂತ ಹೆಚ್ಚು ಒತ್ತುಕೊಟ್ಟು ವಾದಿಸುತ್ತಿದ್ದದ್ದನ್ನು ಈ ಹಿನ್ನೆಲೆಯಿಂದ ಅರ್ಥ ಮಾಡಿಕೊಳ್ಳಬೇಕು.

ನಮ್ಮ ಸಂವಿಧಾನದಲ್ಲಿ ಮತಧಾರ್ಮಿಕ ಹಕ್ಕುಗಳ ಬಗ್ಗೆ ಪ್ರಸ್ತಾಪ ಇದೆಯೆ ಹೊರತು ಜಾತಿ ಹಕ್ಕುಗಳ ಬಗ್ಗೆ ಪ್ರಸ್ತಾಪ ಇಲ್ಲ. ಜಾತಿವಾರು ಜನಗಣತಿಯೂ ಇಲ್ಲ. ಅಂದರೆ ಜಾತಿಗಳ ಅಸ್ತಿತ್ವ ನಿಧಾನವಾಗಿ ಕಳಚಿ, ಕಳೆದು ಕರಗಿಹೋಗಲಿ ಎಂಬ ಆಶಯ ಆ ಚಿಂತನೆಯ ಹಿಂದೆ ಇತ್ತು. ಮತಧರ್ಮಗಳ ಹಕ್ಕುಗಳನ್ನು ಸಕಾರಣ ನಿರ್ಬಂಧಗಳ ಹದ್ದುಬಸ್ತಿನಲ್ಲಿಡುವ, ಅವುಗಳ ಅಬ್ಬರವನ್ನು ತಡೆಯುವ ಉದ್ದೇಶ ಸಂವಿಧಾನದಲ್ಲಿ ಇರುವುದೂ ಸ್ಪಷ್ಟವಾಗಿ ಕಾಣಿಸುತ್ತದೆ. ಆದರೆ ಈಗ ಏನಾಗಿದೆ?

ಜಾತಿ, ಮತಧರ್ಮಗಳ ಸಂಘ, ಸಂಘಟನೆ, ಮಠ, ಮದರಸ, ಕ್ರೈಸ್ತ ಸಂಸ್ಥೆಗಳು ಮುಂತಾದವು ಧಾರ್ಮಿಕ ಹಕ್ಕುಗಳ ಕೊಡೆಯ ಅಡಿಯಲ್ಲಿ ರಕ್ಷಣೆ ಪಡೆದುಕೊಂಡು ವಿಜೃಂಭಿಸುತ್ತಿವೆ. ಜಾತೀಯವಾದವು ಹಿಂದೂ ಮತಧರ್ಮೀಯವಾದವನ್ನು ಬೆಳೆಸುವುದರಲ್ಲಿ, ಪೋಷಿಸುವುದರಲ್ಲಿ ಮುಖ್ಯ ಪಾತ್ರ ವಹಿಸುತ್ತಿದೆ. ಜಾತೀಯವಾದವನ್ನು ಹಾಗೂ ಜಾತೀಯವಾದವು ರೂಪಿಸುತ್ತಿರುವ, ರೂಪಿಸಿಕೊಂಡಿರುವ ವೋಟ್ ಬ್ಯಾಂಕ್ ಅನ್ನು ಭಗ್ನಗೊಳಿಸುವುದು ತುರ್ತು ಅಗತ್ಯವಾಗಿದೆ. ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಮುಂತಾದ ಮತಧರ್ಮೀಯ ರಾಜಕೀಯವನ್ನು ಸಕಾರಣ ನಿರ್ಬಂಧಗಳ ಹದ್ದುಬಸ್ತಿನಲ್ಲಿಡಬೇಕಾಗಿದೆ. ವೀರಶೈವ/ಲಿಂಗಾಯತ ಮೊದಲಾದವರು ಇತ್ತೀಚಿನ ವರ್ಷಗಳಲ್ಲಿ ಪ್ರಬಲವಾಗಿ ಪ್ರತಿಪಾದಿಸುತ್ತಿರುವ, ಹಕ್ಕೊತ್ತಾಯ ಮಾಡುತ್ತಿರುವ ಅಲ್ಪಸಂಖ್ಯಾತ ಮತಧರ್ಮೀಯ ವಾದವನ್ನು ನಿಗ್ರಹಿಸಬೇಕಾಗಿದೆ. ಆದರೆ, ಅಂಥ ಜಾತಿ, ಮತಧರ್ಮೀಯ ರಾಜಕಾರಣಗಳನ್ನು ಹದ್ದುಬಸ್ತಿನಲ್ಲಿಡುವುದಕ್ಕೆ ಸಾಧ್ಯವಾಗುವ ಸ್ಥಿತಿ ಈಗ ಉಳಿದಿಲ್ಲ; ದಾರಿಯೂ ನಿಚ್ಚಳವಾಗಿ ಕಾಣಿಸುತ್ತಿಲ್ಲ. ಅಂಥ ಗೋಜಲು ಸ್ಥಿತಿ, ದಿಕ್ಕೆಟ್ಟ ಸ್ಥಿತಿ ಉಂಟಾಗಿದೆ.

ಕೋಮುಸೌಹಾರ್ದ ವೇದಿಕೆಯವರು ಚಿಕ್ಕಮಗಳೂರಿನ ಬಾಬಾಬುಡನ್ ಗಿರಿಯ ದತ್ತಪೀಠ ಸಂಬಂಧವಾದ ವಿವಾದದಲ್ಲಿ ಹಿಂದೂ ಸಂಘಪರಿವಾರದವರ ವಿರುದ್ಧ ಹಾಗೂ ಮುಸ್ಲಿಮರ ಪರ ನಿಲುವನ್ನು ತಳೆದರು. ಸಂಘಪರಿವಾರದವರಿಗೆ ವಿರೋಧ ಒಡ್ಡುವ ಬಲಾಬಲ ಪ್ರದರ್ಶನವನ್ನು ಬೃಹತ್ ಮೆರವಣಿಗೆಯ ಮೂಲಕ ಮಾಡಿದರು. ಕರ್ನಾಟಕದ ಎಂಬತ್ತಕ್ಕೂ ಹೆಚ್ಚು ಜನ ಖ್ಯಾತ ಪ್ರಗತಿಪರರು, ವಿಚಾರವಾದಿಗಳು ಅಧ್ಯಕ್ಷೀಯ ಮಂಡಳಿ ಹಾಗೂ ಸಂಚಾಲಕ ಮಂಡಳಿಗಳಲ್ಲಿ ಇರುವ ಸೌಹಾರ್ದ ವೇದಿಕೆ ಈ ವಿವಾದದಲ್ಲಿ ಸಂಘಪರಿವಾರದವರ ನಿಲುವಿನ ವಿರುದ್ಧ ಪ್ರವೇಶಿಸಿದ್ದರಿಂದ, ದನಿ ಎತ್ತಿದ್ದರಿಂದ ಸರ್ಕಾರ ಹೆಚ್ಚಿನ ಎಚ್ಚರ ಮತ್ತು ಹೊಣೆಗಾರಿಕೆಯಿಂದ ನಡೆದುಕೊಳ್ಳುವುದಕ್ಕೆ


## ಜಾಹಿರಾತು

'ಸಂವಾದ' ಒಂದು ನೋಂದಾಯಿತ ಸ್ವಯಂ ಸೇವಾ ಸಂಸ್ಥೆಯಾಗಿದ್ದು, ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆಯ ಯುವಜನರೊಂದಿಗೆ ಕಳೆದ 16 ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಿದೆ. ನಮ್ಮ ಮುಖ್ಯ ಉದ್ದೇಶ ಯುವಜನರನ್ನು ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಯಲ್ಲಿ ತೊಡಗಿಸುವುದು. ಯುವಜನರಿಗೆ ತಮ್ಮ ಬಗ್ಗೆ, ಸಮಾಜದ ಬಗ್ಗೆ, ಸಾಮಾಜಿಕ ಸಂರಚನೆ ಹಾಗೂ ಪ್ರಕ್ರಿಯೆಗಳ ಬಗ್ಗೆ ತಿಳಿದುಕೊಳ್ಳಲು ಸಹಕರಿಸುವುದಾಗಿದೆ ಹಾಗೂ ಯುವಜನರ ಸ್ವವಿಮರ್ಶೆ, ಕನಸು, ಗುರಿ, ಆಸೆ, ಕ್ರಿಯಾಶೀಲತೆಗಳನ್ನು ಸಾಮಾಜಿಕ ಬದಲಾವಣೆಯ ಕಡೆಗೆ ಪ್ರವಹಿಸುವಂತೆ ಮಾಡುವುದಾಗಿದೆ. ಪ್ರಸ್ತುತ ಸಾಮಾಜಿಕ ನ್ಯಾಯ, ಲಿಂಗಸಮಾನತೆ, ಸುಸ್ಥಿರ ಪರಿಸರ ವಿಷಯಗಳನ್ನೊಳಗೊಂಡಂತೆ ಜೀವನ ಕೌಶಲ್ಯಗಳನ್ನು ಪರಸ್ಪರ ಅರಿತುಕೊಳ್ಳುವ ಕಾರ್ಯಕ್ರಮವನ್ನು ರೂಪಿಸುತ್ತಿದೆ.

ಗ್ರಾಮೀಣ ಯುವಜನರಿಗಾಗಿ ಜೀವನ ಕೌಶಲ್ಯ ಸಂಬಂಧಿ ಕೆಲಸಕ್ಕಾಗಿ ಕಾರ್ಯಕ್ರಮ ನಿರ್ವಹಣಾ ಹುದ್ದೆ : ಈ ಹುದ್ದೆಯ ಮೇಲೆ ತಿಳಿಸಿದಂತಹ ಜೀವನ ಕೌಶಲ್ಯ ಮಾರ್ಗಗಳನ್ನು ಗುರುತಿಸಿ, ಇಂದಿನ ಬದಲಾಗುತ್ತಿರುವ ಉದ್ಯೋಗ ಹಾಗೂ ಜೀವನ ಕೌಶಲ್ಯಗಳ ಸಂದರ್ಭಗಳು ಮತ್ತು ಯುವಜನರ ಬದಲಾಗುತ್ತಿರುವ ಅಗತ್ಯಗಳನ್ನು ವಿಶ್ಲೇಷಿಸಿ, ನಮ್ಮ ಸಂವಾದ ಗ್ರಾಮಾಂತರ ಕೇಂದ್ರಗಳಲ್ಲಿರುವ ಯುವ ಸಹವರ್ತಿಗಳೊಂದಿಗೆ ಸಂವಹಿಸುವ ಜವಾಬ್ದಾರಿಯಿರುತ್ತದೆ.

ಪರ್ಯಾಯ ಜೀವನ ಕೌಶಲ್ಯಗಳು ಹಾಗೂ ಆಸಕ್ತ ಯುವಜನರನ್ನು ಗುರುತಿಸಿದ ನಂತರ ಸಂವಾದ ಗ್ರಾಮಾಂತರ ಕೇಂದ್ರಗಳ ಸಹಯೋಗದೊಂದಿಗೆ ಆ ಕೌಶಲ್ಯಗಳ ಕಲಿಕಾ ಪ್ರಕ್ರಿಯೆ ಹಾಗೂ ತರಬೇತಿ ತಂತ್ರಗಳನ್ನು ರೂಪಿಸಬೇಕಾಗುತ್ತದೆ. ಈ ಕಾರ್ಯಕ್ರಮವನ್ನು ನಿರ್ವಹಣೆ ಮಾಡುವ ವ್ಯಕ್ತಿಯು ಯುವಜನರು ತಾವು ಪುನರ್ ರೂಪಿಸಿಕೊಳ್ಳುವ ಕೌಶಲ್ಯಗಳನ್ನು ಸಾಮಾಜಿಕ ನ್ಯಾಯದ ಮೌಲ್ಯಗಳೊಂದಿಗೆ ಜೀವನ ಮಾರ್ಗಗಳನ್ನಾಗಿ ಕಂಡುಕೊಳ್ಳುವ ತಾಕತ್ತನ್ನು ಬೆಳೆಸುವುದರಲ್ಲಿ ಮುಖ್ಯ ಪಾತ್ರವಹಿಸಬೇಕಾಗುತ್ತದೆ.

**ಅರ್ಹತೆ ಮತ್ತು ಅಗತ್ಯಗಳು:**

1. ಪದವಿ ಅಥವಾ ಸ್ನಾತಕೋತ್ತರ ಪದವಿ ಪಡೆದು, ಜೀವನ ಕೌಶಲ್ಯಗಳಿಗೆ ಸಂಬಂಧಿಸಿದಂತೆ 3 ರಿಂದ 4 ವರ್ಷಗಳ ಅನುಭವವುಳ್ಳವರಾಗಿರಬೇಕು.
2. ಕನ್ನಡ ಹಾಗೂ ಇಂಗ್ಲಿಷ್ ಭಾಷಾ ಜ್ಞಾನ ಹಾಗೂ ಕಂಪ್ಯೂಟರ್ ಜ್ಞಾನವುಳ್ಳವರಾಗಿರಬೇಕು.
3. ಕೆಲಸ ಮಾಡುವ ಯುವಜನರೊಂದಿಗೆ ಗೌರವಯುತವಾಗಿ, ಬೆಂಬಲಯುತವಾಗಿ ವರ್ತಿಸುವುದು ಅಪೇಕ್ಷಣೀಯ, ಹಾಗೂ ಯುವಜನ ಸಂಘಟನೆಗಳು, ಸಂಸ್ಥೆಗಳು, ಮಾರುಕಟ್ಟೆ, ಸ್ವಯಂಸೇವಾ ಸಂಸ್ಥೆಗಳು, ಸಾಮಾಜಿಕ ಕಾರ್ಯಕರ್ತರೊಂದಿಗೆ ಸಂವಹಿಸುವ ಕೌಶಲ್ಯವನ್ನು ಹೊಂದಿರಬೇಕು.

**ಸಂಬಳ :**

6000 ರಿಂದ 8500 ರೂ.ಗಳು (ಅಭ್ಯರ್ಥಿಯ ಶೈಕ್ಷಣಿಕ ಅರ್ಹತೆ ಹಾಗೂ ಅನುಭವದ ಆಧಾರದ ಮೇಲೆ ನಿರ್ಧಾರಿತವಾಗುತ್ತದೆ.)

ಅರ್ಜಿಯನ್ನು ನಿಮ್ಮ ವ್ಯಕ್ತಿ ಪರಿಚಯದ ಜೊತೆ, ಪರ್ಯಾಯ ಜೀವನ ಕೌಶಲ್ಯದ ಬಗ್ಗೆ ನಿಮ್ಮ ದೃಷ್ಟಿಕೋನದ ಒಂದು ಬರಹವನ್ನು ಕೆಳಗಿನ ವಿಳಾಸಕ್ಕೆ ಫೆಬ್ರವರಿ, 15, 2006ರ ಒಳಗೆ ತಲುಪಿಸಬೇಕು.

ಸಂವಾದ, 427/2, 12ನೇ ಮೈನ್, 7ನೇ ಎ ಕ್ರಾಸ್, ಯಲಹಂಕ ನ್ಯೂ ಟೌನ್, ಬೆಂಗಳೂರು -560 064

ಕಾರಣವಾಯಿತು; ಅಲ್ಪಸಂಖ್ಯಾತರಾದವರ ಮತಧಾರ್ಮಿಕ ಹಕ್ಕಿನ ರಕ್ಷಣೆಗೆ ಸಹಾಯವಾಯಿತು. ಸೌಹಾರ್ದ ವೇದಿಕೆಯವರು ಹೇಳಿಕೊಂಡಿರುವಂತೆ ಅದು ಸಂಘಪರಿವಾರಕ್ಕೆ ದಿಗಿಲು ಹುಟ್ಟಿಸಿತು. ಅದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದರೆ ಕೋಮುಸೌಹಾರ್ದ ವೇದಿಕೆಯ ಹೋರಾಟದ ಸ್ವರೂಪ ಸರಿಯಾಗಿತ್ತು ಎನ್ನಬಹುದೆ? ಅದನ್ನು ಸಮರ್ಥಿಸಬಹುದೆ?

ಸಂಘಪರಿವಾರದವರ ಬಲಾಬಲಕ್ಕೆ ಕಡಮೆ ಅಲ್ಲದಂಥ ಸಂಖ್ಯಾಬಲವನ್ನು, ಜನ ಬೆಂಬಲವನ್ನು ಮುಸ್ಲಿಮರ ಪರವಾಗಿ ಪ್ರದರ್ಶಿಸಲು ಕೋಮುಸೌಹಾರ್ದ ವೇದಿಕೆ ಏಳೆಂಟು ಮಠಾಧಿಪತಿಗಳ ಬೆಂಬಲವನ್ನು ಕೂಡ ಪಡೆಯಿತು. ಆ ಮಠಾಧಿಪತಿಗಳು ಮೆರವಣಿಗೆಯಲ್ಲೂ ನೇರವಾಗಿ ಭಾಗವಹಿಸಿದರು. ನಿಡುಮಾಮಿಡಿ ಮಠದ ವೀರಭದ್ರ ಚನ್ನಮಲ್ಲ ಸ್ವಾಮಿಗಳು, ಚಿತ್ರದುರ್ಗ ಮುರುಘಾಮಠದ ಮುರುಘರಾಜೇಂದ್ರ ಶರಣರು ಮೊದಲಾದವರು ಇದ್ದರು. ನಿಡುಮಾಮಿಡಿ ಸ್ವಾಮಿಗಳು ಅವರ ಪೂರ್ವಾಶ್ರಮದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ. ಎ. ಓದುತ್ತಿದ್ದಾಗ ನನ್ನ ವಿದ್ಯಾರ್ಥಿಯಾಗಿದ್ದವರು.

ಕೋಮುಸೌಹಾರ್ದ ವೇದಿಕೆಯ ಸದಸ್ಯರು ಪ್ರಗತಿಪರರು, ವಿಚಾರವಾದಿಗಳು. ಯಾವೊಂದು ಜಾತಿ-ಮತಧರ್ಮದ ಪರ ಇರುವವರೂ ಅಲ್ಲ, ಅವರು ಸಂಘಪರಿವಾರದವರ ಮತಧರ್ಮವಾದೀ ರಾಜಕಾರಣವನ್ನು ಮಾತ್ರವಲ್ಲ ಮುಸ್ಲಿಂ, ಕ್ರಿಶ್ಚಿಯನ್ ಅಥವಾ ಇನ್ಯಾವುದೇ ಮತಧರ್ಮವಾದೀ ರಾಜಕಾರಣವನ್ನು ಕೂಡ ವಿರೋಧಿಸುವವರು ಅಥವಾ ಒಪ್ಪದವರು. ಸಂವಿಧಾನದ ಆಶಯವಾದ ಸೆಕ್ಯುಲರ್-ಜಾತಿ-ಮತಧರ್ಮ ನಿರಪೇಕ್ಷ, ಸೋಷಿಯಲಿಸ್ಟ್-ಸಮಾಜವಾದೀ ಸಮಾಜ-ಸಂಸ್ಕೃತಿ ನಿರ್ಮಾಣದ ಬಗ್ಗೆ ನಂಬಿಕೆ, ನಿಷ್ಠೆ ಇರುವವರು, ಎಂಬುದು ಸಾಮಾನ್ಯ ಗ್ರಹಿಕೆಯಾಗಿದೆ. ಸೌಹಾರ್ದ ವೇದಿಕೆಯು ಡಿಸೆಂಬರ್ ೨೮, ೨೦೦೩ರ ಸಮಾವೇಶವನ್ನು ಭಾರತದ ಕೋಮುವಿರೋಧಿ ಚಳವಳಿಯ ಇತಿಹಾಸದಲ್ಲಿ ದಾಖಲಾಗುವ ಡಿ ೨೮ರ ಸಮಾವೇಶ ಎಂದೇ ಹೇಳಿಕೊಂಡಿದೆ. ಆದರೆ ಅಂಥವರು ಮಠಾಧಿಪತಿಗಳನ್ನು ಜತೆ ಸೇರಿಸಿಕೊಂಡು ಅಥವಾ ಮಠಾಧಿಪತಿಗಳ ಜತೆ ಸೇರಿಕೊಂಡು ಬಲಾಬಲ ಪ್ರದರ್ಶನಕ್ಕೆ ಇಳಿದದ್ದು ಸರಿ ಎಂದು ಸಮರ್ಥಿಸುವುದು ಹೇಗೆ ? ಹಾಗೆಯೆ ಕೋಮು ಸೌಹಾರ್ದದ ಮಾತನಾಡುತ್ತ ಎರಡೂ ಕೋಮುಗಳ ಹಕ್ಕಿನ ಸಂಬಂಧದ ವಿವಾದದಲ್ಲಿ ಸ್ಪಷ್ಟವಾಗಿ ಯಾವುದೇ ಒಂದು ಕೋಮಿನ ಪರ ನಿಂತು ನೇರಹೋರಾಟಕ್ಕೆ ಇಳಿಯುವುದು ಸರಿಯೆ? ಅದು ಸೌಹಾರ್ದದ ನಿಲುವಾಗುತ್ತದೆಯೊ, ಸಂಘರ್ಷದ ನಿಲುವಾಗುತ್ತದೆಯೊ? ಸಂವಿಧಾನದ ಧಾರ್ಮಿಕ ಹಕ್ಕಿನ ಪ್ರಕಾರ/ನ್ಯಾಯಾಲಯದ ತೀರ್ಪಿನ ಪ್ರಕಾರ ನ್ಯಾಯ ಇರುವವರ ಪರವಾಗಿ ನ್ಯಾಯ ದೊರಕಿಸಿಕೊಡಲು ನೇರವಾಗಿ ಸರ್ಕಾರದ ಮೇಲೆ ಪ್ರಗತಿಪರರು, ವಿಚಾರವಂತರು ಒತ್ತಡ ಹೇರುವುದು ಬೇರೆ. ಈ ವ್ಯತ್ಯಾಸ ಗಮನಿಸಬೇಕು.

ಪ್ರಗತಿಪರರು, ವಿಚಾರವಂತರು ಇಂಥ ವಿವಾದ ಸೃಷ್ಟಿಯಾದಾಗ ಸರಿತಪ್ಪು ಕುರಿತಂತೆ ಮಾತನಾಡಬೇಕಾಗುತ್ತದೆ, ಅಗತ್ಯವಾದರೆ ಹೋರಾಟವನ್ನೂ ಮಾಡಬೇಕಾಗುತ್ತದೆ. ಪ್ರಜಾಪ್ರಭುತ್ವದ ಆರೋಗ್ಯ ಕಾಪಾಡಿಕೊಳ್ಳುವುದಕ್ಕೆ ಅದು ಬೇಕು. ಆದರೆ, ಹೋರಾಟದ ಸ್ವರೂಪ ಯಾವ ರೀತಿಯದಾಗಿರಬೇಕೆಂಬ ಬಗ್ಗೆ ಸ್ಪಷ್ಟತೆ ಇರಬೇಕಾಗುತ್ತದೆ. ದತ್ತಪೀಠ ಸಂಬಂಧದ ಅದರ ಹೋರಾಟದ ಸ್ವರೂಪವನ್ನು ಗಮನಿಸುತ್ತ ಬಂದ ನನಗೆ ಕೋಮುಸೌಹಾರ್ದ ವೇದಿಕೆಯವರಿಗೆ ಅಂಥ ಸ್ಪಷ್ಟತೆಯ ಕೊರತೆ ಇದೆ ಎಂದು ಅನಿಸಿದೆ. ಅಂಥ ನಿಲುವು, ನೋಟ ಪರ್ಯಾಯ ರಾಜಕಾರಣದ ತಾತ್ವಿಕ ನೆಲೆಯನ್ನು ಸಡಿಲಗೊಳಿಸುವ ಅಪಾಯ ಇದೆ.

ದೇಶದಲ್ಲಿ ಒಂದೂವರೆ-ಎರಡು ದಶಕಗಳಿಂದಂತೂ ಸಂಘಪರಿವಾರದವರ ಹಿಂದೂ ಮತ ಧರ್ಮವಾದೀ ರಾಜಕೀಯವು ಸಂವಿಧಾನದ ಸೆಕ್ಯುಲರ್, ಸೋಷಯಲಿಸ್ಟ್ ಸಮಾಜ ಸಂಸ್ಕೃತಿ ನಿರ್ಮಾಣದ ಆಶಯ, ಆದರ್ಶದ ಬಗ್ಗೆ ನಿಷ್ಠೆ ಇರುವವರಿಗೆ ಹೆಚ್ಚಿನ ಆತಂಕಕ್ಕೆ ಕಾರಣವಾಗಿದೆ; ಅದೊಂದು ಸವಾಲಾಗಿ ಪರಿಣಮಿಸಿದೆ. ಗಾಂಧೀಜಿಯ ಹತ್ಯೆಯ ಅನಂತರದ ಕಾಲದಲ್ಲಿ ದನಿ ಕುಗ್ಗಿಹೋಗಿದ್ದ, ಜನಬೆಂಬಲ ತಪ್ಪಿಹೋಗಿದ್ದ ಹಿಂದುತ್ವ ವಾದವು ನಮ್ಮ ಪ್ರಜಾಪ್ರಭುತ್ವದ ಆಶಯಗಳನ್ನೇ ಭಗ್ನಗೊಳಿಸುವ ರೀತಿಯಲ್ಲಿ, ರಭಸದಲ್ಲಿ ಬೆಳೆಯುತ್ತಿರುವುದನ್ನು ತಡೆಯಲು ಜನಜಾಗೃತಿಯನ್ನು ಉಂಟುಮಾಡುವುದು ಪರ್ಯಾಯ ರಾಜಕೀಯದ ಬಗ್ಗೆ ಚಿಂತಿಸುತ್ತಿರುವವರ ಹಾಗೂ ಪ್ರಗತಿಪರರ, ವಿಚಾರವಂತರ ತುರ್ತು ಕರ್ತವ್ಯವಾಗಿದೆ.

ಈ ಹಿಂದುತ್ವವಾದ ಹೀಗೆ ಹೆಚ್ಚಿಕೊಂಡಿರುವುದಕ್ಕೆ ಕಾರಣಗಳೇನು, ಎಂಬ ಬಗ್ಗೆ ಯೋಚಿಸಬೇಕು. ಜಾತೀಯವಾದವು ಸಂಘ, ಸಂಘಟನೆಗಳ ರೂಪ ತಾಳಿ ವೋಟ್


ಶುಭಾಶಯಗಳೊಂದಿಗೆ



ಭಾರತಿ ಪ್ರಕಾಶನ

ಸರಸ್ವತೀಪುರಂ, ಮೈಸೂರು – 570 009

ದೂರವಾಣಿ: 2543941


ಬ್ಯಾಂಕ್‌ಗಳ ಸ್ವರೂಪ ತಳೆದು ಬೆಳೆಯತೊಡಗಿದಂತೆ ಸೆಕ್ಯುಲರ್ ರಾಜಕಾರಣದ ಬಗ್ಗೆ ನಿಷ್ಠೆ ಸಡಿಲವಾಗುತ್ತಹೋಗಿ, ಆ ಮನಃಸ್ಥಿತಿಯೇ ಮತಧರ್ಮವಾದೀ ಮನಃಸ್ಥಿತಿಯನ್ನು ಬೆಳೆಸುವುದಕ್ಕೆ ಕಾರಣವಾಯಿತು, ಎಂಬುದನ್ನು ಮರೆಯಬಾರದು. ಹಿಂದುಗಳಲ್ಲಿ ಮಾತ್ರವಲ್ಲ ಇತರ ಮತಧರ್ಮೀಯರಲ್ಲಿಯೂ ಇಂಥ ಮನಃಸ್ಥಿತಿ ತಪ್ಪಲ್ಲ ಎಂಬಂಥ ಪ್ರತಿಗಾಮಿ ಭಾವನೆ, ಅಭಿಪ್ರಾಯ ಬೆಳೆಯುವಂತಾಯಿತು. ಇತರ ಮತಧರ್ಮೀಯರಲ್ಲಿ ಆತ್ಮರಕ್ಷಣೆಯ ವಾದವನ್ನು ಅದು ಹುಟ್ಟುಹಾಕುವುದಕ್ಕೆ ಕಾರಣವಾಯಿತು. ಜಾತೀಯವಾದಿ ಮನಃಸ್ಥಿತಿ ಬದಲಾಗದೆ, ಅದು ಅಳಿಸಿಹೋಗದೆ ಸಂಘಪರಿವಾರದ ಹಿಂದೂವಾದದ ಮತೀಯವಾದೀ ಅಬ್ಬರ ಕಡಮೆಯಾಗುವುದಿಲ್ಲ. ಇತರ ಮತಧರ್ಮೀಯರ ಮತೀಯವಾದೀ ರಾಜಕಾರಣವೂ ಕಡಮೆಯಾಗುವುದಿಲ್ಲ ಆದ್ದರಿಂದ ಪ್ರಗತಿಪರರು, ವಿಚಾರವಾದಿಗಳು ಜಾತೀಯವಾದವನ್ನು ವಿರೋಧಿಸುವಂಥ ಮನಃಸ್ಥಿತಿಯ ನಿರ್ಮಾಣಕ್ಕಾಗಿ ದುಡಿಯುವುದು, ಹೋರಾಡುವುದು ಅಗತ್ಯವಾಗಿದೆ.

ಪರಿಸ್ಥಿತಿ ಹೀಗಿರುವಾಗ ಪ್ರಗತಿಪರರರೆಂಬುವರು, ಜಾತಿ-ಮತಧರ್ಮ ನಿರಪೇಕ್ಷತೆಯ ಬಗ್ಗೆ ಸಮಾಜವಾದೀ ಸಮಾಜ-ಸಂಸ್ಕೃತಿಯ ಬಗ್ಗೆ ನಂಬಿಕೆ, ನಿಷ್ಠೆ ಇದೆ ಎಂದು ಹೇಳುವವರು ಮಠಾಧಿಪತಿಗಳನ್ನು ತಮ್ಮ ಹೋರಾಟದ ಅಸ್ತ್ರಗಳನ್ನಾಗಿ ಮಾಡಿಕೊಂಡಿದ್ದನ್ನು ಸಮರ್ಥಿಸುವುದು ಹೇಗೆ? ಆ ಮಠಾಧಿಪತಿಗಳು ಸುಧಾರಣಾವಾದೀ ಮನೋಭಾವದವರಿರಬಹುದು; ಪ್ರಗತಿಪರ ಸ್ವಾಮಿಗಳಿರಬಹುದು (ಡಾ|| ರಾಜೇಂದ್ರ ಚೆನ್ನಿ). ಅವರ ಆ ಬಗೆಗಿನ ಪ್ರಾಮಾಣಿಕತೆಯನ್ನು ನಾನು ಪ್ರಶ್ನಿಸುವುದಿಲ್ಲ. ಆದರೆ ಅವರುಗಳ ಮಠಾಧಿಪತಿ ಅಸ್ತಿತ್ವವು ಜಾತಿ-ಮತಧರ್ಮದ ಆಧಾರದ ಮೇಲೆಯೇ ನಿಂತಿರುವ ಮಠವನ್ನು ಬಿಟ್ಟು ಇಲ್ಲ. ಮಠದ ಸಂಬಂಧವನ್ನು ಬಿಟ್ಟ ಘಳಿಗೆಯಿಂದ ಅವರು ಮಠಾಧಿಪತಿಗಳಾಗುವುದಿಲ್ಲ; ಅವರಿಗೆ ಮೊದಲಿನಂತೆ ಸ್ವಾಮಿತನದ ಪ್ರಭಾವಳಿ ಇರುವುದಿಲ್ಲ. ಮತಧರ್ಮೀಯವಾದಿಗಳ ರಾಜಕಾರಣವನ್ನು ಎದುರಿಸುವುದಕ್ಕೆ ಬೇರೊಂದು ಮತಧರ್ಮೀಯ ಮೂಲದಿಂದಲೇ ಪಡೆದ ಶಕ್ತಿ, ಪ್ರಭಾವಳಿಗಳನ್ನು ಮಠಾಧಿಪತಿಗಳ ರೂಪದಲ್ಲಿ ಬಳಸಿಕೊಳ್ಳುವುದರಲ್ಲಿ ತತ್ವ ಇದೆಯೊ ? ತಂತ್ರ ಇದೆಯೊ ? ಪ್ರಗತಿಪರರೂ ವಿಚಾರವಾದಿಗಳೂ ಪ್ರಜಾಸತ್ತಾತ್ಮಕ ರಾಜ್ಯವ್ಯವಸ್ಥೆ ಇರುವ ದೇಶದಲ್ಲಿ ಹೀಗೆ ತಂತ್ರರಾಜಕೀಯದ ಮೊರೆಹೋಗಬೇಕಾದುದು ಅಗತ್ಯವೆ, ಅನಿವಾರ್ಯವೆ ?

ಹಿಂದೂ ಮತಧರ್ಮೀಯ ರಾಜಕಾರಣವನ್ನು ಮಾಡುವ ಸಂಘಪರಿವಾರದವರನ್ನು ನಿಷ್ಠುರವಾಗಿ ಟೀಕಿಸುವಂತೆಯೆ, ಅಲ್ಪಸಂಖ್ಯಾತ ಮತಧರ್ಮ ಸ್ಥಾನಮಾನದ ಕಾರಣ ಮುಂದೆಮಾಡಿ ವೀರಶೈವರು/ಲಿಂಗಾಯಿತರು ೨೦೦೦ದಿಂದೀಚೆಗೆ ಮಾಡುತ್ತಿರುವ ಮತಧರ್ಮವಾದೀ ರಾಜಕಾರಣ ಸರಿಯಲ್ಲ, ಎಂದು ಕೋಮುಸೌಹಾರ್ದ ವೇದಿಕೆ ಟೀಕಿಸಿದ್ದುಂಟೆ ? ಟೀಕಿಸುತ್ತಿದೆಯೆ ? ಪ್ರತಿಭಟನಾ ಮೆರವಣಿಗೆಯಲ್ಲಿ ಭಾಗವಹಿಸಿದ್ದ ಮಠಾಧಿಪತಿಗಳು ಟೀಕಿಸಿದ್ದುಂಟೆ ? ಟೀಕಿಸುತ್ತಿದ್ದಾರೆಯೆ ? ನನ್ನ ಗಮನಕ್ಕೆ ಬಂದಿಲ್ಲ; ಇದ್ದರೆ ತಿಳಿಯಬಯಸುತ್ತೇನೆ. ಕೋಮುಸೌಹಾರ್ದ ವೇದಿಕೆಯ ಸಂಚಾಲಕ ಮಂಡಳಿಯ ಸದಸ್ಯರ ಪಟ್ಟಿಯಲ್ಲಿ ಹೆಸರಿಸಿರುವವರಲ್ಲಿಯೆ ಅಖಿಲ ಭಾರತ ವೀರಶೈವ ಮಹಾಸಭೆಯ ಜಾತಿ/ಮತಧರ್ಮವಾದೀ ಚಳವಳಿಯನ್ನು ಬರವಣಿಗೆಯ ಮೂಲಕ ಅತ್ಯುತ್ಸಾಹದಿಂದ ಬೆಂಬಲಿಸಿದವರೂ ಇದ್ದಾರೆ. ಅವರೇ ಡಾ|| ಎಂ. ಚಿದಾನಂದಮೂರ್ತಿಯವರ ವೀರಶೈವರು/ಲಿಂಗಾಯತರು ಹಿಂದೂಗಳೇ, ಪ್ರತ್ಯೇಕ ಮತಧರ್ಮದವರಲ್ಲ ಎಂಬ

ವಾದವನ್ನು ಮಾತ್ರ ಉಗ್ರವಾಗಿ ಖಂಡಿಸಿದ್ದು ಉಂಟು (ಲಿಂಗಾಯತರು ಯಾರು?-ಅಲ್ಲಮಪ್ರಭು ಬೆಟ್ಟದೂರು, ಆಂದೋಲನ ೫-೫-೨೦೦೦). ಸಂಚಾಲಕ ಮಂಡಲಿಯ ಮೊದಲ ಹೆಸರಿನವರಾದ ಡಾ॥ ರಾಜೇಂದ್ರ ಚೆನ್ನಿಯವರೂ 'ಕವಲುದಾರಿಯಲ್ಲಿ ವೀರಶೈವ ಧರ್ಮ' ಎಂಬ ಅವರ ಲೇಖನದಲ್ಲಿ ಅದೇ ಬಗೆಯ ನಿಲುವನ್ನು ಪ್ರತಿಪಾದಿಸಿದ್ದಾರೆ. ಡಾ॥ ಎಂ. ಚಿದಾನಂದಮೂರ್ತಿಯವರ ಬದಲು ವಿಜಯ ಸಂಕೇಶ್ವರ ಮತ್ತು ಅವರ ಲಾರಿಯ ಮೇಲೆ ಹರಿಹಾಯ್ದಿದ್ದಾರೆ. ವಿಜಯ ಸಂಕೇಶ್ವರ ಅವರನ್ನು ಬಸವದ್ರೋಹಿ, ಸ್ವಜಾತಿದ್ರೋಹಿ, ಬಿಜೆಪಿ ಲಿಂಗಾಯತ ಮುಖಂಡರು ಎಂದು ಬೈದಿದ್ದಾರೆ (ನಡುಹಗಲಲ್ಲಿ ಕಂದೀಲುಗಳು ೨೦೦೪:ಪು೧೪೮). ಯಾಕೆ ಹೀಗೆ? ಪ್ರಗತಿಪರರ ದೃಷ್ಟಿಯಲ್ಲಿ, ಕೋಮುವಿರೋಧಿ ಚಳವಳಿಕಾರರಾದ ಅವರ ದೃಷ್ಟಿಯಲ್ಲಿ ಈ ಎರಡೂ ಕಡೆಯವರ ನಿಲುವುಗಳೂ ಪ್ರಶ್ನಾರ್ಹವೇ ಆಗಬೇಕಲ್ಲವೆ?

ಸಾಧು-ಸನ್ಯಾಸಿ, ಸಂತ, ಮಠಾಧಿಪತಿಗಳನ್ನು ಬೆಂಬಲಕ್ಕಿಟ್ಟುಕೊಂಡು ಸಂಘ ಪರಿವಾರದವರು ಹಿಂದೂ ಮತಧರ್ಮವಾದೀ ರಾಜಕಾರಣವನ್ನು ಮಾಡಿದಂತೆಯೆ, ಮಾಡುತ್ತಿರುವಂತೆಯೆ ವೀರಶೈವ/ಲಿಂಗಾಯತರೂ (ವೀರಶೈವ/ಲಿಂಗಾಯತ ಮಹಾ ಸಭೆಗಳವರಾಗಲಿ, ಡಾ॥ ಎಂ. ಚಿದಾನಂದಮೂರ್ತಿಯವರಂಥ ಏಕಾಂಗ ಹೋರಾಟ ಗಾರರಾಗಲಿ) ಸನ್ಯಾಸಿಗಳಾದ ಮಠಾಧಿಪತಿಗಳನ್ನೊ ಮತ್ತು ಅಥವಾ ಅವರ ಅಭಿಪ್ರಾಯ ಆಶೀರ್ವಾದಗಳನ್ನೊ ಬೆಂಬಲಕ್ಕಿಟ್ಟುಕೊಂಡೇ ಮತೀಯವಾದೀ ರಾಜಕಾರಣವನ್ನು ಮಾಡಿದ್ದಾರೆ, ಮಾಡುತ್ತಿದ್ದಾರೆ. ಸಂಘಪರಿವಾರದವರು ರಥಯಾತ್ರೆ ಮಾಡಿದಂತೆಯೆ ಅಖಿಲ ಭಾರತ ವೀರಶೈವ ಮಹಾಸಭೆಯವರೂ ಉಳವಿಯಿಂದ ೨೫-೧೧-೨೦೦೦ ದಿಂದ ಜನಗಣತಿ ಜಾಗೃತಿ ಜಾಥಾ ಮಾಡಿದ್ದುಂಟು. ಮೈಸೂರು ನಗರದಲ್ಲಿ ಏರ್ಪಡಿಸಿದ್ದ ವೀರಶೈವ/ಲಿಂಗಾಯತ ಜನಗಣತಿ ಹಾಗೂ ಜಾಗೃತಿ ಜಾಥಾ ಜಿಲ್ಲಾ ಸಮೇಳನದಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷ ಭೀಮಣ್ಣ ಖಂಡ್ರೆಯವರು, ಆಡಿದ ಮಾತುಗಳಿವು : ''...ಇನ್ನು ಮುಂದೆ ನಾವು ಮಠಮಾನ್ಯಗಳ ಅಡಿಯಲ್ಲಿ ರಾಜಕೀಯ ಮುಖಂಡರ ಸಹಕಾರದಿಂದ ಬೆಳೆದು ಶಕ್ತಿವಂತರಾಗಬೇಕು... ಜನಗಣತಿ ಜಾಗೃತಿ ಜಾಥಾ ಎಂಬ ಅಶ್ವಮೇಧ ಯಾಗವನ್ನು ಮಾಡುವ ಮೂಲಕ ನಾವು ಸ್ವಾಮೀಜಿಗಳ ಸಾಮ್ರಾಜ್ಯ ಸ್ಥಾಪನೆಗೆ ಶ್ರಮಿಸುತ್ತಿದ್ದೇವೆ. ಅದಕ್ಕೆ ಎಲ್ಲರ ಸಹಕಾರ ಬೇಕು'' (ಆಂದೋಲನ ೬-೧೨-೨೦೦೦).


**M. I. PUBLICATIONS**

First Floor, Maruthi Tower, 20/4, Sanjay Place, AGRA - 282 002

Useful books for college students, ICSE, CBSE, Higher Secondary, + 2 and

By Prof. R. P. Chaturvedi

**HINDI - HINDI - ENGLISH DICTIONARY**

**WITH PRONUNCIATION IN ENGLISH**

**HINDI - ENGLISH DICTIONARY**

Unparalleled Books by Prof. M. P. Bhatia

*For I.A.S., P.C.S., College Students and all other higher competitive examinations*

**ADVANCED ESSAYS**

*The book contains all latest important topics with detailed analysis of the subject/topic*

**LATEST ESSAYS**

*The book contains all latest topics having wide*


ಅಖಿಲ ಭಾರತ ವೀರಶೈವ ಮಹಾಸಭೆ ಮತ್ತು ಅದರ ವಕ್ತಾರರಾದ ಅಧ್ಯಕ್ಷ ಭೀಮಣ್ಣ ಖಂಡ್ರೆ, ಉಪಾಧ್ಯಕ್ಷರುಗಳಾದ ವಿಶ್ವನಾಥರೆಡ್ಡಿ ಮುದ್ನಾಳ್, ತಿಪ್ಪಣ್ಣ ಅವರುಗಳ ಪ್ರಕಾರ ವೀರಶೈವರು ಹಿಂದೂಗಳಲ್ಲ. ವೀರಶೈವ ಎಂಬುದೊಂದು ಪ್ರತ್ಯೇಕ ಸ್ವತಂತ್ರ ಧರ್ಮ. ವೀರಶೈವ, ಲಿಂಗಾಯತರು ಒಂದೇ; ಬೇರೆ ಬೇರೆ ಅಲ್ಲ. ಸಂಶೋಧಕ ವಿದ್ವಾಂಸರಾದ ಡಾ॥ ಎಂ. ಚಿದಾನಂದಮೂರ್ತಿಯವರು, ಮಠಾಧಿಪತಿಗಳಾದ ಡಾ॥ ಶಿವಾನಂದ ಶಿವಾಚಾರ್ಯರು, ಶ್ರೀ ರಂಭಾಪುರಿ ಜಗದ್ಗುರುಗಳು ಮತ್ತಿತರರ ಪ್ರಕಾರ ವೀರಶೈವರು ಹಿಂದೂಗಳು, ವೀರಶೈವವು ಹಿಂದೂಧರ್ಮದ ಒಂದು ಪ್ರಭೇದ ಅಥವಾ ಬೆಳವಣಿಗೆಯೇ ಹೊರತು ಅದೊಂದು ಸ್ವತಂತ್ರ ಧರ್ಮವಲ್ಲ. ವೀರಶೈವ ಲಿಂಗಾಯತರು ಒಂದೇ; ಬೇರೆ ಬೇರೆ ಅಲ್ಲ. ಸಿದ್ಧಗಂಗಾ ಮಠದ ಡಾ॥ ಶಿವಕುಮಾರಸ್ವಾಮಿಗಳು, ಬೇಲಿಮಠದ ಶಿವರುದ್ರಸ್ವಾಮಿಗಳು ವೀರಶೈವರು ಲಿಂಗಾಯತರು ಬೇರೆ ಬೇರೆ ಅಲ್ಲ ಎನ್ನುತ್ತಾರೆ. ಒಮ್ಮೆ ಅವರು ಹಿಂದೂಗಳು ಎಂದರೆ ಮತ್ತೊಮ್ಮೆ ಅವರು ಪ್ರತ್ಯೇಕ ಮತಧರ್ಮದ ಹೆಸರಿನಲ್ಲಿ ದಾಖಲಿಸಿಕೊಳ್ಳಬೇಕೆಂದು ಹೇಳುವ ದ್ವಂದ್ವದಲ್ಲಿ, ಸಂದಿಗ್ಧದಲ್ಲಿ ಈ ಸ್ವಾಮಿಗಳು ಇದ್ದಾರೆ.

ಅಖಿಲ ಭಾರತ ಲಿಂಗಾಯತ ಮಹಾಸಭಾದ ಮಾತೆ ಮಹಾದೇವಿಯವರ ಪ್ರಕಾರ ವೀರಶೈವರು ಹಿಂದೂಗಳು; ಲಿಂಗಾಯತರು ಹಿಂದೂಗಳಲ್ಲ. ವೀರಶೈವರು ಲಿಂಗಾಯತರು ಒಂದೇ ಅಲ್ಲ; ಬೇರೆ ಬೇರೆ. ಲಿಂಗಾಯತರದು ಪ್ರತ್ಯೇಕ ಸ್ವತಂತ್ರ ಧರ್ಮ. ವೀರಶೈವರದು ಪ್ರತ್ಯೇಕ ಸ್ವತಂತ್ರ ಧರ್ಮವಲ್ಲ. ಅಖಿಲ ಭಾರತೀಯ ಬೇಡ ಜಂಗಮ, ಬಡಗ ಜಂಗಮ, ಮಲ ಜಂಗಮ ಸಮಾಜ ಸಂಸ್ಥೆ ಅಧ್ಯಕ್ಷರಾದ ಕೊಳದ ಮಠದ ಶ್ರೀ ಶಾಂತವೀರ ಸ್ವಾಮೀಜಿಯವರು ಈ ಜಂಗಮ ಉಪಜಾತಿಗಳವರು ಹಿಂದೂ-ವೀರಶೈವರೆಂದು ಒಪ್ಪುವುದರ ಜೊತೆಗೆ ತಮ್ಮ ತಮ್ಮ ಉಪಜಾತಿಗಳ ಪ್ರತ್ಯೇಕ ದಾಖಲಾತಿಯೂ ಇರಬೇಕೆನ್ನುತ್ತಾರೆ. - ಹೀಗೆ ಮತಧರ್ಮ ರಾಜಕಾರಣದಲ್ಲಿ ಒಂದು ಒಟ್ಟಾರೆ ಅಭಿಪ್ರಾಯ ರೂಪುಗೊಳ್ಳದೇ ಇರುವುದು ಅಧಿಕಾರ ರಾಜಕಾರಣದ ಹಿತಾಸಕ್ತಿ ತೀವ್ರವಾಗಿರುವ ವೀರಶೈವ/ಲಿಂಗಾಯತ ರಾಜಕಾರಣಿಗಳಿಗೆ ತಲೆನೋವಾಗಿದೆ. ಅವರು ಎಲ್ಲ ಭಿನ್ನಾಭಿಪ್ರಾಯಗಳನ್ನು ಹೇಗಾದರೂ ನಿವಾರಿಸಿ ಒಂದು ಒಟ್ಟಭಿಪ್ರಾಯವನ್ನು ರೂಪಿಸುವ ಪ್ರಯತ್ನವನ್ನು ಬಿರುಸಿನಿಂದ ಮಾಡುತ್ತಿದ್ದಾರೆ. ಅದೇನೂ ಗುಟ್ಟಾಗಿ ಉಳಿದಿಲ್ಲ. ಕಳೆದ ಐದಾರು ವರ್ಷಗಳಿಂದ ಈ ವಿದ್ಯಮಾನಗಳು ನಡೆಯುತ್ತಲೇ ಇವೆ.

ಇದು ಒಂದು ಒಟ್ಟಾರೆಯ ಗಟ್ಟಿರೂಪ ಪಡೆದದ್ದಾದರೆ ಆಗ ಅದು ಸ್ಪಷ್ಟವಾಗಿ ಹಿಂದುತ್ವವಾದೀ ಮತಧರ್ಮರಾಜಕಾರಣ ಮತ್ತು ಅದರ ಅಧಿಕಾರ ರಾಜಕಾರಣದ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಹಿಂದುತ್ವವಾದೀ ರಾಜಕಾರಣ ಹಾಗೂ ವೀರಶೈವ/ಲಿಂಗಾಯತ ರಾಜಕಾರಣಗಳು ಸಮನೆಲೆಯಲ್ಲಿಯೊ ಸಮಾನಾಂತರ ನೆಲೆಯಲ್ಲಿಯೊ ವ್ಯವಹರಿಸುತ್ತವೆ. ಕರ್ನಾಟಕದ ರಾಜಕೀಯದ ಮಟ್ಟಿಗಂತೂ ವೀರಶೈವ/ ಲಿಂಗಾಯತ ರಾಜಕಾರಣವು ಹಿಂದುತ್ವವಾದೀ ರಾಜಕಾರಣವನ್ನು ಜತೆಗೂಡಿಕೊಂಡರೂ ಅದರ ಅಧಿಕಾರ ರಾಜಕಾರಣವನ್ನು ಬಹುಪಾಲು ತನ್ನ ನಿಯಂತ್ರಣದಲ್ಲಿ ಇಟ್ಟುಕೊಳ್ಳಬಲ್ಲಂಥ ಶಕ್ತಿ ಪಡೆದುಕೊಳ್ಳುತ್ತದೆ. ಅದರ ಮತಧರ್ಮ ರಾಜಕಾರಣಕ್ಕೆ ತೊಂದರೆಯೇನೂ ಆಗುವುದಿಲ್ಲ. ಅದು ವೀರಶೈವ/ಲಿಂಗಾಯತ ರಾಜಕಾರಣ ಮಾಡಲು ಮುಂದಾಗಿ ಇರುವವರಿಗೆ ಚೆನ್ನಾಗಿ ಗೊತ್ತಿದೆ.

ಅಂಥ ಸ್ಥಿತಿ ಉಂಟಾದಲ್ಲಿ ಕರ್ನಾಟಕವು ಮತಧರ್ಮವಾದೀ ರಾಜಕಾರಣದ ಆಡುಂಬೊಲವಾಗುತ್ತದೆ. ಈ ಅಪಾಯವನ್ನು ಇಂದು ಕರ್ನಾಟಕದಲ್ಲಿ ಪರ್ಯಾಯ ರಾಜಕಾರಣ ಕಟ್ಟುವವರು ಮುಂದಾಗಿಯೇ ನಿರೀಕ್ಷಿಸಿ ಅಂಥ ಬೆಳವಣಿಗೆಗಳನ್ನು ರಾಜಕೀಯವಾಗಿ ಎದುರಿಸಲು ಸಿದ್ಧವಾಗಬೇಕಾಗಿದೆ. ಪ್ರಗತಿಪರ ಚಿಂತಕರೂ ಈ ಬಗ್ಗೆ ಗಂಭೀರವಾಗಿ ಯೋಚಿಸುವುದು ಅಗತ್ಯವಾಗಿದೆ.

ವೀರಶೈವ/ಲಿಂಗಾಯತ ರಾಜಕಾರಣ ಒಂದು ಗಟ್ಟಿ ರೂಪವನ್ನೊ, ಸಮಗ್ರ ರೂಪವನ್ನೊ ಪಡೆಯುತ್ತಿದ್ದಂತೆ, ಕೋಮುಸೌಹಾರ್ದ ವೇದಿಕೆಯ ಜೊತೆ ಸೇರಿಕೊಂಡು ಸಂಘ ಪರಿವಾರದವರನ್ನು ವಿರೋಧಿಸಿದ ಪ್ರಗತಿಪರ .ಮಠಾಧಿಪತಿಗಳು ಎಲ್ಲಿರುತ್ತಾರೆ ಎಂದು ಹೇಳುವುದು ಸುಲಭವಲ್ಲ. ಅವರುಗಳು ಆ ರಾಜಕಾರಣದೊಂದಿಗೆ ಸೇರದೆ ತಮ್ಮ ಈಗಿನ ನಿಲುವಿನ ಬಗ್ಗೆ ದೃಢ ನಿಷ್ಠೆ ಇರುವವರೇ ಆಗಿದ್ದರೂ ಆಯಾ ಮಠಗಳಿಗೆ ನಡೆದು ಕೊಳ್ಳುವ ಭಕ್ತಾದಿಗಳೊ ಶರಣಾದಿಗಳೊ ಆ ಮಠಾಧಿಪತಿಗಳಷ್ಟೆ ನಿಷ್ಠೆಯುಳ್ಳವರಾಗಿ ಇರುತ್ತಾರೆ ಎಂದು ಸರಳವಾಗಿ ಹೇಳುವಂತಿಲ್ಲ. ಅಂಥ ಸಂದರ್ಭ ಉಂಟಾದಲ್ಲಿ ಆಗ ಆ

ಮಠಾಧಿಪತಿಗಳು ವೈಯಕ್ತಿಕ ನಿಲುವು ತಳೆದು ಹೊರಬರುವಂತಾದೀತು, ಇಲ್ಲವೆ ಮಠಾಧಿಪತಿ ಸ್ಥಾನಮಾನದ ಮೋಹ ಬಿಡದಿದ್ದರೆ ಹೇಗೊ ಒಂದು ಮಟ್ಟದಲ್ಲಿ ಹೊಂದಿಕೊಂಡು ಅವರು ಅಲ್ಲಿಯೇ ಮುಂದುವರಿಯುವಂತಾದೀತು. ಈ ಸಾಧ್ಯತೆಗಳನ್ನು ಕೂಡ ತಳ್ಳಿಹಾಕುವಂತಿಲ್ಲ.

೬

ಪರ್ಯಾಯ ರಾಜಕಾರಣ ಮಾಡಬೇಕೆನ್ನುವವರು ರಾಜಕೀಯ ನಾಯಕತ್ವದ ಸ್ವರೂಪದ ಬಗ್ಗೆಯೂ ಗಂಭೀರವಾಗಿ ಚಿಂತನೆ ಮಾಡಬೇಕಾದ ಸಂದರ್ಭ ಕೂಡ ಇದೆ. ಜಾತಿ, ಮತಧರ್ಮೀಯ ವೋಟ್ ಬ್ಯಾಂಕ್ ರಾಜಕಾರಣದಿಂದಾಗಿ ಇಂಥ ಜಾತಿಯವರ ನಾಯಕರು, ಇಂಥ ಮತಧರ್ಮದವರ ನಾಯಕರು ಎಂದು ಮಾತ್ರ ಗುರುತಿಸುವುದು ಸಾಧ್ಯವಾಗುವಂಥ ರೀತಿಯ ರಾಜಕೀಯ ನಾಯಕರು ಎಲ್ಲೆಲ್ಲೂ ಕಾಣಿಸುತ್ತಿದ್ದಾರೆ. ಕಮ್ಯುನಿಸ್ಟ್ ಪಕ್ಷ ಬಿಟ್ಟರೆ ಉಳಿದ ಎಲ್ಲ ರಾಜಕೀಯ ಪಕ್ಷಗಳ ನಾಯಕರು ಈ ಸ್ವರೂಪ, ಚರ್ಯೆಯವರೇ ಆಗಿಬಿಟ್ಟಿದ್ದಾರೆ; ಆಗುತ್ತಿದ್ದಾರೆ. ಜಾತಿ, ಮತಧರ್ಮ ಭೇದವಿಲ್ಲದೆ ಎಲ್ಲ ಜನರೂ ಇವರು ನಮ್ಮ ನಾಯಕರು ಎಂದು ಹೇಳಿಕೊಳ್ಳುವಂಥ ಜನನಾಯಕರು ಕಾಣಿಸುತ್ತಿಲ್ಲ, ಅಥವಾ ಅಂಥವರು ತೀರಾ ತೀರಾ ಅಪರೂಪವಾಗುತ್ತಿದ್ದಾರೆ. ಸಾರ್ವತ್ರಿಕ ಮನ್ನಣೆಗೆ ಪಾತ್ರರಾಗುವಂಥ ಜನನಾಯಕರಾಗಬೇಕೆಂಬ ಕನಸು, ಆದರ್ಶ ಹೊತ್ತವರಿದ್ದರೆ ಅವರಿಗೆ ಹಾಗೆ ಬೆಳೆಯುವುದಕ್ಕೆ ಬಿಡದಂಥ ವಾತಾವರಣವೇ ನಿರ್ಮಾಣವಾಗಿಬಿಟ್ಟಿದೆ. ಇಂಥ ಉಸಿರು ಕಟ್ಟಿಸುವ ಪ್ರತಿಗಾಮೀ ವಾತಾವರಣವನ್ನು ಭೇದಿಸಲೇಬೇಕಾದ ಸವಾಲನ್ನು ಕೂಡ ಪರ್ಯಾಯ ರಾಜಕಾರಣ ಮಾಡುವವರು ಎದುರಿಸಬೇಕಾಗಿದೆ.

ಜನನಾಯಕರು ಬರುವಂತಾಗುವುದಕ್ಕೆ ಅಗತ್ಯವಾದ ವಾತಾವರಣ ಕಲ್ಪಿಸಿಕೊಡುವುದರಲ್ಲಿ ರಾಜ್ಯವ್ಯಾಪಿ ಪ್ರಸಾರವಿರುವ ಪತ್ರಿಕೆಗಳವರೂ ಒಂದಷ್ಟು ಯೋಚಿಸುವ ಅಗತ್ಯ ಇದೆಯೇನೊ! ಜಾತಿ, ಮತಧರ್ಮೀಯ ರಾಜಕಾರಣದಿಂದಾಗಿ ರಾಜಕಾರಣಿಗಳು ಜಾತಿನಾಯಕರು, ಮತಧರ್ಮೀಯ ನಾಯಕರು ಎಂದು ಆಗಿಬಿಡುತ್ತಿದ್ದಾರಷ್ಟೆ. ನಮ್ಮ ಪತ್ರಿಕೆಗಳು ಕೂಡ ಪ್ರದೇಶನಾಯಕರನ್ನು ಸೃಷ್ಟಿಸುತ್ತಿವೆಯೇ ಎಂದು ಯೋಚಿಸುವಂತಾಗಿದೆ. ಬೇರೆ ಬೇರೆ ಪ್ರದೇಶಗಳಲ್ಲಿ ಬೆಳೆಯುತ್ತಿರುವ ಜನನಾಯಕ ಯೋಗ್ಯತೆಯ ಪ್ರತಿಭಾವಂತ ರಾಜಕಾರಣಿಗಳಿದ್ದರೂ ಪತ್ರಿಕೆಗಳ ಪ್ರಾದೇಶಿಕ ಆವೃತ್ತಿಗಳ ಕಾರಣದಿಂದ ರಾಜ್ಯದ ಉಳಿದ ಪ್ರದೇಶಗಳವರಿಗೆ ಅವರ ಬಗ್ಗೆ ಅವರು ಮಂತ್ರಿಯೊ ಅಂಥದೇ ಇನ್ನೇನೊ ಆಗುವವರೆಗೆ ಅಗತ್ಯವಾದಷ್ಟು ಪರಿಚಯವೇ ಆಗಿರುವುದಿಲ್ಲ, ಭಾವನಾತ್ಮಕ ಸಂಬಂಧವಂತೂ ಅವರ ಬಗ್ಗೆ ಬೆಳೆದಿರುವುದಿಲ್ಲ. ಮಂತ್ರಿಯೊ ಅಂಥದೇ ಇನ್ನೇನೋ ಆಗಬೇಕಾದರೆ ಜನನಾಯಕ ಲಕ್ಷಣದ ನಾಯಕಗುಣಕ್ಕಿಂತ ಜಾತಿ, ಮತಧರ್ಮ, ಪ್ರದೇಶ ಸೀಮಿತ ಹಿತಾಸಕ್ತಿಯ ಜೊತೆಗೆ ಮಾತ್ರ ಒಡನಾಡುವಂಥ, ಅಂಥ ವಿಷಯ ಸಂಗತಿಗಳ ಬಗ್ಗೆ ಮಾತ್ರ ಚಿಂತಿಸುವಂಥ ವ್ಯಕ್ತಿಗಳಾಗಿಬಿಡಬೇಕಾದ ಪರಿಸ್ಥಿತಿಗಳ ಒತ್ತಡ ಇದೆ. ಪತ್ರಿಕೆಯ ಸುದ್ದಿ ವರದಿಗಾರರಲ್ಲಿಯೂ ಎಷ್ಟೋ ಜನರಲ್ಲಿ ಯಾವುದು ಮುಖ್ಯ, ಯಾವುದು ಅಮುಖ್ಯ, ಯಾರು ಮುಖ್ಯ, ಯಾರು ಅಮುಖ್ಯ ಎಂಬ ಜ್ಞಾನ, ಪರಿಜ್ಞಾನ ಚೆನ್ನಾಗಿ ಇರುವುದಕ್ಕೆ ಅಗತ್ಯವಾದ ತರಬೇತಿ, ತಿಳಿವಳಿಕೆಯ ಕೊರತೆಯೂ ಕಾಣಿಸುತ್ತಿದೆ. ಈ ಸಮಸ್ಯೆಗೆ ಪರಿಹಾರ ಏನೊ, ಪರಿಹಾರ ಹೇಗೊ ನನಗೆ ಗೊತ್ತಿಲ್ಲ. ಆದರೆ ಈ ಕೊರತೆಯೂ ಇದೆ ಎಂದು ನನಗೆ ಮನವರಿಕೆಯಾಗಿದೆ. ಅದನ್ನು ಇಲ್ಲಿ ಹೇಳಿದ್ದೇನೆ.

**ಪ್ರೊ|| ಜಿ. ಎಚ್. ನಾಯಕ**
ನಂ. ೪೮೭, 'ಪ್ರೀತಿ', ಕಾಮಾಕ್ಷಿ ಆಸ್ಪತ್ರೆ ಹಿಂದೆ, ಕುವೆಂಪು ನಗರ, ಮೈಸೂರು - ೫೭೦ ೦೨೩

# ಮಗು

ಮಗು,
ಅಜ್ಜಿಯ ಕಥೆಗಳ ಕನಸ, ಕೊಂದುಬಿಡು.
ರಾಜ ರಾಣಿ, ಅರಮನೆ ಸಿಂಹಾಸನ,
ವಜ್ರ ವೈಡೂರ್ಯಗಳ ಮನಸಲ್ಲೇ ಕರಗಿಸಿ;
ಸೌಧ, ಬಂಗಲೆ, ಕಾರು, ವಗೈರುಗಳ ನೆನಪಿಸಿಕೊ
ಮನಸ್ಸು ಹಸಿರಾದೀತು.

ಮಗು,
ರಣರಂಗ, ಕತ್ತಿವರಸೆ
ಬಿಲ್ಲು ಬಾಣಗಳ ಕಥೆ ಕೇಳಬೇಕೆ ?
ಅಣುಬಾಂಬು, ಕ್ಷಿಪಣಿ, ಯುದ್ಧನೌಕೆಗಳಿಗೆ
ಭಂಗ ಬಂದೀತು !

ಮಗು,
ಹಾಲಿಗಾಗಿ ಬಾಯಗಲಿಸಿ
ಮೊಲೆಕಚ್ಚಿ, ಕಿಬ್ಬೊಟ್ಟೆಗೆ ಒದ್ದು ರಂಪ ಮಾಡದಿರು
ಹುಟ್ಟುವಾಗಲೇ ಟಾನಿಕ್, ಮಾತ್ರೆ ಕೊಟ್ಟಾಗಿದೆ.

ಮಗು,
ಬುದ್ಧಿಯ ತಾಲೀಮು ನಡೆಸಬೇಕೆ ?
ಪುಸ್ತಕ, ಗುರು, ಕಸರತ್ತುಗಳ ಒತ್ತಟ್ಟಿಗಿಟ್ಟು,
ಟೀವಿ, ಕಂಪ್ಯೂಟರ್ ಒಳಗೆ ತಲೆಯಿಕ್ಕು
ಜಾಣನಂತೆ ಭ್ರಮಿಸುತ್ತೀಯ !

ಮಗು,
ಅಜ್ಜಿಯ ಕಥೆಯಲ್ಲಿ ಬರುತ್ತಿದ್ದ
ನರಿ, ತೋಳ, ಆನೆ, ಕಾಗೆ, ಕೋಗಿಲೆ,
ನವಿಲು, ಹುಲಿ, ಚಿರತೆ, ಸಿಂಹಗಳ ನೋಡದಿರು;
ಮಾರ್ಕೆಟ್‌ನಲ್ಲಿ ಸಿಗುತ್ತವೆ, ಷೋಕೇಸಿನಲ್ಲಿಟ್ಟು
ಆಗಾಗ್ಗೆ ಧೂಳು ಹೊಡಿ ಅಷ್ಟೆ.

ಮಗು,
ದಟ್ಟಡವಿ, ಕಾಡನ್ನೆಲ್ಲಾ ಕಡಿಯಬೇಕೆ ?
ಕಡಿದುಬಿಡು !
ಹಾಳೆಯ ಮೇಲೆ ಕುಂಚ ಓಡಾಡಿದರೆ
ಎಂದೂ ಒಣಗದ ಕಾಡು, ಯಾವತ್ತೂ
ಬತ್ತದ ನದಿ
ಝುಳು ಝುಳು ಹರಿಯುತ್ತವೆ.

ಮಗು,
ಪ್ರೀತಿ, ವಾತ್ಸಲ್ಯಕ್ಕೂ ಕೊರತೆ ಇಲ್ಲ
ರೊಕ್ಕ ಚೆಲ್ಲು ಅಷ್ಟೆ.

ಮಗು,
ವಂಶವೃಕ್ಷಕ್ಕೂ ಚಿಂತಿಸಬೇಡ,
ಕಸಿಮಾಡಿದ ತಳಿಗಳು ಸಿಗುತ್ತವೆ.



ಮಗು,
ನಾನು ಹೇಳಿದ ಕಥೆಯನ್ನು
ನಿನ್ನ ಮಗುವಿಗೆ ಹೇಳಬೇಡ,
ಆಗ ನಾನು ಅಜ್ಜಿಯಾಗಿರುತ್ತೇನೆ !

**ಹಾಲ್ಕುರಿಕೆ ಶಿವಶಂಕರ್**
ಕೇರಾಫ್ ಪ್ರಕಾಶ್ ಜಯಶ್ರೀ ಬಿಲ್ಡಿಂಗ್, ನಂ. ೧೫೪
ವಿಜಯಬ್ಯಾಂಕ್ ಹಿಂಭಾಗ, ಕೆಂಪನಾಯಕನಹಳ್ಳಿ, ಬನ್ನೇರುಘಟ್ಟ
ಬೆಂಗಳೂರು - ೫೬೦ ೦೮೩

ಪ್ರೊ|| ಕೆ. ಸಿ. ಬಸಪ್ಪ

# ಅಭಿವೃದ್ಧಿಯ ಮೂಲವನ್ನು ಕಡೆಗಣಿಸಿದರೆ ಕೇಡಾದೀತು



**ಜಾ**ಗತೀಕರಣದ ಈ ದಿನಗಳಲ್ಲಿ ವಿಶ್ವದ ಪ್ರತಿಯೊಂದು ರಾಷ್ಟ್ರಕ್ಕೂ ಅಭಿವೃದ್ಧಿಯ ಮುಂಚೂಣಿಗೆ ಬರಬೇಕೆಂಬುದೇ ಕನಸು. ಅದಕ್ಕಾಗಿ ಎಲ್ಲಾ ರಾಷ್ಟ್ರಗಳೂ ಒಂದಿಲ್ಲೊಂದು ಕಾರ್ಯತಂತ್ರ, ಸೂಕ್ತವೆನಿಸುವ ಕಾರ್ಯಯೋಜನೆ, ಅದಕ್ಕೆ ಪೂರಕ ಹುನ್ನಾರಗಳಲ್ಲಿ ನಿರತವಾಗಿವೆ. '೨೧ನೇ ಶತಕ ಏಷ್ಯಾದ ಶತಕವಾಗಲಿದೆ. ಭಾರತ ಮತ್ತು ಚೈನಾಗಳು ವಿಶ್ವ ಶ್ರೇಷ್ಠ ಅರ್ಥ ಪ್ರಭುತ್ವಗಳಾಗುವಲ್ಲಿ ಸ್ಪರ್ಧಿಸುತ್ತವೆ. ಇವೆರಡು ರಾಷ್ಟ್ರಗಳೂ ಒಂದಾಗುವುದಾದರೆ ಆರ್ಥಿಕವಾಗಿ ೨೧ನೇ ಶತಮಾನದ ವಿಶ್ವವನ್ನು ಇವುಗಳು ಆಳುತ್ತವೆ' ಎಂಬ ಗಾಳಿಮಾತುಗಳು ಹರಡಿದ ಮೇಲಂತೂ ಭಾರತದ ಅರ್ಥವ್ಯವಸ್ಥೆಯಲ್ಲಿ ಹೊಸನೆತ್ತರು ಹರಿಯಲಾರಂಭಿಸಿದೆ. ಇಲ್ಲಿ ಅಭಿವೃದ್ಧಿಗೆ ಮುಕ್ತ ವಾತಾವರಣ, ವ್ಯಾಪಕ ದೃಷ್ಟಿ, ಸಡಿಲ ಧೋರಣೆಗಳು, ಎಳೆಎಳೆಯಾಗಿ ಬಿಚ್ಚಿಕೊಳ್ಳಲಾರಂಭಿಸಿವೆ. ಪರಿಣಾಮವೂ ಫಲಪ್ರದವಾಗಿಯೇ ಇದೆ. ಆದರೆ ಅಭಿವೃದ್ಧಿ, ಕೌಶಲ್ಯ, ಸ್ಪರ್ಧಾತ್ಮಕತೆ, ಗುಣಮಟ್ಟಗಳು ನಿರಂತರ ಮತ್ತು ಸದೃಢವೆನಿಸಿಕೊಳ್ಳಬೇಕಾದರೆ ಅಭಿವೃದ್ಧಿಗೆ ಮೂಲ ಹೇತುವಾಗಿರುವ, ಆದರೆ ನಿರಂತರ ಉದಾಸೀನತೆಗೆ ಗುರಿಯಾಗಿರುವ ಒಂದು ವರ್ಗವೆಂದರೆ ಅದು ಮಹಿಳೆ; ಹಾಗೂ ಒಂದು ವೃತ್ತಿ ಎಂದರೆ ಕೃಷಿ. ಇವೆರಡಕ್ಕೂ ಕಾಯಕಲ್ಪವಾಗಬೇಕು. ಇವೆರಡೂ ಅಭಿವೃದ್ಧಿಯ ಮೂಲವಾಗಿದ್ದರೂ, ಅನಾದರಣೆಗೆ ಗುರಿಯಾಗಿರುವುದು ದುರಂತ. ಇವೆರಡಕ್ಕೂ ಕಾಯಕಲ್ಪವಾಗದಿದ್ದರೆ, ಬದಲಾದ ಪರಿಸ್ಥಿತಿಗೆ ಹೊಂದಿಕೊಳ್ಳಲಾರದೆ ದೇಶ ಬರಡಾದೀತು.

**ಕೃಷಿ ಮತ್ತು ಕೃಷಿಕ :** ಅಭಿವೃದ್ಧಿಯ ಮೂಲ ಪ್ರವರ್ತಕರೆನಿಸಿಕೊಂಡ ಕೃಷಿಕವರ್ಗವು ಎಲ್ಲೆಡೆ ಮೂಲವ್ಯಾಧಿಗೆ ಗುರಿಯಾಗಿ ಸಂಕಷ್ಟಗಳ ಸರಮಾಲೆಯನ್ನೇ ಧರಿಸಿ ನೋವುಣ್ಣಬೇಕಾದುದು ನಿಸರ್ಗದ ನಿಯಮವೇನೋ ಎನ್ನುವ ಸಂದೇಹ ತಲೆದೋರಿಬಿಟ್ಟಿದೆ. ಒಂದು ರಾಷ್ಟ್ರದ ಕೈಗಾರಿಕೆ, ಹಣಕಾಸು, ವಾಣಿಜ್ಯ, ಸಾರಿಗೆ, ವಿಜ್ಞಾನ, ತಂತ್ರಜ್ಞಾನ ಇತ್ಯಾದಿ ಎಲ್ಲವುಗಳ ಸಮಗ್ರ, ಸರಾಗ ಬೆಳವಣಿಗೆಗೆ ಮೂಲ ಹೇತುವಾದ ಕೃಷಿ ಮತ್ತು ಆ ವೃತ್ತಿಯನ್ನು ಅವಲಂಬಿಸಿದ ವರ್ಗದವರ ಬದುಕು ಹೈರಾಣಾಗುತ್ತಿರುವುದು ಜಾಗತೀಕರಣದ ಇಂದಿನ ವಿಶ್ವದ ಸಾಮಾನ್ಯ ಚಿತ್ರಣವೇ ಆಗಿದೆ. ೧೯೪೦ರ ದಶಕದಲ್ಲಿ ಆರಂಭಗೊಂಡ ವಿಶ್ವದ ಹೊಸ ಆರ್ಥಿಕ ಕ್ರಮದಿಂದ ಆರಂಭದಿಂದಲೂ ವಿಶ್ವದ ಎಲ್ಲ ರಾಷ್ಟ್ರಗಳೂ, ವಿಶೇಷವಾಗಿ ಕೃಷಿ ಪ್ರಧಾನ ಅಭಿವೃದ್ಧಿಶೀಲ ರಾಷ್ಟ್ರಗಳು, ಈ ದಿಶೆಯಲ್ಲಿ ಸಾಕಷ್ಟು ಪರಿಣಾಮಕಾರಿ ಕಾರ್ಯಕ್ರಮಗಳನ್ನು ಅನುಷ್ಠಾನ ಗೈದಿದ್ದಾಗ್ಯೂ ಈ ವರ್ಗದವರ ಬದುಕಿನಲ್ಲಿ ಹೇಳಿಕೊಳ್ಳಬಹುದಾದ ಸುಧಾರಣೆಗಳೇನೂ ಕಂಡುಬಂದಿಲ್ಲ. ಜನನಿಬಿಡತೆಯಿಂದ ಕೂಡಿರುವ ಭಾರತದಂತಹ ಕೃಷಿಪ್ರಧಾನ ರಾಷ್ಟ್ರದಲ್ಲಿ ಇವರ ಸ್ಥಿತಿ ಮತ್ತಷ್ಟು ಗಂಭೀರವಾಗಿದೆ. ಇವರುಗಳ ಸಂಕಷ್ಟ, ನೋವು, ದಾರಿದ್ರ್ಯ, ಅಸಹಾಯಕತೆ ಇವೆಲ್ಲವುಗಳ ವಿವರಣೆಗೆ ಹರ್ಕ್ಯೂಲೆಸ್‌ನ ಪ್ರಯತ್ನವೇ ಬೇಕಾದೀತು.

ನಿಸರ್ಗಾವಲಂಬಿತ, ಸರಳ ಬದುಕಿನ, ಕಠಿಣ ದುಡಿಮೆಯ, ಸಾಕಾರಮೂರ್ತಿಗಳಾಗಿರುವ ಕೃಷಿಕರು ಮತ್ತು ಉಳಿದ ವೃತ್ತಿಯವರ ನಡುವೆ ಒಂದು ಪ್ರಮುಖ ವ್ಯತ್ಯಾಸವಿದೆ. ಅದೆಂದರೆ, ಉಳಿದ ಯಾವುದೇ ವೃತ್ತಿಯವರಿಗೆ ತಮ್ಮ ವೃತ್ತಿಯಲ್ಲಿ ತೊಡಗಿಸಿದ ಬಂಡವಾಳ, ವಹಿಸಿದ ಶ್ರಮ, ಸುರಿಸಿದ ಬೆವರು, ಹೊತ್ತುಕೊಂಡ ಹೊಣೆಗಾರಿಕೆಗಳಿಗೆಲ್ಲ ಕನಿಷ್ಠ ಇಂತಿಷ್ಟು ಪ್ರಮಾಣದ ಪ್ರತಿಫಲ ಎಂಬುದೊಂದಿರುತ್ತದೆಯಾದರೆ ಕೃಷಿಕರಿಗೆ ಮಾತ್ರ ಇದಕ್ಕೆ ವಿರುದ್ಧವಾದ ನಿಯಮವಿದೆ. ದುಡಿಮೆ, ಸಂಕಷ್ಟ, ಪರಿಶ್ರಮ, ನೋವು, ಹತಾಶೆ, ನಿರಾಶೆ ಇವೆಲ್ಲವುಗಳಿಂದೊಡಗೂಡಿದ ಬೆವರು ಸುರಿಸುವುದಷ್ಟೆ ಇವರ ಜಾಯಮಾನ. ಇವೆಲ್ಲಕ್ಕೂ ಪ್ರತಿಫಲದ ನಿರೀಕ್ಷೆಯಾಗಲಿ, ಇಂತಿಷ್ಟೇ ಪ್ರತಿಫಲ ಪಡೆಯುವ ಹಕ್ಕಾಗಲಿ ಇವರಿಗಿಲ್ಲದಿರುವುದು, ಸಾಧನೆ! ವ್ಯವಸ್ಥೆಯ ಮಹಾನ್ ಅಭಿವೃದ್ಧಿಗೊಂಡ ಶ್ರೀಮಂತ ರಾಷ್ಟ್ರಗಳು ಕೃಷಿವಲಯದ ಪಾತ್ರದ ಅನಿವಾರ್ಯತೆಯನ್ನು ಪರಿಗಣಿಸಿ ಪೇಟೆಯ ನಿಯಮಕ್ಕೆ ಹೊರತಾದ ಕಾರ್ಯಯೋಜನೆಗಳನ್ನು ಹಮ್ಮಿಕೊಂಡು ದೇಶದ ಅಭಿವೃದ್ಧಿಯ ಸಂಪನ್ಮೂಲಗಳನ್ನು ಕೃಷಿಕವರ್ಗದ ಕಡೆಗೆ ಹರಿಯಬಿಡುತ್ತಾ ಅವರನ್ನು ಪ್ರಗತಿಯ ವಾಹಿನಿಯಲ್ಲಿ ಕೊಂಡೊಯ್ದಿವೆ. ಶ್ರೀಮಂತ ರಾಷ್ಟ್ರಗಳಲ್ಲಿ ಈ ವರ್ಗದ ಜನಸಂಖ್ಯೆಯ ಪ್ರಮಾಣ ಅತ್ಯಲ್ಪವಾಗಿರುವುದರಿಂದ ಅವರುಗಳಿಗೆ ಹಾಗೆ ಮಾಡುವುದು ಸಾಧ್ಯವಾಗಿರಬಹುದು. ಆದರೆ ದೇಶದ ಜನಸಂಖ್ಯೆಯ ಬಹುಭಾಗ ಈ ವಲಯವನ್ನೇ ಅವಲಂಬಿಸಿರುವ ಭಾರತದಂತಹ ರಾಷ್ಟ್ರದಲ್ಲಿ, ತೀವ್ರ ಆರ್ಥಿಕ ಬೆಳವಣಿಗೆಯ ಮಹತ್ವಾಕಾಂಕ್ಷೆ ಹೊತ್ತಿರುವ ಸನ್ನಿವೇಶದಲ್ಲಿ, ಇತರ ವೃತ್ತಿಯವರು ಸಾಧಿಸಿದ ಅಲ್ಪ ಅಭಿವೃದ್ಧಿಯ ಪ್ರಯೋಜನಗಳನ್ನು ಕೃಷಿಕರ ರಕ್ಷಣೆಗಾಗಿ ಹರಿಸುವುದು ಸಾಧುವೂ ಅಲ್ಲ ಸಾಧ್ಯವೂ ಇಲ್ಲ. ಆದ್ದರಿಂದ ಕೃಷಿಕವರ್ಗದ ರಕ್ಷಣೆಗಿರುವ ಏಕಮಾತ್ರ ಮಾರ್ಗವೆಂದರೆ ಕೃಷಿಕವರ್ಗವು ಉತ್ಪಾದನಾ ಕಾರ್ಯದಲ್ಲಿ ಕ್ರಿಯಾಶೀಲವಾಗಿ ತೊಡಗಿಕೊಳ್ಳಲು ಸೂಕ್ತವಾದ ಮತ್ತು ಇರುವ ಮೂಲ ಕೃಷಿಯ

ಅಭಿವೃದ್ಧಿಯ ಮೂಲ ಪ್ರವರ್ತಕರೆನಿಸಿಕೊಂಡ ಕೃಷಿಕವರ್ಗವು ಎಲ್ಲೆಡೆ ಮೂಲವ್ಯಾಧಿಗೆ ಗುರಿಯಾಗಿ ಸಂಕಷ್ಟಗಳ ಸರಮಾಲೆಯನ್ನೇ ಧರಿಸಿ ನೋವುಣ್ಣಬೇಕಾದುದು ನಿಸರ್ಗದ ನಿಯಮವೇನೋ ಎನ್ನುವ ಸಂದೇಹ ತಲೆದೋರಿಬಿಟ್ಟಿದೆ. ಒಂದು ರಾಷ್ಟ್ರದ ಕೈಗಾರಿಕೆ, ಹಣಕಾಸು, ವಾಣಿಜ್ಯ, ಸಾರಿಗೆ, ವಿಜ್ಞಾನ, ತಂತ್ರಜ್ಞಾನ ಇತ್ಯಾದಿ ಎಲ್ಲವುಗಳ ಸಮಗ್ರ, ಸರಾಗ ಬೆಳವಣಿಗೆಗೆ ಮೂಲ ಹೇತುವಾದ ಕೃಷಿ ಮತ್ತು ಆ ವೃತ್ತಿಯನ್ನು ಅವಲಂಬಿಸಿದ ವರ್ಗದವರ ಬದುಕು ಹೈರಾಣಾಗುತ್ತಿರುವುದು ಜಾಗತೀಕರಣದ ಇಂದಿನ ವಿಶ್ವದ ಸಾಮಾನ್ಯ ಚಿತ್ರಣವೇ ಆಗಿದೆ.

ಸೌಲಭ್ಯಗಳಿಗನುಗುಣವಾಗಿ ಕೃಷಿ ವ್ಯವಸ್ಥೆಯನ್ನು ಪುನರ್‌ರಚಿಸಬೇಕು. ಹಾಗೂ ಕೃಷಿಕರಿಗೆ ಅನುಕೂಲವಾಗುವಂತೆ ದೇಶೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಪೇಟೆಯ ಅಂಶಗಳನ್ನು ಬಲಪಡಿಸಬೇಕು.

**ಲಿಂಗತಾರತಮ್ಯ :** ಕೃಷಿವರ್ಗದಂತೆ ಮನುಕುಲದ ಲೌಕಿಕ ಅಭಿವೃದ್ಧಿಗೆ ಮೂಲ ಆಧಾರವಾಗಿದ್ದು, ಬದುಕಿನಲ್ಲಿ ಹೀನಸ್ಥಿತಿಗೆ ಗುರಿಯಾಗಿರುವ ಮತ್ತೊಂದು ವರ್ಗವೆಂದರೆ ವಿಶ್ವದ ಮಹಿಳಾವರ್ಗ. ಮನುಕುಲದ ಹುಟ್ಟಿಗೆ, ಆಸೆ ಆಕಾಂಕ್ಷೆಗಳಿಗೆ, ಕ್ರಿಯಾಶೀಲತೆಗೆ, ಒಲವು ನಿಲುವುಗಳಿಗೆ, ಮಮತೆ ಔದಾರ್ಯಗಳಿಗೆ, ಸಹನೆ ತ್ಯಾಗಗಳಿಗೆ ಕಾರಣವಾಗಿದ್ದು, ಬದುಕಿನ ಪ್ರೀತಿಗೆ ಮೂಲವಾಗಿರುವ ಮಹಿಳೆಯರು ಇಂದು ವಿಶ್ವದ ಜನಸಂಖ್ಯೆಯ ಅರ್ಧಭಾಗದಷ್ಟಿದ್ದು ಲೌಕಿಕ ಅಭಿವೃದ್ಧಿಯ ಪರಿಶ್ರಮದಲ್ಲಿ ಪುರುಷರಿಗಿಂತಲೂ ಹೆಚ್ಚೆನಿಸುವಷ್ಟು ಪಾಲುದಾರರೇ ಆಗಿದ್ದರೂ, ಅಭಿವೃದ್ಧಿಯ ಫಲದ ಗಳಿಕೆಯಲ್ಲಿ ಮಾತ್ರ ಹಿಂದೆ ಬಿದ್ದಿರುವುದು ನಾಗರಿಕ ವಿಶ್ವವು ನಾಚಿಕೆ ಪಡುವಂತಹುದೆನಿಸಿದೆ. ಬದುಕಿನ ಪರಿಶ್ರಮ, ಹೊಣೆಗಾರಿಕೆ, ಸಹನೆ, ಕಟಿಬದ್ಧತೆ, ತಾದಾತ್ಮ್ಯತೆ, ಎಲ್ಲದರಲ್ಲಿಯೂ ಪುರುಷನಿಗಿಂತ ಮಹಿಳೆಯದೇ ಮೇಲುಗೈ ಆಗಿರುವುದಾದರೂ ಆಕೆ ಅಭಿವೃದ್ಧಿಯ ಫಲವನ್ನು ಹೊಂದುವಾಗ ಅಸಮಾನತೆ, ಶೋಷಣೆ, ದಬ್ಬಾಳಿಕೆಗಳಿಗೆ ಗುರಿಯಾಗಿ ಬದುಕಿನ ಅಸಹಾಯಕ ಸ್ಥಿತಿಗೆ ಉದಾಹರಣೆಯಾಗಿದ್ದಾಳೆ. ಅಭಿವೃದ್ಧಿಯ ಅವಕಾಶಗಳು ಸುಲಭವಾಗಿ ದೊರೆಯುವಂತಹ ಕೆಲವೊಂದು ಜನತಂತ್ರಾತ್ಮಕ ಶ್ರೀಮಂತ ಪಾಶ್ಚಾತ್ಯ ಐರೋಪ್ಯ ನಾಡುಗಳಲ್ಲಿ ಈ ಸ್ಥಿತಿಯ ಗಂಭೀರತೆಯಲ್ಲಿ ಸ್ವಲ್ಪ ಮಟ್ಟನ ಉತ್ತಮಸ್ಥಿತಿ ಇರುವುದಾದರೂ (ಅಲ್ಲಿಯೂ ಪರಿಪೂರ್ಣ ಸಮಾನತೆಯೇನೂ ಸಾಧ್ಯವಾಗಿಲ್ಲ) ಕೃಷಿಪ್ರಧಾನ ಅನಭಿವೃದ್ಧ ರಾಷ್ಟ್ರಗಳಲ್ಲಿ ಮತ್ತು ರೂಢಮೂಲ ಮುಸ್ಲಿಂ ರಾಷ್ಟ್ರಗಳಲ್ಲಿ ಮಹಿಳೆ ಎರಡನೇ ದರ್ಜೆ ಪ್ರಜೆಯಾಗಿ ಬದುಕುತ್ತಿದ್ದು, ಪುರುಷಪ್ರಧಾನ ವ್ಯವಸ್ಥೆಯ ಅಮಾನವೀಯತೆಗೆ ಸಾಕ್ಷಿಯೆನ್ನುವಂತೆ ನರಳುತ್ತಿದ್ದಾಳೆ.

ಪುರುಷಪ್ರಧಾನ ವಿಶ್ವವು ಲಿಂಗ ಸಮಾನತೆಯ ಡಂಗುರ ಬಾರಿಸುತ್ತಲೇ ಹಲವಾರು ದಶಕಗಳ ಕಾಲಹರಣ ಮಾಡುತ್ತಾ ಬಂದ ಜನತಾಂತ್ರಿಕವೆನಿಸುವ, ಅಭಿವೃದ್ಧಿ ಪ್ರಧಾನವೆನಿಸುವ, ಸ್ಪರ್ಧಾತ್ಮಕವೆನಿಸುವ, ನಾಗರಿಕವೆನಿಸುವ ರಾಷ್ಟ್ರಗಳಲ್ಲೂ ಮಹಿಳೆಯ ಬಗೆಗೆ ಅಸಮಾನತೆ, ಅವಕಾಶಗಳ ವಂಚನೆ, ಶೋಷಣೆ, ದೌರ್ಜನ್ಯಗಳು ಮುಂದುವರಿಯುತ್ತಿರುವುದು ನಾಚಿಕೆ ಪಡುವಂತಹ ವಿಷಯ.

ವಿಶ್ವ ಆರ್ಥಿಕ ವೇದಿಕೆಯು ೫೮ ರಾಷ್ಟ್ರಗಳಲ್ಲಿ ನಡೆಸಿದ ಈ ಕುರಿತ ಸಮೀಕ್ಷೆಯಂತೆ ಅಭಿವೃದ್ಧಿಶೀಲ ರಾಷ್ಟ್ರಗಳ ಪರಿಸ್ಥಿತಿ ಹಾಗಿರಲಿ, ಶ್ರೀಮಂತ ಐರೋಪ್ಯ ರಾಷ್ಟ್ರಗಳಲ್ಲಿಯೂ ಲಕ್ಷಾಂತರ ಮಹಿಳೆಯರು ಆರ್ಥಿಕ ಮತ್ತು ರಾಜಕೀಯ ಸಮಾನತೆಯಿಂದ ದೂರವುಳಿದಿದ್ದಾರೆ ಎಂಬ ಸತ್ಯಸಂಗತಿಯನ್ನು ಹೊರಗೆಡಹಲಾಗಿದೆ. ವಿಶ್ವ ಆರ್ಥಿಕ ವೇದಿಕೆಯು ತನ್ನ ಸಮೀಕ್ಷೆಯಲ್ಲಿ ವಿಶ್ವಸಂಸ್ಥೆಯ ಮಹಿಳಾ ಅಭಿವೃದ್ಧಿನಿಧಿಯು ಸೂಚಿಸಿರುವ ಸಮಾನತೆಯ ಐದು ಅಂಶಗಳನ್ನು ಪರಿಗಣಿಸಿದೆ. ಅವುಗಳೆಂದರೆ : (ಅ) ಆರ್ಥಿಕ ಚಟುವಟಿಕೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ, (ಆ) ಆರ್ಥಿಕ ಅವಕಾಶಗಳು, (ಇ) ರಾಜಕೀಯ ಸಾಮರ್ಥ್ಯ, (ಈ) ಗಳಿಸಿರುವ ಶಿಕ್ಷಣ, (ಉ) ಮಹಿಳೆಯರ ಆರೋಗ್ಯ ಮತ್ತು ಜೀವನ ಸ್ಥಿತಿ.


**'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ**

**ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ**

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಸಾಹಿತ್ಯ ಭವನ, ಅಂಬೇಡ್ಕರ್ ವೃತ್ತ, ಕೊಪ್ಪಳ - ೫೮೩ ೨೩೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಾಮತ್ ಹೋಟೆಲ್ ಬಳಿ, ಸ್ಟೇಷನ್ ರಸ್ತೆ, ಗದಗ - ೫೮೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಲಾಭವನದ ಆವರಣ, ಕಡಪಾ ಮೈದಾನ, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾನ್ಯಾಯಾಲಯದ ಎದುರು, ಕೋರ್ಟ್ ರಸ್ತೆ, ಉಡುಪಿ - ೫೭೬ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾ ಕೇಂದ್ರ ಗ್ರಂಥಾಲಯ ಆವರಣ, ಬಿ.ಎಚ್. ರಸ್ತೆ, ತುಮಕೂರು - ೫೭೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಿತ್ತೂರ ಕಾಂಪ್ಲೆಕ್ಸ್, ದೇನಾ ಬ್ಯಾಂಕ್ ಬಳಿ, ಜೂಬಿಲಿ ಸರ್ಕಲ್, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಸರ್ಕಾರಿ ಪ್ರೌಢಶಾಲೆ ಆಟದ ಮೈದಾನ, ಎ.ವಿ.ಕೆ. ಕಾಲೇಜ್ ರಸ್ತೆ, ದಾವಣಗೆರೆ - ೫೭೭ ೦೦೨

**ನವಕರ್ನಾಟಕ ಪುಸ್ತಕ ಪ್ರದರ್ಶನ**
ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯ, ಮೊದಲನೇ ಮಹಡಿ, ಕಸ್ತೂರಬಾ ರಸ್ತೆ, ಬೆಂಗಳೂರು - ೫೬೦ ೦೦೧


ವಿಶ್ವದ ಯಾವೊಂದು ರಾಷ್ಟ್ರವೂ ಲಿಂಗಸಮಾನತೆ ಸಾಧಿಸುವಲ್ಲಿ ಯಶಸ್ವಿಯಾಗಿಲ್ಲ ಎಂದು ಹೇಳಿರುವ ಈ ವರದಿಯು ನಾರ್ಡಿಕ್ ಜನಾಂಗದ ರಾಷ್ಟ್ರಗಳಾದ ಸ್ವೀಡನ್, ನಾರ್ವೆ, ಐಸ್‌ಲ್ಯಾಂಡ್ ಮತ್ತು ಡೆನ್ಮಾರ್ಕ್ ಹಾಗೂ ಪೋಲೆಂಡ್‌ಗಳು ಮಾತ್ರ ಈ ದಿಶೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಿರುವುದನ್ನು ಉಲ್ಲೇಖಿಸಿರುವುದು ಮಾತ್ರವಲ್ಲದೆ ಆ ರಾಷ್ಟ್ರಗಳನ್ನೇ ಮಾದರಿಯಾಗಿ ಪರಿಗಣಿಸಿ ಅನುಸರಿಸುವ ಮೂಲಕ ಜರ್ಮನಿ, ಬ್ರಿಟನ್, ನ್ಯೂಜಿಲೆಂಡ್, ಆಸ್ಟ್ರೇಲಿಯಾ ಮತ್ತು ಕೆಲವು ಪೂರ್ವ ಯೂರೋಪ್ ರಾಷ್ಟ್ರಗಳು ಮಹಿಳೆಯರಿಗೆ ಮತ್ತಷ್ಟು ಒಳಿತು ಮಾಡಬಹುದೆಂದು ಸಲಹೆ ಮಾಡಿದೆ.

ಮಾತೃತ್ವದ ಹಕ್ಕುಗಳನ್ನು ಕುಂಠಿತಗೊಳಿಸುವ ಮತ್ತು ಮಕ್ಕಳ ಕಲ್ಯಾಣದ ಬಗೆಗೆ ಅನಾದರಣೆಯಿಂದಿರುವ ಅಮೆರಿಕಾ ಸಂಯುಕ್ತ ಸಂಸ್ಥಾನ ಲಿಂಗಸಮಾನತೆ ಸಾಧಿಸಿದ ಪ್ರಥಮ ಹತ್ತು ರಾಷ್ಟ್ರಗಳ ಪಟ್ಟಿಯಲ್ಲಿ ಸೇರಲಾಗಿಲ್ಲ. ಬ್ರಿಟನ್ನಿನಲ್ಲಿ ಸಮಾನ ಕೆಲಸಕ್ಕೆ ಸಮಾನ ವೇತನದ ಶಾಸನ ೩೦ ವರ್ಷಗಳ ಹಿಂದೆಯೇ ಜಾರಿಗೆ ಬಂದಿದ್ದರೂ ಅಲ್ಲಿನ ಏಕರೂಪ ಕೆಲಸಕ್ಕೆ ಮಹಿಳೆಯರು ಪುರುಷರ ಅರ್ಧದಷ್ಟು ವೇತನ ಮಾತ್ರ ಪಡೆಯುತ್ತಿದ್ದಾರೆ. ಲಿಂಗಸಮಾನತೆ ಸಾಧಿಸುವಲ್ಲಿ ಭಾರತ ವಿಶ್ವದಲ್ಲಿ ೫೩ನೇ ಸ್ಥಾನದಲ್ಲಿದೆ. ವಿಪುಲ ಆರ್ಥಿಕ ಅವಕಾಶಗಳು ಇಲ್ಲಿ ಲಭ್ಯವಿದ್ದಾಗ್ಯೂ ಲಿಂಗ ಸಮಾನತೆಯ ಸಾಧನೆ ಆರ್ಥಿಕವಾಗಿ ಬಹಳಷ್ಟು ಹಿಂದುಳಿದ ದೇಶಗಳೆನಿಸಿದ ಬಾಂಗ್ಲಾದೇಶ, ಲ್ಯಾಟಿನ್ ಅಮೆರಿಕಾ ಮತ್ತು ಆಫ್ರಿಕನ್ ರಾಷ್ಟ್ರಗಳಿಗಿಂತ ಹಿಂದೆ ಉಳಿದಿರುವುದು ಶೋಚನೀಯ ಸಂಗತಿ. ಭಾರತದಲ್ಲಿ ಲಿಂಗ ಸಮಾನತೆಯು ಪಾಕಿಸ್ತಾನ, ದಕ್ಷಿಣ ಕೊರಿಯಾ, ಜೋರ್ಡಾನ್, ಟರ್ಕಿ ಮತ್ತು ಈಜಿಪ್ಟ್‌ಗಳಿಗಿಂತಲೂ ಉತ್ತಮವಾಗಿದೆ ಎಂಬುದೊಂದೇ ಸಮಾಧಾನ.

ಜಾಗತೀಕರಣದ ಸ್ಪರ್ಧಾತ್ಮಕ ಸನ್ನಿವೇಶದಲ್ಲಿ ಮುಂಚೂಣಿಗೆ ಬರಬೇಕೆಂದು ಬಯಸುವ ಭಾರತಕ್ಕೆ ಸಮೀಕ್ಷೆಯ ಪ್ರಧಾನ ವರದಿಗಾರರಾದ ಸಾಧಿಯ ಜಾಹಿದಿ ಅವರು ಜನಸಂಖ್ಯೆಯ ಅರ್ಧಭಾಗದಷ್ಟಿರುವ ಮಹಿಳೆಯರ ಕಡೆಗೆ ಸಂಪನ್ಮೂಲಗಳನ್ನು ಹರಿಯ ಬಿಡದಿರುವಾಗ, ಅವರಲ್ಲಿನ ಅಮೂಲ್ಯ ಸ್ಪರ್ಧಾ ಸಾಮರ್ಥ್ಯವನ್ನೇ ಕಡೆಗಣಿಸುವುದಾದರೆ, ಪ್ರಗತಿಯಾದರೂ ಹೇಗೆ ಸಾಧ್ಯ ? ಎಂದು ಪ್ರಶ್ನಿಸುತ್ತಾರೆ.

ಬ್ರಿಟನ್ನಿನ ಹ್ಯಾಟ್ರಿಕ್ ಪ್ರಧಾನಿ ಟೋನಿ ಬ್ಲೇರ್ ಅವರ ಪತ್ನಿ ಚೆರ್ರಿ ಬ್ಲೇರ್ ಮಹಿಳೆಯ ಬಗೆಗೆ ರಚನಾತ್ಮಕ ನಿಲುವು ತಳೆಯಲು ಒತ್ತಾಯಿಸಿದ್ದಾರಲ್ಲದೆ, ಮಹಿಳಾ ಪರವಾದ ಸಂವಿಧಾನಾತ್ಮಕ ಬದಲಾವಣೆಗಳು ತಮ್ಮ ಪತಿಯ ರಾಜಕೀಯ ಸಾಮರ್ಥ್ಯದ ಬ್ರಹ್ಮಾಸ್ತ್ರವೆಂದು ಬಣ್ಣಿಸುತ್ತಾರೆ !

ಸಂಪೂರ್ಣ ಲಿಂಗಸಮಾನತೆ ಹೊಂದಿದಾಗಷ್ಟೇ ದೇಶ ಜಾಗತೀಕರಣದಲ್ಲಿ ಮುಂಚೂಣಿಗೆ ಬರಬೇಕೆನ್ನುವ ಮಹತ್ವಾಕಾಂಕ್ಷೆ ಸಾಧ್ಯವಾದೀತು. ಅಭಿವೃದ್ಧಿಯ ಮೂಲವೆನಿಸಿರುವ ಕೃಷಿ ಮತ್ತು ಕೃಷಿಕರು ಹಾಗೂ ಮಹಿಳಾ ವರ್ಗವನ್ನು ಕಡೆಗಣಿಸಿದ್ದಾದರೆ ನಿಶ್ಚಿತವಾಗಿ, ಸ್ಪರ್ಧಾತ್ಮಕವಾಗಿ ಮುನ್ನಡೆಯಲು ಉದ್ದೇಶಿಸಿರುವ ಯಾವುದೇ ದೇಶಕ್ಕೆ ಭವಿಷ್ಯವು ಕೇಡಾಗಿಯೇ ಕಂಡುಬರುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ.


ಪ್ರೊ|| ಕೆ. ಪಿ. ಬಸಪ್ಪ
ಉಪನ್ಯಾಸಕರು ಪ್ರಥಮ ದರ್ಜೆ ಕಾಲೇಜು, ಚಿಕ್ಕನಾಯಕನಹಳ್ಳಿ

# ಮುಂಬಯಿ ಕನ್ನಡಿಗರ ಹೆಮ್ಮೆಯ ಲೇಖಕಿ ಅತ್ತಿಮಬ್ಬೆ ಪ್ರಶಸ್ತಿ ಪುರಸ್ಕೃತೆ ಡಾ|| ಸುನೀತಾ ಶೆಟ್ಟಿ



**ಕ**ರ್ನಾಟಕ ಸರಕಾರದ 'ದಾನ ಚಿಂತಾಮಣಿ ಅತ್ತಿಮಬ್ಬೆ' ಪ್ರಶಸ್ತಿ ಪುರಸ್ಕೃತರಾದ ಮುಂಬಯಿಯ ಕನ್ನಡ ಸಾಹಿತಿ, ಕವಯಿತ್ರಿ, ಸಂಘಟಕಿ ಡಾ|| ಸುನೀತಾ ಎಂ. ಶೆಟ್ಟಿ ಇದೀಗ ಸೇವಾ ನಿವೃತ್ತರು. ಮುಂಬಯಿಯ ಖಾಲ್ಸಾ ಕಾಲೇಜ್‌ನ ಕನ್ನಡ ವಿಭಾಗದ ಮುಖ್ಯಸ್ಥೆಯಾಗಿದ್ದು ೨೫ ವರ್ಷಗಳ ಕಾಲ ಸೇವೆ ಸಲ್ಲಿಸಿರುವ ಡಾ|| ಸುನೀತಾ ಶೆಟ್ಟಿ ಕನ್ನಡದ ಕೆಲಸ ಕಾರ್ಯಗಳಲ್ಲಿ ಸಕ್ರಿಯರು. ಕನ್ನಡ-ತುಳು ಭಾಷೆಗಳೆರಡರಲ್ಲೂ ಸಾಹಿತ್ಯ ಕೃಷಿ ಕೈಗೊಂಡವರು. ತುಳು ಸಾಹಿತ್ಯ ಅಕಾಡೆಮಿಯಿಂದ ಪುಸ್ತಕ ಬಹುಮಾನ ಹಾಗೂ ಗೌರವ ಪ್ರಶಸ್ತಿ ಪಡೆದ ಇವರು ಅಬ್ಬಕ್ಕ ಪ್ರತಿಷ್ಠಾನದ 'ರಾಣಿ ಅಬ್ಬಕ್ಕ' ಪ್ರಶಸ್ತಿಯಲ್ಲದೆ ಹಲವಾರು ಪ್ರಶಸ್ತಿ, ಪುರಸ್ಕಾರ, ಸನ್ಮಾನಗಳನ್ನೂ ಪಡೆದವರು. ಸಾಮಾಜಿಕ ಕಳಕಳಿ ಮತ್ತು ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುವ ಡಾ|| ಸುನೀತಾ ಶೆಟ್ಟಿ ಶಿಕ್ಷಣ ಕ್ಷೇತ್ರದಲ್ಲೂ ಸಾಕಷ್ಟು ಸಕ್ರಿಯರಾಗಿದ್ದಾರೆ.

೧೯೩೨ರಲ್ಲಿ ಮಂಗಳೂರು ತಾಲೂಕಿನ ಕಳವಾರು ಗ್ರಾಮದಲ್ಲಿ ಜನಿಸಿದ ಸುನೀತಾ ಶೆಟ್ಟಿಯವರಿಗೆ ಈಗ ೭೩ರ ಹರೆಯ. ಸುರತ್ಕಲ್‌ನ ವಿದ್ಯಾದಾಯಿನಿ ಹೈಸ್ಕೂಲ್‌ಗೆ ಅಂದು ಏಕೈಕ ವಿದ್ಯಾರ್ಥಿನಿಯಾಗಿ ಆ ಕಾಲದಲ್ಲಿ ಹುಡುಗರ ಜೊತೆ ಕಳವಾರಿನಿಂದ ಸುರತ್ಕಲ್ ತನಕ ಅಷ್ಟು ದೂರಕ್ಕೆ ನಡೆದುಕೊಂಡು ಹೋಗಿ ವಿದ್ಯೆ ಕಲಿತದ್ದು ನಿಜಕ್ಕೂ ಅಭಿಮಾನಪಡುವಂಥದ್ದು. ೧೯೫೫ರಲ್ಲಿ ಮುಂಬಯಿಗೆ ಬಂದ ಇವರು ತನ್ನ ಅಣ್ಣನವರ ನೆರವಿನಲ್ಲಿ ವಡಾಲಾದಲ್ಲಿರುವ ನ್ಯಾಶನಲ್ ಕನ್ನಡ ಎಜುಕೇಶನ್ ಸೊಸೈಟಿ (ಎನ್.ಕೆ.ಇ.ಎಸ್.) ಸ್ಕೂಲ್‌ನಲ್ಲಿ ಶಿಕ್ಷಕಿಯಾಗಿ ವೃತ್ತಿಜೀವನ ಶುರುಮಾಡಿದರು. ವರದಕ್ಷಿಣೆ ನೀಡದೆ ವಿವಾಹವಾಗುವ ಛಲತೊಟ್ಟು ಕಾಂಗ್ರೆಸ್‌ನ ಸೇವಾದಳದ ಗಾಂಧಿತತ್ವದ ಆದರ್ಶವಾದಿ ಯುವಕ, ಕನ್ನಡದ ಪ್ರಖ್ಯಾತ ಕತೆಗಾರ ಬಾಗಲೋಡಿ ದೇವರಾಯರ ಗೆಳೆಯರಾದ ಪೆರಾರ ಮುಂಡಬೆಟ್ಟು ಮಹಾಬಲಶೆಟ್ಟಿ ಅವರನ್ನು ಬಾಳಸಂಗಾತಿಯನ್ನಾಗಿಸಿಕೊಂಡರು. ಇದೀಗ ಇಬ್ಬರದೂ ನಿವೃತ್ತ ಬದುಕು.

ಸಂದರ್ಶಕ

**ಶ್ರೀನಿವಾಸ ಜೋಕಟ್ಟೆ**

'ಶಿವರಾಮ ಕಾರಂತರ ಕಾದಂಬರಿಗಳಲ್ಲಿಯ ಸ್ತ್ರೀ ಪಾತ್ರಗಳು' ಎಂಬ ವಿಷಯದ ಬಗೆಗೆ ಬರೆದು ಸಲ್ಲಿಸಿದ ಮಹಾಪ್ರಬಂಧಕ್ಕೆ ಇವರಿಗೆ ಮುಂಬಯಿ ವಿಶ್ವವಿದ್ಯಾಲಯದಿಂದ 'ಡಾಕ್ಟರೇಟ್' ಪದವಿ ಲಭಿಸಿದೆ.

**ಸಂದರ್ಶನದ ಆಯ್ದ ಮಾತುಗಳು**

ಶ್ರೀ : ತಾವು ಸ್ತ್ರೀವಾದಿ ಬರಹಗಾರ್ತಿಯಾಗಿದ್ದೀರಿ. ನೀವು ಬಂಟ ಸಮಾಜದವರು. ವೆಚ್ಚದಾಯಕ ಶಿಕ್ಷಣ ಪಡೆದು ಹೆಚ್ಚು ಆದಾಯ ತರುವ ಗಂಡಿಗೆ ಹೆಚ್ಚು ವರದಕ್ಷಿಣೆ ಕೊಡುವ ಸ್ಪರ್ಧೆ ಕಾಣುವುದಕ್ಕೆ ಏನು ಹೇಳುವಿರಿ ?

ಸು : ಇಂದು ತಂತ್ರಜ್ಞಾನದ ಅರಿವನ್ನು ಹೆಣ್ಣು ಕೂಡಾ ಹೆಚ್ಚು ಹೆಚ್ಚಾಗಿ ಪಡೆಯುತ್ತಿರುವುದರಿಂದ ವರದಕ್ಷಿಣೆಯನ್ನು ಹೆಣ್ಣೇ ವಿರೋಧಿಸಬೇಕಾದದ್ದು ನ್ಯಾಯ. ಆದರೆ ಬಹ್ವಂಶ ಹಾಗಾಗುವುದಿಲ್ಲ. ತಂದೆಯ ಸಂಪತ್ತಿನಿಂದ ಸುಖ ಕಾಣುವ ಬಯಕೆಯುಳ್ಳ ಹೆಣ್ಣು ಮಕ್ಕಳೇ ಇಂಥಾದ್ದನ್ನು ಪ್ರತಿಭಟಿಸುವುದಿಲ್ಲ ಎಂದು ದುಃಖದಿಂದ ಹೇಳಬೇಕಾಗಿದೆ. ಇದೊಂದು ವಿಷವರ್ತುಲ: ತಂಗಿಯರ ವಿವಾಹದ ಹೊಣೆಹೊತ್ತ ಗಂಡು ವರದಕ್ಷಿಣೆಗೆ ಮನಸ್ಸು ಮಾಡುತ್ತಾನೆ. ಹೆಣ್ಣುಮಕ್ಕಳೇ ಹೆಚ್ಚಿರುವ ತಂದೆ ಆದಷ್ಟು ಬೇಗ ಮಕ್ಕಳ ವಿವಾಹದ ಜವಾಬ್ದಾರಿಯನ್ನು (ಸಾಲಮಾಡಿಯಾದರೂ) ನೀಗಿಕೊಳ್ಳುವ ಅವಸರದಲ್ಲಿರುತ್ತಾನೆ. ಆರ್ಥಿಕ ಸ್ವಾತಂತ್ರ್ಯವಿದ್ದಾಗಲೇ ಗುಲಾಮಗಿರಿಗೆ ಒಳಗಾಗುತ್ತಾನೆ. ಹೆಣ್ಣು ಉದ್ಯೋಗಿಯಾಗುವುದೇ ಇದಕ್ಕೆ ಪರಿಹಾರ. ನಾನು ಹುಟ್ಟಿ ಬೆಳೆದ ಬಂಟ ಸಮಾಜ, ಮಾತೃಪ್ರಧಾನ ಪದ್ಧತಿಗೆ ಸೇರಿದುದು. ಇಲ್ಲಿ ವಿವಾಹವಾದ ಮೇಲೂ ತವರುಮನೆಯ ಮೇಲಿನ ಅಧಿಕಾರ ಕಡಿದುಹೋಗದು. ಆದ್ದರಿಂದ ಹಂಗಿಲ್ಲದೆ ಬದುಕಬಹುದೆನ್ನುವ ಸ್ವಾಭಿಮಾನದ ಕಿಡಿ



ಮಹಿಳಾ ಕೃತಿಗಳ ವಿಮರ್ಶೆ ಮಾಡುವಾಗ 'ರಿಯಾಯಿತಿ' ನೀಡಬೇಕು ಎಂದೇನಲ್ಲ, ವಿನಾಕಾರಣ ಅಲಕ್ಷ್ಯ ಮಾಡಲಾಗುತ್ತಿದೆಯಲ್ಲ ಎಂಬ ಖೇದ ಮಹಿಳೆಗಿದೆ. ಕೆಲವು ಸ್ಥಾಪಿತ ಹೆಸರುಗಳನ್ನು ಬಿಟ್ಟರೆ ನಮ್ಮ ವಿಮರ್ಶಕರಿಗೆ ಹೊಸ ಲೇಖಕಿಯರು, ಅದರಲ್ಲೂ ಕರ್ನಾಟಕದ ಗಡಿಯಾಚೆ ದೂರ ಇರುವವರು ಇನ್ನೂ ಲೆಕ್ಕಕ್ಕೆ ಬಂದಂತಿಲ್ಲವೇನೋ. ಕೇವಲ ಪುರುಷ ವಿಮರ್ಶಕರೇ ಏಕೆ, ಮಹಿಳಾ ವಿಮರ್ಶಕರದೂ ಇದೇ ಧಾಟಿ!

ಹೆಣ್ಣಿನಲ್ಲಿ ಹುದುಗಿರುತ್ತದೆ. ಆದರೂ ಹಿರಿಯರ ಅಭಿಪ್ರಾಯಗಳನ್ನು ಕಟ್ಟುನಿಟ್ಟಾಗಿ ಅಲ್ಲಗಳೆಯುವ ಶಕ್ತಿ ಈ ಸಮಾಜದ ಹೆಣ್ಣುಗಳಿಗೆ ಇನ್ನೂ ಸಾಕಷ್ಟು ಒದಗಿಬಂದಿಲ್ಲವಲ್ಲ.

ಶ್ರೀ : ಸಾಹಿತ್ಯದ ಎಲ್ಲಾ ವಿಭಾಗಗಳಲ್ಲಿ ಬರೆದಿದ್ದೀರಿ. ಕತೆ ಯಾಕೆ ಬರೆದಿಲ್ಲ?

ಸು : ನಾನು ಮೊದಲಿಗೆ ಬರೆದದ್ದೇ ಕತೆ. ಐದು ಕತೆಗಳನ್ನು ಬರೆದಿದ್ದೇನೆ. ಆಗಿನ ಪ್ರಜಾಮತದಲ್ಲಿ ಅವು ಪ್ರಿಂಟಾಗಿವೆ. ನಂತರ ಕತೆ ಬರೆಯುವುದು ನಿಲ್ಲಿಸಿದೆ. ಯಾಕೆ ನಿಲ್ಲಿಸಿದೆ ಎಂದು ನನಗೇ ಗೊತ್ತಿಲ್ಲ. ಕಾಲೇಜ್‌ನಲ್ಲಿ ಪಾಠ ಮಾಡುವಾಗ ಕಾವ್ಯದ ಬಗ್ಗೆ ಹೇಳಿ ಹೇಳಿ ನನಗೂ ಆಸಕ್ತಿ ಬಂದಿರಬೇಕು. ಅನಂತರ ಕಾವ್ಯದತ್ತಲೇ ಒಲವು. ಅಂದಿನ ಆ ಕತೆಗಳನ್ನು ಜಾಗ್ರತೆಯಿಂದ ತೆಗೆದಿರಿಸಿದ್ದೇನೆ. ಅದನ್ನು ಮತ್ತೆ ಹೊಸತಾಗಿ ಬರೆಯಬೇಕಿದೆ, ಕಾಗದಗಳೂ ಹಳತಾಗಿವೆಯಲ್ಲ.

ಶ್ರೀ : ಸಾಹಿತ್ಯದಲ್ಲಿ 'ಸ್ತ್ರೀ ಸಂವೇದನೆ', 'ದಲಿತ ಸಂವೇದನೆ', 'ಮುಸ್ಲಿಂ ಸಂವೇದನೆ' ಎಂಬ ಶಬ್ದಗಳೆಲ್ಲಾ ವಿಮರ್ಶಕರ ಬರಹಗಳಲ್ಲಿ ಕಂಡುಬರುತ್ತವೆ. ಎಲ್ಲವೂ ಮನುಷ್ಯ ಸಂವೇದನೆ ಆಗಿರುವಾಗ ಇಂತಹ ವಿಭಾಗಗಳು ಬೇಕಾ ?

ಸು : ಸಂವೇದನೆ ಅನ್ನುವುದು ವಿಮರ್ಶೆಯ ಪರಿಭಾಷೆ. ಮನುಷ್ಯ ಎಂಬ ಶಬ್ದ ಒಂದೇ ಆದರೂ ಮಾನಸಿಕ ಸಂವೇದನೆಗಳು ಬೇರೆ ಬೇರೆ. ಮನಃಶಾಸ್ತ್ರೀಯವಾಗಿ ನಡೆಸುವ ಅಧ್ಯಯನದಲ್ಲೂ ಕಾಲ ಹಾಗೂ ಸಂದರ್ಭಗಳ ಸ್ವೀಕೃತಿಯ ಅಂಶದಲ್ಲಿ ನಡೆಯುವ ಏರುಪೇರುಗಳನ್ನು ಗಮನಿಸಲಾಗುತ್ತದೆಯೇ ಹೊರತು ಲಿಂಗ, ಯಾವ ಜಾತೀಯ ಆಧಾರದ ಮೇಲಿನ ಸಂಗತಿಗಳನ್ನಲ್ಲ. ಪ್ರತ್ಯೇಕ ವರ್ಗೀಕರಣ ಮಾಡಿಕೊಳ್ಳುವುದಕ್ಕಿಂತ ಸಾಂದರ್ಭಿಕ ಪಾತಳಿಯಲ್ಲಿ ಮಾತ್ರ ಇದನ್ನು ಚರ್ಚಿಸಬಹುದು.

ಶ್ರೀ : ಪುರುಷ ವಿಮರ್ಶಕರು ಮಹಿಳೆಯರು ರಚಿಸುವ ಕೃತಿಗಳಿಗೆ ನ್ಯಾಯ ನೀಡುತ್ತಿಲ್ಲ ಎಂಬ ಆರೋಪವೂ ನಿಜವೇ ?

ಸು : ಇಲ್ಲಿ ಮಹಿಳಾ ಕೃತಿಗಳ ವಿಮರ್ಶೆ ಮಾಡುವಾಗ 'ರಿಯಾಯಿತಿ' ನೀಡಬೇಕು ಎಂದೇನಲ್ಲ, ವಿನಾಕಾರಣ ಅಲಕ್ಷ್ಯ ಮಾಡಲಾಗುತ್ತಿದೆಯಲ್ಲ ಎಂಬ ಖೇದ ಮಹಿಳೆಗಿದೆ. ಕೆಲವು ಸ್ಥಾಪಿತ ಹೆಸರುಗಳನ್ನು ಬಿಟ್ಟರೆ ನಮ್ಮ ವಿಮರ್ಶಕರಿಗೆ ಹೊಸ ಲೇಖಕಿಯರು. ಅದರಲ್ಲೂ ಕರ್ನಾಟಕದ ಗಡಿಯಾಚೆ ದೂರ ಇರುವವರು ಇನ್ನೂ ಲೆಕ್ಕಕ್ಕೆ ಬಂದಂತಿಲ್ಲವೇನೋ. ಕೇವಲ ಪುರುಷ ವಿಮರ್ಶಕರೇ ಏಕೆ, ಮಹಿಳಾ ವಿಮರ್ಶಕರದೂ ಇದೇ ಧಾಟಿ! ದೊಡ್ಡ ದೊಡ್ಡ ಶಬ್ದಗಳನ್ನು ಹಾಕಿ ತಮ್ಮ ಬರವಣಿಗೆಗೆ ಬೆಡಗು ತುಂಬಿಸುವವರೆಲ್ಲ ಪಾಶ್ಚಾತ್ಯ ಮಾನದಂಡಕ್ಕೆ ಹೆಚ್ಚು ವಾಲುವಂತೆ ಕಾಣುತ್ತದೆ. ಹೊರನಾಡಿನ ನಮ್ಮಂಥವರು ಮಾತ್ರ ಅನಾಥ ಪ್ರಜ್ಞೆಯಿಂದ ಬಳಲುವವರು!

ಶ್ರೀ : ಮುಂಬಯಿ ಬದುಕು ತಮ್ಮ ಬರಹಗಳಲ್ಲಿ ಅಷ್ಟಾಗಿ ಪ್ರಭಾವ ಬಿದ್ದಂತೆ ಕಾಣುತ್ತಿಲ್ಲವಲ್ಲ?

ಸು : ಇದೊಂದು ಆಶ್ಚರ್ಯವೇ ಸರಿ. ಮುಂಬಯಿ ಬದುಕಿನ ಬಗೆಗೆ ನನ್ನ ಬರಹಗಳಲ್ಲಿ ಹೆಚ್ಚಿಗೆ ಹೇಳಲೇ ಇಲ್ಲ. ನಾನು ಸಾಹಿತ್ಯವನ್ನು ಒಟ್ಟು ಬದುಕಿನ ಅರ್ಥದಲ್ಲಿ ಕಂಡುಕೊಳ್ಳಲು ಯತ್ನಿಸಿದ್ದೇನೆ. ನೆರೆಯ ಮರಾಠಿ ಸಾಹಿತ್ಯ ಪ್ರಕಾರಗಳ ಬಗೆಗೂ ನನ್ನ ಆಸಕ್ತಿ ಬೆಳೆದಿದೆ. ಪ್ರಭಾವದ ಮಟ್ಟಿಗೆ ಹೇಳುವುದಿದ್ದರೆ, ಇಲ್ಲಿಯ ಮಾನವ ಪ್ರೀತಿ ಹಾಗೂ ದುಡಿಯುವ ಹೆಣ್ಣಿನ ಮಾನಸಿಕ ಸ್ಥಿತಿ ಇವು ನನ್ನನ್ನು ಆಳವಾಗಿ ಚಿಂತಿಸುವಂತೆ ಮಾಡಿವೆ.

ಶ್ರೀ : ಇಂದಿನ ಶಿಕ್ಷಣ ಕ್ಷೇತ್ರದ ಕುರಿತಂತೆ...



ಸು : ಇಂದಿನ ಶಿಕ್ಷಣ, ಶಿಕ್ಷಕರು ಮತ್ತು ವಿದ್ಯಾರ್ಥಿಗಳು – ಇವರ ನಡುವಿನ ಮಧುರ ಸಂಬಂಧದ ಕೊಂಡಿಗಳು ಈಗೀಗ ಕಳಚಿಕೊಳ್ಳುತ್ತಿವೆ. ಶಿಕ್ಷಣದ ಪಾವಿತ್ರ್ಯ, ಶುದ್ಧತೆ ಇಂದು ಉಳಿದಿಲ್ಲ. ಅದು ಮಾರುಕಟ್ಟೆ ವಸ್ತುವಾಗಿಬಿಟ್ಟಿದೆ. ಎಲ್ಲಾ ಕ್ಷೇತ್ರಗಳಲ್ಲಿಯೂ ಈಗ ಸಂಬಳಕ್ಕಾಗಿ ದುಡಿಮೆ ಎಂದಿರುವಾಗ ಶಿಕ್ಷಣಕ್ಷೇತ್ರವು ಮಾತ್ರ ಸ್ವರ್ಗದ ಸೊತ್ತೇ? ದೊಡ್ಡ ದೊಡ್ಡ ಆದರ್ಶಗಳನ್ನು ಶಿಕ್ಷಕರ ಮೇಲೆ ಹೇರುವ ಪಲಾಯನವಾದವನ್ನು ನಾನು ಒಪ್ಪುವುದಿಲ್ಲ.

ಶ್ರೀ : ಟಿ.ವಿ. ಸೀರಿಯಲ್‌ಗಳಲ್ಲಿ ಯಾವುದನ್ನು ಇಷ್ಟಪಡುತ್ತೀರಿ ?

ಸು : ನಾನು ಹಿಂದಿ ಧಾರಾವಾಹಿಗಳನ್ನು ನೋಡುವುದೇ ಇಲ್ಲ. ಮಲೆಯಾಳಂ ಜಾಸ್ತಿ ನೋಡುತ್ತೇನೆ. ಅಲ್ಲಿನ ಪ್ರಕೃತಿ, ಆಚಾರ ವಿಚಾರ, ಸಹಜತೆ ನನಗೆ ತುಂಬಾ ಪ್ರೀತಿ.

ಶ್ರೀ : ಮಹಾಬಲ ಶೆಟ್ಟರು ಗಾಂಧಿವಾದಿ. ಅದರಲ್ಲೂ ಧರ್ಮ, ದೇವರುಗಳಿಂದ ದೂರ ನಿಲ್ಲುವ ವ್ಯಕ್ತಿ. ತಾವಾದರೋ ಎಲ್ಲಾ ಕ್ಷೇತ್ರಗಳಲ್ಲೂ ಕಾಣಿಸಿಕೊಳ್ಳುತ್ತೀರಿ. ಪತಿಯವರ ಈ ವೈಚಾರಿಕತೆ ತಮಗೆ ತೊಂದರೆಯಾಗುವುದಿದೆಯೇ ?

ಸು : ನಾವು, ಒಬ್ಬರನ್ನೊಬ್ಬರು ಘರ್ಷಣೆ ಮಾಡಿಕೊಳ್ಳುವುದಿಲ್ಲ. ನನ್ನ ಬರವಣಿಗೆಗೆ ಅವರು ಅಡ್ಡಿಪಡಿಸಿಲ್ಲ. ಅವರಿಗೆ ಯಾವತ್ತೂ ತಾನೂ ಕೂಡಾ ಬರೆಯಬೇಕು ಎಂದು ಅನಿಸಿದ್ದೇ ಇಲ್ಲವಂತೆ. ಅವರವರ ವಿಚಾರಗಳು ಅವರವರಿಗೆ. ನನ್ನ ತಾಯಿ ಸಂಪ್ರದಾಯಸ್ಥರು. ನಾನು ಇನ್ನೊಬ್ಬರ ಅಭಿಪ್ರಾಯವನ್ನೂ ಗೌರವಿಸುತ್ತೇನೆ. ಕೊನೇಪಕ್ಷ ಅವರ ಮನಸ್ಸಿನ ಸಮಾಧಾನಕ್ಕಾಗಿಯಾದರೂ ಹಾಗೆ ಮಾಡುತ್ತೇನೆ.

ಶ್ರೀ : ತಾವು ಪ್ರವಾಸಪ್ರಿಯರು. ಈ ಕುರಿತ ಆಸಕ್ತಿ ಹೇಗೆ ಮೂಡಿಸಿಕೊಂಡಿರಿ ?

ಸು : ಕನ್ನಡ ಜಾಗ್ರಫಿ ಪಾಠವನ್ನು ಎನ್.ಕೆ.ಇ.ಎಸ್. ನಲ್ಲಿ ಶಿಕ್ಷಕಿಯಾಗಿದ್ದಾಗ ಹೇಳಿಕೊಡುತ್ತಿದ್ದೆ. ಅದು ತುಂಬಾ ಕುತೂಹಲಕಾರಿ ವಿಷಯ. ಹಾಗೆಯೇ ನನಗೂ ಪ್ರವಾಸ ಮಾಡಬೇಕೆಂಬ ಆಸಕ್ತಿ ಬೆಳೆಯಿತು. ಉತ್ತರ ಅಮೆರಿಕಾ, ನೇಪಾಳ, ಅರಬ್ ರಾಷ್ಟ್ರ, ಮಲೇಷ್ಯಾ, ಹಾಂಕಾಂಗ್, ಅಂಡಮಾನ್, ಯೂರೋಪ್ ಮತ್ತು ಭಾರತದ ಅನೇಕ ಪ್ರಮುಖ ಸ್ಥಳಗಳನ್ನು ಸುತ್ತಿ ಬಂದಿದ್ದೇನೆ. 'ಪ್ರವಾಸಿಯ ಹೆಜ್ಜೆಗಳು' ಪ್ರವಾಸ ಕಥನವನ್ನೂ ಪ್ರಕಟಿಸಿದ್ದೇನೆ, ಅದಕ್ಕೂ ಬಹುಮಾನ ದೊರಕಿದೆ. ಕೇವಲ ಅಮೆರಿಕಾ ಪ್ರವಾಸ ಕುರಿತಂತೆ ಮಾತ್ರ ಪುಸ್ತಕಗಳು ಹೆಚ್ಚಾಗಿ ಕನ್ನಡದಲ್ಲಿ ಸಿಗುತ್ತವೆ. ಆದರೆ ಭಾರತದಲ್ಲೇ ಇರುವ ಪ್ರವಾಸ ಸ್ಥಳಗಳನ್ನು ಪರಿಚಯಿಸುವ ಕೃತಿಗಳನ್ನೂ ಲೇಖಕರು ಹೊರತರಬೇಕಾಗಿದೆ.

ಶ್ರೀ : ಸಂದರ್ಶನಕ್ಕಾಗಿ ವಂದನೆಗಳು.

ಶ್ರೀನಿವಾಸ ಜೋಕಟ್ಟೆ
'ಗೊರಾಯಿ ಸುಯೋಗ್', ಫ್ಲಾಟ್ ನಂ. ೨೦೧, ಪ್ಲ್ಯಾಟ್ ನಂ. [illegible]
ಗೊರಾಯಿ – ದ್ವಿತೀಯ, ಬೋರಿವಲಿ ಪಶ್ಚಿಮ, ಮುಂಬಯಿ - ೪೦೦ ೦೯೨

**ಸೂ**ರ್ಯ ಕೆಂಪಾಗಿದ್ದ. ನಾನು ಮತ್ತು ಚೋಮ ದೊಡ್ಡ ದೊಡ್ಡ ಹೆಜ್ಜೆಗಳನ್ನಿಡುತ್ತಿದ್ದೆವು. ಚೋಮ ನನ್ನನ್ನು ಗೇಟಿನ ಬಳಿ ಬಿಟ್ಟು ಹಿಂದೆ ನೋಡದೆ ಓಡಿಹೋದ. ಈಗ ನನ್ನ ಎದೆ ಜೋರಾಗಿ ಹೊಡೆಯಲಾರಂಭಿಸಿತು. ಪಕ್ಕದ ಮನೆಯ ಅನಂತ, ನಾನು ಮತ್ತು ಚೋಮ ಹೊಳೆಯಲ್ಲಿ ಆಟವಾಡುತ್ತಿದ್ದುದನ್ನು ನೋಡಿಬಿಟ್ಟಿದ್ದಾನಲ್ಲ! ಒಂದು ವೇಳೆ ಅವನು ಅಪ್ಪನ ಕಿವಿ ಊದಿದ್ದರೆ ? ದೇವರೆ ! ನಾನು ಮೆಲ್ಲನೆ ಹೆಜ್ಜೆಯಿಡುತ್ತಾ ಮನೆಯೊಳಗೆ ಹೋದೆ.

ಅಪ್ಪನ ಹೆಜ್ಜೆ ಸಪ್ಪಳ. ನಾನು ಬಾಗಿಲ ಬಳಿ ನಿಂತು ಕೇಳಿದೆ. ತಂದೆ ಸಿಟ್ಟಿನಿಂದ ಶತಪಥ ತಿರುಗುತ್ತಿದ್ದರು. ಬಾಗಿಲ ಬಳಿಯಿದ್ದ ನನ್ನನ್ನು ನೋಡಿದ್ದೇ ಅಪ್ಪನ ಕಣ್ಣು ಕೆಂಪಾಯಿತು, ನಾನು ಸಂಜೆ ನೋಡಿದ ಸೂರ್ಯನ ಹಾಗೆ. ಇವರು ಮನೆಯ ಅಪ್ಪ ಅಲ್ಲವೆಂದೇ ನನಗೆ ಅನಿಸಿತು. ಮನೆಯಲ್ಲಿ ಅಪ್ಪ ಎಷ್ಟು ಪಾಪ ಇರುತ್ತಾರೆ. ಚೆನ್ನಾಗಿ ಮಾತನಾಡ್ತಾರೆ. ಕೆಲವೊಮ್ಮೆ ಮಾತ್ರ ಅಮ್ಮನಿಗೆ ಬೈದು ಸಿಟ್ಟುಮಾಡಿಕೊಳ್ತಾರೆ.

ಆದರೆ ಇವತ್ತು ತುಕ್ರನ ಬಳಿ ಮಾತನಾಡುವಾಗ ಕಣ್ಣು ಕೆಂಪು ಮಾಡುವಂತೆ, ಕಣ್ಣನ್ನು ಕೆಂಪು ಮಾಡಿಕೊಂಡಿದ್ದಾರೆ. ಯಾವತ್ತೂ ಅವರು ಮನೆಯ ಹೊರಗೆ ಮಾತ್ರ ಇಷ್ಟು ಸಿಟ್ಟು ಮಾಡುವುದು. ಆದರೆ ಇಷ್ಟು ಸಿಟ್ಟು ಇವತ್ತ್ಯಾಕೆ ? ನಾನು ಹೊಳೆಯಲ್ಲಿ ಆಡಿದ್ದು ಒಂದು ಸಣ್ಣ ತಪ್ಪು. ಮತ್ತೆ ನನಗೆ ಜ್ವರ ಬರುತ್ತದೆ. ಆದರೆ ಇದಕ್ಕಿಂತ ಮೊದಲು ಎಷ್ಟು ಬಾರಿ ಆಡಿದಾಗ ಅಪ್ಪ ಬೈದಿದ್ದರೂ. ಇಷ್ಟು ಸಿಟ್ಟುಮಾಡಿರಲಿಲ್ಲ. ಆದರೆ ಇವತ್ತ್ಯಾಕೆ ಕಣ್ಣು ಇಷ್ಟು ಕೆಂಪಗಾಗಿದೆ ?

ಈ ಪ್ರಶ್ನೆ ನನ್ನ ಮನಸ್ಸಿನಲ್ಲಿ ಮೂಡುವಷ್ಟರಲ್ಲಿ ಅಪ್ಪನ ಕೈಯಲ್ಲಿ ಬೆತ್ತವಿತ್ತು. ಅದು ಕೆಲಸದವರಿಗೆ ಹೊಡೆಯುವ ಬೆತ್ತ. ಅಪ್ಪ ಹೊಡೆಯುವ ಮೊದಲೇ 'ಅಮ್ಮ' ಎಂದು ಕಿರುಚಿ ಅಳತೊಡಗಿದೆ. ಒಂದು ಪೆಟ್ಟು ಬಿದ್ದೇಬಿಟ್ಟಿತು. ಒಂದು ಸಾರಿ ತಲೆ ತಿರುಗಿ ದಂತಾಯಿತು. ಅಷ್ಟರಲ್ಲಿ ಅಮ್ಮ ಓಡಿಬಂದು ನನ್ನನ್ನು ಅಪ್ಪಿಕೊಂಡರು. ಅಪ್ಪ ''ಇನ್ನೊಂದು ಸಾರಿ ಆ ಚೋಮನ ಜೊತೆ ಆಡಿದರೆ ನಿನ್ನ ಬೆನ್ನಿನ ಚರ್ಮ ಸುಲಿಯುತ್ತೇನೆ'' ಎಂದು ಹೇಳಿ ಕೋಣೆಯೊಳಗೆ ಹೋದರು. ಅಮ್ಮ ನನ್ನನ್ನು ಅಪ್ಪಿಕೊಂಡು ಸಮಾಧಾನ ಮಾಡುತ್ತಲೇ ಇದ್ದರು.

ಆ ರಾತ್ರಿ ನನಗೆ ನಿದ್ದೆಯೇ ಬರಲಿಲ್ಲ. ಅಪ್ಪ, ಅಮ್ಮ ಗುಸು ಗುಸು ಮಾತನಾಡುವುದು ಕೇಳುತ್ತಿತ್ತು. ಸ್ವಲ್ಪ ಹೊತ್ತಿನ ನಂತರ ಅದು ಅಸ್ಪಷ್ಟವಾಯಿತು. ನನಗೆ ನಿದ್ದೆ ಬಂದಿತು.



# ಚೋಮನ ಆಡು

ಅವಿನಾ ಮೆಂಡೋನ್ಸ

ಶಾಲೆಯಲ್ಲಿ ಕೂಡಾ ನನಗೆ ಒಂದೇ ಸಂಶಯ. ಯಾಕೆ ನಾನು ಚೋಮನ ಜೊತೆ ಆಡಬಾರದೆಂದು ಅಪ್ಪ ಹೇಳಿದ್ದು? ಅಪ್ಪ ನಿನ್ನೆ ಯಾಕೆ ನೀರಿನಲ್ಲಿ ಆಡಿದ್ದಕ್ಕೆ ಬೈಯಲಿಲ್ಲ?

ಚೋಮನ ಅಪ್ಪ ನಮ್ಮ ಮನೆಗೆ ಕೆಲಸಕ್ಕೆ ಬರುತ್ತಾನಲ್ಲ? ಅವನೂ ತುಂಬಾ ಒಳ್ಳೆಯವನು. ನನಗೆ ನವಿಲುಗರಿ, ಮತ್ತೆ ಬೇರೆ ಬೇರೆ ಹಣ್ಣುಗಳನ್ನು ತಂದುಕೊಡುತ್ತಾನೆ. ಎಷ್ಟೇ ಯೋಚಿಸಿದರೂ ನನಗೆ ಹೊಳೆಯಲಿಲ್ಲ. ಅನಂತನ ಮೇಲೆ ಅವನ ತಲೆ ಜಜ್ಜುವಷ್ಟು ಸಿಟ್ಟುಬಂದಿತು.

ಮನೆಗೆ ಹೋದವನೆ ಅಪ್ಪನ ಬಳಿ ಮಾತನಾಡದೆ ನೇರ ಅಮ್ಮನ ಬಳಿ ಹೋದೆ. ಅಮ್ಮ ಬಿಸಿ ಬಿಸಿ ಹಾಲು ಮತ್ತು ತಿಂಡಿ ಕೊಟ್ಟರು. ಅಲ್ಲೇ ಹೊರಗೆ ತುಕ್ರ ಕುಳಿತುಕೊಂಡಿದ್ದ. ಚಿಪ್ಪಿನಲ್ಲಿ ಏನನ್ನೋ ಕುಡಿಯುತ್ತಿದ್ದ. ಅಮ್ಮನ ಬಳಿ ಕೇಳಿದೆ ''ಅಮ್ಮ ನಾನ್ಯಾಕೆ ಚೋಮನ ಜೊತೆ ಆಡಬಾರದು ?'' ಅಮ್ಮ ಒಮ್ಮೆ ಕಣ್ಣುಮುಚ್ಚಿ ನಿಡಿದಾದ ಶ್ವಾಸವನ್ನು ಬಿಟ್ಟು ''ನೋಡು, ಚೋಮ ಗಲೀಜು ಹುಡುಗ. ಅವನ ತಂದೆ ತುಕ್ರನನ್ನು ನೋಡ್ತಿ ತಾನೆ ? ಅವನು ಯಾವಾಗಲೂ ಕುಡ್ದು ಬಿದ್ದಿರ್ತಾನೆ. ಅವರ ಬಣ್ಣ ನೋಡು ಕಪ್ಪು. ನಾವೆಲ್ಲಾ ಅವರಿಗಿಂತ ದೊಡ್ಡ ಮನುಷ್ಯರು ಪುಟ್ಟ. ಅವರೆಲ್ಲಾ ಕೀಳು. ಅರ್ಥ ಆಯಿತಾ ? ನಾವು ಅವರ ಜೊತೆ ತಿಂದರೆ, ಸೇರಿದರೆ, ನಾವೂ ಗಲೀಜು ಆಗಿಬಿಡ್ತೇವೆ. ಅಶುದ್ಧವಾಗುತ್ತೇವೆ ಮತ್ತು ದೇವರು ನಾವು ಬೇಡಿದ್ದು ಏನೂ ಕೊಡುವುದಿಲ್ಲ. ಈಗ ಹಾಲು ಕುಡಿ.''

ಅಮ್ಮ ಹೇಳಿದ್ದೆಲ್ಲಾ ಕೇಳಿ ನನ್ನ ತಲೆ ಇನ್ನೂ ಹಾಳಾಯಿತು. ತುಕ್ರ ಸಾರಾಯಿ ಕುಡಿಯುತ್ತಾನೆ. ಆದರೆ ಅಪ್ಪನೂ ಕುಡಿಯುತ್ತಾರೆ. ಅಪ್ಪ ಮಾತ್ರ ತುಕ್ರನ ಹಾಗೆ ದಾರಿಯಲ್ಲಿ ಬೀಳುವುದಿಲ್ಲ. ಕೋಣೆಯಲ್ಲಿ ಒಬ್ಬರೇ ಕೂತು ಕುಡಿಯುತ್ತಾರೆ. ನನಗೋ ಹತ್ತಿರ ಹೋಗಲು ಬಿಡುವುದಿಲ್ಲ. ಚೋಮ ಕಪ್ಪಾದರೇನಂತೆ. ನನ್ನ ಎಷ್ಟು ನೆಂಟರು ಕಪ್ಪಾಗಿದ್ದಾರೆ. ನಾನು ಆಡಿದ ನಂತರ ಗಲೀಜು ಆಗ್ತೇನಂತೆ. ಆದರೆ ಚೋಮ ಅವನ ಬಟ್ಟೆಯನ್ನು ಹೊಳೆಯಲ್ಲಿ ಎಷ್ಟು ಚೆನ್ನಾಗಿ ಒಗೆಯುತ್ತಾನೆ. ನನಗೆ ಒಗೆಯಲು ಬರುವುದೇ ಇಲ್ಲ.

ನನಗೆ ಏನು ಮಾಡುವುದೆಂದು ತಿಳಿಯದೆ ಆ ದಿವಸ ಎಲ್ಲಿಯೂ ಆಟಕ್ಕೆ ಹೋಗಲಿಲ್ಲ.

ಮರುದಿವಸ ಶಾಲೆಯಲ್ಲಿ ಚೋಮ ಸಿಕ್ಕಿದ. ಅವನು ನನಗಿಂತ ಒಂದು ತರಗತಿ ಮುಂದೆ. ಮರ ಹತ್ತಿ ಮಾವಿನಹಣ್ಣು ತೆಗೆದಿದ್ದನ್ನು, ಹೊಳೆಯಲ್ಲಿ ಮೀನು ಹಿಡಿದಿದ್ದನ್ನು, ಅವನ ತಮ್ಮನಿಗೆ ಏಡಿ ಕಚ್ಚಿದ್ದು ಎಲ್ಲ ಹೇಳಿದ. ನನಗೆ ಅವನ ಜೊತೆ ಆಟವಾಡಲು ಎಲ್ಲಿಲ್ಲದ ಆಸೆ ಉಂಟಾಯಿತು. ಅಪ್ಪ ಹೊಡೆದದ್ದನ್ನು ಹೇಳಿದೆ. ಒಂದು ಕ್ಷಣ ಚೋಮ ನನ್ನನ್ನೇ ನೋಡ ತೊಡಗಿದ. ಅವನಿಗೆ ಏನು ಅನ್ನಿಸಿತೋ ''ನಿನಗೆ ಹೊಡೆಯುತ್ತಾರಾದರೆ ಬರುವುದು ಬೇಡ'' ಎಂದು ಹೇಳಿ ಸುಮ್ಮನಾದ.

ಒಂದೇ ಬಾರಿ ಏನೋ ನೆನಪಾದವನಂತೆ, ಖುಷಿಯಿಂದ ''ನಮ್ಮ ಮನೆಯಲ್ಲಿ ಅಪ್ಪ ಆಡು ಮರಿ ತಂದಿದ್ದಾರೆ. ಎಷ್ಟು ಚಂದ ಉಂಟು ಗೊತ್ತಾ? ನಾನು ಯಾವಾಗಲೂ ಅದರ ಜೊತೆ ಆಡುತ್ತೇನೆ. ನಾನು ಅದರ ಜೊತೆಗೇನೆ ಮಲಗುವುದು. ನನ್ನ ತಂಗಿ ಅದಕ್ಕೆ ಹುಲ್ಲು ಕೊಡ್ತಾಳೆ. ನಾನು ಅದನ್ನು ಹೊಳೆಗೆ ಕರೆದುಕೊಂಡು ಹೋಗಿ ತೊಳೆಯುತ್ತೇನೆ.''

ನನಗೂ ಆಡಿನ ಜೊತೆ ಆಡಲು ಬಹಳ ಆಸೆಯಾಯಿತು. ಸಂಜೆ ಮನೆಗೆ ಬಂದೆ. ಆ ದಿವಸಾನೂ ನಾನು ಆಟ ಆಡಲು ಹೊರಗೆ ಹೋಗಲಿಲ್ಲ. ಅನಂತನ ತಮ್ಮಂದಿರು ಮನೆಗೆ ಆಡಲು ಬಂದಿದ್ದರು. ಅವರ ಜೊತೆ ಆಡಲು ಒಂದು ಚೂರೂ ಖುಷಿಯಾಗುತ್ತಿರಲಿಲ್ಲ.

ಹೊರಗೆ ಅಂಗಳದಲ್ಲಿ ಅಪ್ಪ ತುಕ್ರನಿಗೆ ಜೋರು ಮಾಡುತ್ತಿದ್ದುದು ಕೇಳಿಸಿತು. ಈ ಪರಿಸ್ಥಿತಿಯಲ್ಲಿ ತುಕ್ರನ ಮುಖ ನೋಡಿದರೆ ನನಗೆ ಅಳು ಬರುತ್ತಿತ್ತು. ಅದಕ್ಕೆ ನಾನು ಹೊರಗೆ ಹೋಗುತ್ತಿರಲಿಲ್ಲ. ಆ ರಾತ್ರಿ ಕನಸಿನಲ್ಲಿ ಆಡಿನ ಮರಿ ಬಂದಿತ್ತು. ಅದಕ್ಕೆ ಚಂದದ ಹೊಳೆಯುವ ಕಣ್ಣುಗಳಿದ್ದವು. ಅದರ ಬಣ್ಣ ಬಿಳಿಯಾಗಿತ್ತು. ಚೋಮ ಅದರ ಜೊತೆ ಆಟವಾಡುತ್ತಿದ್ದ. ನಾನು ಅದರ ಬಳಿ ಹೋದೆ. ಚೋಮ ಮತ್ತು ಆಡು ಗಾಳಿಯಲ್ಲಿ ಹಾರತೊಡಗಿದರು. ನಾನು ಚಪ್ಪಾಳೆ ತಟ್ಟಿ ನಗತೊಡಗಿದೆ.

ಬೆಳಿಗ್ಗೆ ಎದ್ದು ನಾನು ಅಮ್ಮನ ಬಳಿ ಹೋಗಿ ''ನನಗೊಂದು ಆಡು ಬೇಕು. ಚೋಮನ ಬಳಿ

ಇದೆಯಂತೆ'' ಎಂದು ಹೇಳಿದೆ. ಅದಕ್ಕೆ ಅಮ್ಮ ''ಹೆಚ್ಚಾಗಿ ನಮ್ಮಂತವರು ಯಾರೂ ಆಡು ಸಾಕುವುದಿಲ್ಲ, ಚೋಮನ ಜಾತಿಯವರು ಅದನ್ನು ಸಾಕುತ್ತಾರೆ. ಅವರು ಅದರ ಮಾಂಸ ತಿನ್ನಾರೆ ಗೊತ್ತಾ, ಗಲೀಜು. ಕೋಳಿ ಮತ್ತು ಇನ್ನಾವುದರದೋ ಮಾಂಸವೆಲ್ಲಾ ತಿನ್ನಾರೆ. ತಂದೆ ಕೇಳಿದರೆ ನಿನ್ನನ್ನು ಹೊಡೆಯಲಿಕ್ಕಿದ್ದಾರೆ'' ಎಂದು ಗದರಿಸಿದರು. ನನಗೆ ಬೇಸರವಾಯಿತು. ಅಲ್ಲ, ತುಕ್ರ ಮತ್ತು ಚೋಮ ಅಮ್ಮನಿಗೆ ಏನು ಮಾಡಿದ್ದಾರೆ ? ನನಗೆ ಉತ್ತರ ಸಿಗಲಿಲ್ಲ. ಆದರೆ ಆಡಿನ ಜೊತೆ ಆಡುವ ಆಸೆ ಹೆಚ್ಚಾಯಿತು.

ಈಗೀಗ ಸಂಜೆ ನಾನು ಹೊರಗೆ ಹೋಗಿ ಆಡುವುದು ಬಂದ್ ಆಗಿತ್ತು. ಶಾಲೆಯಲ್ಲಿ ಮಾತ್ರ ಚೋಮ ಸಿಗುತ್ತಿದ್ದ. ಅವನ ಮನೆ ನೋಡಲು, ಆಡು ನೋಡಲು ನನಗೆ ತುಂಬಾ ಆಸೆಯಾಗುತ್ತಿತ್ತು. ಆದರೆ ಅಪ್ಪ ಬಿಡಬೇಕಲ್ಲ. ಅಪ್ಪನಿಗೆ ಅವರನ್ನೆಲ್ಲಾ ನೋಡಿದರೆ ಏನಾಗುತ್ತದೆಂದು ನನಗೆ ತಿಳಿತಾನೇ ಇರಲಿಲ್ಲ.

ನಮ್ಮ ಊರಿನ ದೇವಾಲಯದ ಜಾತ್ರೆ ಹತ್ತಿರ ಬರುತ್ತಿತ್ತು. ಈ ಬಾರಿ ಅಪ್ಪ ಜಾತ್ರೆಗೆ ಏನು ಬೇಕೆಂದು ಕೇಳಿದರೆ ಆಡು ಬೇಕೆಂದು ಕೇಳಬೇಕು ಎಂದು ಯೋಚಿಸಿದೆ. ಚೋಮನ ಬಳಿ ಈ ವಿಷಯ ಹೇಳಿದಾಗ ಅವನಿಗೂ ಖುಷಿಯಾಯಿತು. ''ನಿನಗೆ ತುಕ್ರ ಎಂತ ತಂದು ಕೊಡುತ್ತಾನೆ ?'' ಎಂದು ಕೇಳಿದಾಗ ಅವನ ಮುಖ ಬಾಡಿಹೋಯಿತು. ಅವನು ಸಣ್ಣಗೆ ಅಳತೊಡಗಿದ. ಅರೆ ! ಇವನಿಗೇನಾಯಿತು ಎಂದು ನನಗೆ ಯೋಚನೆಯಾಯಿತು. ಅಷ್ಟರಲ್ಲಿ ಅವನು ಅಳುತ್ತಾ ಹೇಳತೊಡಗಿದ, ''ನಾನು ಇವತ್ತು ಊಟ ಮಾಡಲಿಲ್ಲ, ಅಪ್ಪನ ಬಳಿ ಹಣ ಇಲ್ಲ. ಇನ್ನು ಜಾತ್ರೆಗೆ ಎಲ್ಲಿಂದ ಹಣ ?'' ನನಗೂ ಅಳು ಬಂತು. ನಾನು ಅಪ್ಪನ ಬಳಿ ಹೇಳಿ ಅವನಿಗೆ ಮತ್ತು ತುಕ್ರನಿಗೆ ಹಣ ಕೊಡುತ್ತೇನೆಂದು ಹೇಳಿದೆ. ಚೋಮನಿಗೆ ಖುಷಿಯಾಯಿತು.

ಆ ದಿವಸ ನಾನು ಮನೆಯೊಳಗೆ ಹೋಗುತ್ತಿರಬೇಕಾದರೆ ಅಪ್ಪ ಅಂಗಳದಲ್ಲಿ ತುಕ್ರನಿಗೆ ಬೈಯುತ್ತಿದ್ದರು. ''ಹಣ ಅಂತೆ ಹಣ. ದುಡಿದದ್ದೆಲ್ಲಾ ಹಾಳು ಸಾರಾಯಿಗೆ ಸುರೀತೀಯ. ನಿನ್ನಂತಹವನಿಗೆ ಎಲ್ಲಿಯ ಜಾತ್ರೆ? ನಾಳೆ ನಿನ್ನ ಮನೆಗೆ ಬರುತ್ತೇನೆ. ನಾನು ಕೇಳಿದ್ದು ಕೊಡು. ಮತ್ತೆ ನೋಡುವ. ಈಗ ಬೇಗ ಹೋಗು.'' ಅಪ್ಪನ ಜೋರು ಸ್ವರ ಕೇಳುತ್ತಿತ್ತು. ತುಕ್ರ ಬೇಸರದಿಂದ ಮನೆಯ ಕಡೆ ಹೊರಟ.

ನಾನು ಯೋಚಿಸಿದೆ. ಈಗ ಖಂಡಿತಾ ಹಣ ಕೇಳಿದರೆ ಅಪ್ಪ ಕೊಡುವುದಿಲ್ಲ. ಹೇಗೂ ನಾಳೆ ಅಪ್ಪ ಚೋಮನ ಮನೆಗೆ ಹೋಗುತ್ತಾರಂತಲ್ಲ, ಆಗ ಕೇಳಿದರಾಯಿತು ಎಂದುಕೊಂಡೆ.

ನಾನು ಪುಸ್ತಕ ಓದುತ್ತಿರಬೇಕಾದರೆ ಅಪ್ಪ ನನ್ನ ಬಳಿ ಬಂದು ಕುಳಿತರು. ಸ್ವಲ್ಪ ಓರೆಗಣ್ಣಿನಿಂದ ಮೇಲೆ ನೋಡಿದೆ. ದೊಡ್ಡ ಮೀಸೆಯಡಿ ಅವರ ನಗುವ ತುಟಿ ಕಾಣಿಸಿತು. ಅಪ್ಪ ನನ್ನ ತಲೆ ನೇವರಿಸುತ್ತಾ ''ನಿನಗೆ ಏನು ಬೇಕು ಜಾತ್ರೆಗೆ ?'' ಎಂದು ಕೇಳಿದರು. ನಾನು ಒಂದೇ ಬಾರಿ ''ಆಡು'' ಎಂದು ಹೇಳಿ ನಾಲಿಗೆ ಕಚ್ಚಿದೆ. ಅಪ್ಪ ಜೋರಾಗಿ ನಗತೊಡಗಿದರು. ''ಆಡು ತಾನೆ, ನಾಳೆ ಕೊಡುತ್ತೇನೆ'' ಎಂದು ಹೇಳಿ ಒಂದು ಸುಂದರ ಬಟ್ಟೆಯನ್ನು ತಂದು ನನಗೆ ಕೊಟ್ಟರು. ನನಗೆ ಖುಷಿಯಾಯಿತು. ಅಪ್ಪ ಒಳ್ಳೆಯವರು. ಅಮ್ಮನೇ ಆಡಿನ ಬಗ್ಗೆ ಇಲ್ಲಸಲ್ಲದ ಸುಳ್ಳು ಹೇಳಿದ್ದು ಎಂದೆನಿಸಿತು.

ಬೆಳಿಗ್ಗೆ ಅಪ್ಪ ಹೊರಡಬೇಕಾದರೆ ನಾನು ಅವರ ಜೊತೆ ಬರುತ್ತೇನೆಂದು ಕಂಬದ ಮರೆಗೆ ನಿಂತು ಹೇಳಿದೆ. ಒಪ್ಪಿಗೆ ಸಿಕ್ಕಿತು. ನಾನು, ಅಪ್ಪ ಚೋಮನ ಮನೆಯಿದ್ದ ಕೇರಿ ತಲುಪಿದೆವು. ಸುತ್ತಲೂ ಗಲೀಜಿತ್ತು. ಚೋಮನ ಮನೆ ನಮ್ಮ ಮನೆಯ ಸೌದೆಯಿಡುವ ಕೋಣೆಗಿಂತ ಕೆಟ್ಟದ್ದಾಗಿತ್ತು. ನನಗೆ ತುಂಬಾ ಪಾಪ ಕಂಡಿತು. ನಾನು ಬೇಲಿ ದಾಟಿ ಒಳಗೆ ಹೋಗಬೇಕಾದರೆ ಅಪ್ಪ ನನ್ನನ್ನು ತಡೆದು ನನ್ನ ಕೈಯನ್ನು ಗಟ್ಟಿ ಹಿಡಿದರು. ''ಇಲ್ಲೇ ನಿಲ್ಲು'' ಎಂದು ಗದರಿಸಿದರು. ಖಂಡಿತವಾಗಿ ತುಕ್ರನನ್ನು ನೋಡಿದಾಗ ತಂದೆಗೆ ಏನೋ ಆಗುತ್ತದೆಂದು ನನಗನಿಸಿತು.

ಚೋಮ ನನ್ನ ಬಳಿ ಬರದೆ ದೂರ ನಿಂತು ನೋಡುತ್ತಿದ್ದನು. ಅವನ ಕಣ್ಣಲ್ಲಿ ನೀರಿತ್ತು. ತುಕ್ರ ಒಂದು ಆಡನ್ನು ತಂದು ಅಪ್ಪನಿಗೆ ಕೊಟ್ಟ. ಅವನ ತಾಯಿ ದೂರ ನಿಂತಿದ್ದರು. ಅವರು ಅಳುತ್ತಿದ್ದವರ ಹಾಗೆ ನನಗೆ ಕಂಡರು.

ನಾನು ಆಡಿನ ಮೈಮುಟ್ಟಿ ಮುಟ್ಟಿ ಖುಷಿಗೊಂಡೆ. ಆದರೆ ನನಗೆ ಒಂದು ಸಂಶಯ ಬಂತು. ಇದು ಚೋಮನ ಆಡು ಅಲ್ಲವೆ ? ನಾನು ಅಪ್ಪನ ಬಳಿ ಕೇಳಿದೆ, ''ಆಡನ್ನು ವಾಪಸ್ಸು ಕೊಡಬೇಕಾ ಅಪ್ಪ ?'' ''ಇಲ್ಲ'' ಅಪ್ಪ ಹೇಳಿದರು. ನನಗೆ ವಿಚಿತ್ರವಾಗಿ ಕಂಡಿತು. ಸ್ವಲ್ಪ ದಿವಸದ ನಂತರ ಈ ಆಡು ನನಗೆ ಬೇಡವೆಂದು ಹೇಳಿ ವಾಪಸ್ಸು ಚೋಮನಿಗೆ ಕೊಡುತ್ತೇನೆಂದು ನಿರ್ಧರಿಸಿದೆ. ಛೆ ! ನಾನು ಬರುವಾಗ ಅವನು ಅಳುತ್ತಿದ್ದನಲ್ಲ!

ಜಾತ್ರೆಯ ದಿವಸ ಬಂದಿತು. ನಾನು ತಯಾರಾದೆ. ಮನೆಯ ಹೊರಗೆ ಬಂದು ಆಡಿಗಾಗಿ ಹುಡುಕತೊಡಗಿದೆ. ಆಡು ಎಲ್ಲೂ ಇರಲಿಲ್ಲ. ಅಮ್ಮನ ಬಳಿ ಕೇಳಿದ್ದಕ್ಕೆ ಅದು ದೇವಸ್ಥಾನಕ್ಕೆ ಹೋಗಿದೆ ಎಂದರು. ನನಗೇನೂ ಅರ್ಥವಾಗಲಿಲ್ಲ. ನಾನು ಅಮ್ಮನ ಜೊತೆ ಜಾತ್ರೆಗೆ ಹೋದಾಗ ನಮ್ಮ ಆಡಿನ ಕುತ್ತಿಗೆಗೆ ಮಾಲೆ ಹಾಕಿದ್ದರು. ಮುಖಕ್ಕೆ ಕೆಂಪು ಬೊಟ್ಟು ಇಟ್ಟಿದ್ದರು. ಸ್ವಲ್ಪ ಹೊತ್ತಿನ ನಂತರ ಅಪ್ಪ ಕತ್ತಿ ಹಿಡಿದು ನಿಂತಿದ್ದ ಒಬ್ಬ ಕಪ್ಪಗಿನ ಮನುಷ್ಯನ ಬಳಿ ಏನೋ ಹೇಳಿದರು. ಅವನು ತಾನು ಆಡನ್ನು ನೋಡನೋಡುತ್ತಾ ಇರಬೇಕಾದರೆ ಕತ್ತರಿಸಿಹಾಕಿದ. ಕೆಂಪು ರಕ್ತ ಚಿಮ್ಮಿತು. ನನಗೆ ಒಂದೇ ಸಾರಿ ಕಣ್ಣಿಗೆ ಕತ್ತಲೆ ಬಂದಿತು. ಅಪ್ಪ ಆ ಕೆಂಪು ರಕ್ತದ ಮಧ್ಯೆ ಕೆಂಪಾಗಿ ಕಾಣುತ್ತಿದ್ದರು. ನಾನು ಯೋಚಿಸಿದೆ. ನನ್ನ ಅಪ್ಪ ಇವರಲ್ಲ. ನಾನು ಚೋಮನ ಮನೆಗೆ ಓಡತೊಡಗಿದೆ. ಕೆಂಪು ರಕ್ತವನ್ನು ಹೀರಿದಂತೆ ಕೆಂಪು ಸೂರ್ಯ ಮುಳುಗುತ್ತಿದ್ದ.

**ಅವಿನಾ ಮೆಂಡೋನ್ಸ**
ಕೇರಾಫ್ ಜಾನ್ ಲಿಯೋ ರೆಬೆಲೋ, ನಂ. ೩೦೬೬
೪ನೇ ಅಡ್ಡರಸ್ತೆ, ಗೋಕುಲಂ ಪಾರ್ಕ್ ರಸ್ತೆ
ವಿ. ವಿ. ಮೊಹಲ್ಲ, ಮೈಸೂರು - ೫೭೦ ೦೦೨

# ಸಾದರ ಸ್ವೀಕಾರ

**ಕೆರ ಹೊತ್ತ ಬಸವ** (ಕವಿತೆಗಳು) ರಾಮಪ್ಪ ಮಾದರ
**ಪುಟ : ೫೬** **ಬೆಲೆ : ರೂ. ೨೫**
ಜನವಿದ್ಯಾ ಪ್ರಸಾರಾಂಗ, ೫ನೇ ವಾರ್ಡ್, ಹೂವಿನಹಡಗಲಿ

**ಉದ್ಯಾವರ ಮಾಧವ ಆಚಾರ್ಯ**
**ಲಘು-ಬಿಗು ಪ್ರಬಂಧಗಳು**
ಸಂ. ಮಂಜುನಾಥ ಭಟ್ ಎಚ್.
**ಪುಟ : ೧೭೨** **ಬೆಲೆ : ರೂ. ೫೦**
ವ್ಯಾಸ ಪ್ರಕಾಶನ, ಚಿಟ್ಪಾಡಿ, ಉಡುಪಿ - ೫೭೬ ೧೦೧

**ಸೃಜನ ಸಿರಿ** (ಕವನ ಸಂಕಲನ) ಎನ್. ಬೋರಲಿಂಗಯ್ಯ
**ಪುಟ : ೮೬** **ಬೆಲೆ : ರೂ. ೪೦**
ದಾರಿದೀಪ ಪ್ರಕಾಶನ, ೧೧೪, ಬೋಗಾದಿ ಬಡಾವಣೆ (ದಕ್ಷಿಣ) ಮೈಸೂರು - ೫೭೦ ೦೨೬

**ಕೆರೆ ಏರಿಗೆ ಹಾರ** (ಜಾನಪದ) ಎಸ್. ಆರ್. ಗುರುನಾಥ್
**ಪುಟ : ೪೪** **ಬೆಲೆ : ರೂ. ೨೦**
**ಅಪೂರ್ವ ಪ್ರಕಾಶನ**, ಸಿಂಗಾಪುರ - ೫೭೭ ೫೫೫

**ಬಂಧ-ಬಂಧುರ** (ಪ್ರಬಂಧ) ಸಂ. ಭಾರತೀ ಕಾಸರಗೋಡು
**ಪುಟ : ೧೮೪** **ಬೆಲೆ : ರೂ. ೭೫**

**ಬಿಂಬ - ಪ್ರತಿಬಿಂಬ** (ವ್ಯಕ್ತಿಚಿತ್ರಗಳು) ಸಂ. ಪರಂಜ್ಯೋತಿ
**ಪುಟ : ೧೭೬** **ಬೆಲೆ : ರೂ. ೭೫**

**ವೈದ್ಯಲೋಚನ** (ವೈದ್ಯಕೀಯ ಲೇಖನಗಳು)
ಸಂ. ಡಾ|| ವಸುಂಧರಾ ಭೂಪತಿ
**ಪುಟ : ೧೮೪** **ಬೆಲೆ : ರೂ. ೭೫**

**ತಿಳಿವು** (ಲೇ. ಸಂಗ್ರಹ) ಸಂ. ಡಾ|| ಎಂ. ಎನ್. ಕೇಶವರಾವ್
**ಪುಟ : ೧೮೦** **ಬೆಲೆ : ರೂ. ೭೫**

**ಬಾನಿಗೊಂದು ಕೈಪಿಡಿ** (ನಭಾವಲೋಕನ)
ಸಂ. ಡಾ|| ಬಿ. ಎಸ್. ಶೈಲಜಾ
**ಪುಟ : ೧೪೮** **ಬೆಲೆ : ರೂ. ೭೫**

**ವಿಜ್ಞಾನ ಮತ್ತು ವೈಜ್ಞಾನಿಕ ಮನೋಧರ್ಮ** (ಲೇ. ಸಂಗ್ರಹ)
ಸಂ. ಕೆ. ಎಸ್. ನವೀನ್
**ಪುಟ : ೧೫೨** **ಬೆಲೆ : ರೂ. ೭೫**

**ವಚನ ಸಾಹಿತ್ಯ** (ಲೇಖನಗಳ ಸಂಗ್ರಹ)
ಸಂ. ವಿ. ಚಂದ್ರಶೇಖರ ನಂಗಲಿ
**ಪುಟ : ೧೬೦** **ಬೆಲೆ : ರೂ. ೭೫**

**ದರ್ಶನ ಸಂದರ್ಶನ** (ಸಂದರ್ಶನಗಳು)
ಸಂ. ಕೆ.ಎಸ್. ಪಾರ್ಥಸಾರಥಿ
**ಪುಟ : ೧೮೦** **ಬೆಲೆ : ರೂ. ೭೫**

**'ಹೊಸತು ವಾಚಿಕೆ ಮಾಲೆ'ಯ ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು**, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

**ಆಸ್ತಮ** (ಸ್ವಯಂ ಆರೈಕೆ ಮಾರ್ಗದರ್ಶಿ)
ಎನ್. ವಿಶ್ವರೂಪಾಚಾರ್
**ಪುಟ : ೬೪** **ಬೆಲೆ : ರೂ. ೧೫**

**ಮನಸ್ಸು ನಿರ್ವಹಣೆ ಹೇಗೆ ?** ಎನ್. ವಿಶ್ವರೂಪಾಚಾರ್
**ಪುಟ : ೬೪** **ಬೆಲೆ : ರೂ. ೧೫**
**ಹೆಲ್ತ್ ಕೌನ್ಸೆಲಿಂಗ್ ಸೆಂಟರ್**, ನಂ. ೧೬೮, ಕೆ.ಎಚ್.ಬಿ. ಕಾಲೋನಿ, ಕೆಂಗೇರಿ ಉಪನಗರ, ಬೆಂಗಳೂರು - ೬೦

**ಆಧುನಿಕ ಲೈಂಗಿಕ ವಿಚಾರಗಳು** ಎನ್. ವಿಶ್ವರೂಪಾಚಾರ್
**ಪುಟ : ೯೬** **ಬೆಲೆ : ರೂ. ೨೦**
**ಕರ್ನಾಟಕ ಲೈಂಗಿಕ ವಿಜ್ಞಾನ ಅಕಾಡೆಮಿ**, ನಂ. ೭೩೭, ಡಾ|| ರಾಜಕುಮಾರ್ ರಸ್ತೆ, ೬ನೇ ಬ್ಲಾಕ್, ರಾಜಾಜಿನಗರ ಬೆಂಗಳೂರು - ೫೬೦ ೦೧೦

# ಡಾ॥ ಮನಜ ಅವರ ಸೂರಪ್ಪ ಮಹಾ ಕಾದಂಬರಿಯ ಮಹಿಳಾ ಪಾತ್ರಗಳು ಒಂದು ವಿಶ್ಲೇಷಣೆ

ಡಾ॥ ಎಂ. ಲೀಲಾವತಿ

**ಕ**ನ್ನಡ ಸಾಹಿತ್ಯ ಲೋಕಕ್ಕೆ ದಲಿತ ಬಂಡಾಯ ಚಳುವಳಿಯ ಸಂದರ್ಭದಲ್ಲಿ ಅನೇಕ ಆಯಾಮಗಳು ದೊರೆತಿವೆ. ದಲಿತಲೋಕದ ಹಲವು ಮುಖಗಳನ್ನು ದಲಿತ ಲೇಖಕರೇ ಅತ್ಯಂತ ವಾಸ್ತವ ನೆಲೆಯಲ್ಲಿ ಕಂಡರಿಸಿದ್ದಾರೆ. ಡಾ॥ ಮನಜ ಅವರು ಈ ಸಂದರ್ಭದಲ್ಲಿ ತಮ್ಮ ಮೊದಲ ಕಾದಂಬರಿಯಾದ 'ಮಾಗಿ' ಯಲ್ಲಿ ದಲಿತ ಹೆಣ್ಣೊಬ್ಬಳ ಏಕಾಂಗಿ ಹೋರಾಟವನ್ನು ಅತ್ಯಂತ ಅದ್ಭುತವಾದ ರೀತಿಯಲ್ಲಿ ಅನಾವರಣಗೊಳಿಸಿದ್ದಾರೆ. ತಮ್ಮ ಈ ಎರಡನೇ ಕಾದಂಬರಿಯಲ್ಲಿ ಮತ್ತೆ ಅಜ್ಞಾತ ದಲಿತ ಸಿಪಾಯಿಯೊಬ್ಬನ ವೀರಗಾಥೆಯನ್ನು ಕತೆಯಾಗಿಸುತ್ತಾ ಅವನ ವಂಶದ ಏಳುಬೀಳುಗಳ ಕತೆಯನ್ನು ಚಿತ್ರಿಸುತ್ತಾರೆ. ಮೂಲತಃ ಸಾಹಿತ್ಯದಲ್ಲಿ ಸಂಶೋಧಕರೂ, ವಿಮರ್ಶಕರೂ ಆಗಿರುವ ಮನಜ ಅವರು ತಮ್ಮ ಸೃಜನಶೀಲ ಸಾಹಿತ್ಯ ಸೃಷ್ಟಿಗೆ ಆಯ್ಕೆ ಮಾಡಿಕೊಳ್ಳುವ. ಕಥಾವಸ್ತುವೇ ಸಂಕೀರ್ಣವೂ ಗಂಭೀರವೂ ಆದುದೆನಿಸಿ, ಆ ಕಥಾವಸ್ತು ಸಮಕಾಲೀನವಾದುದೇ ಅಲ್ಲವೆನಿಸುತ್ತದೆ. ಆದರೆ ಆ ಕಥಾವಸ್ತುವಿಗೆ ಅವರು ಕಟ್ಟುವ ಸಂವಿಧಾನದ ಮೂಲದಲ್ಲೇ ಸಮಕಾಲೀನ ಬದುಕಿನ ಧ್ವನಿಪರತೆಯನ್ನೇ ಸೃಷ್ಟಿಸಿಬಿಡುತ್ತಾರೆ. 'ಸೂರಪ್ಪ' ಕಾದಂಬರಿಯ ಮಹಿಳಾ ಪಾತ್ರಗಳನ್ನು ಈ ದೃಷ್ಟಿಯಿಂದ ನೋಡಬಹುದಾಗಿದೆ.

ಇತಿಹಾಸದ ಪುಟಗಳಲ್ಲಿ ಇಣುಕದೆ ಹೋಗಿರುವ ಅದೆಷ್ಟೋ ಅಜ್ಞಾತರ ಸಾಹಸದ ಕತೆಗಳಿವೆ. ಅವುಗಳನ್ನು ಹುಡುಕಿ ತೆಗೆದು ಸಾರಸ್ವತಲೋಕಕ್ಕೆ ಪರಿಚಯಿಸುವ ಕೆಲಸ ಇಂತಹ ಸಂಶೋಧಕ ಲೇಖಕರಿಂದ ಮಾತ್ರ ಸಾಧ್ಯ.

ಟೀಪು ಸುಲ್ತಾನನ ಆಳ್ವಿಕೆಯ ಸಂದರ್ಭದಲ್ಲಿ ಅನೇಕ ರೋಚಕ ವೃತ್ತಾಂತಗಳು ಚರಿತ್ರೆಗಿಂತಲೂ ಹೆಚ್ಚಾಗಿ ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿ ಹರಡಿಕೊಂಡಿರುವುದು ಕಂಡುಬರುತ್ತದೆ. ಭಾರತದ ಸಾಂಸ್ಕೃತಿಕ ಪರಂಪರೆಯಲ್ಲಿ ಜನನಂಬಿಕೆಗೂ, ಜನಪದ ಸಾಹಿತ್ಯಕ್ಕೂ ಎಲ್ಲಿಯವರೆಗೂ ಮನ್ನಣೆ ಸಿಗಲಾರದೋ ಅಲ್ಲಿಯವರೆಗೂ ನಮ್ಮ ಚರಿತ್ರೆ ಕೇವಲ ಏಕಮುಖವಾದುದು ಎಂಬುದಕ್ಕೆ 'ಸೂರಪ್ಪ' ಒಂದು ಸೂಕ್ತ ನಿದರ್ಶನವೇ ಆಗಿದೆ. ಹಿಂದೂವಲ್ಲದ ಒಬ್ಬ ವ್ಯಕ್ತಿ ಹಿಂದೂರಾಜರನ್ನು ಮೂಲೆಗುಂಪಾಗಿಸಿ, ಸಂಸ್ಥಾನದ ಆಡಳಿತ ಸೂತ್ರವನ್ನು ಹಿಡಿದ ಸಂದರ್ಭವೇ ಅತ್ಯಂತ ರೋಚಕವಾದುದು. ಇಂತಹ ಸಂದರ್ಭದಲ್ಲಿ ಅನೇಕ ಅಜ್ಞಾತರ ಸ್ವಾಮಿನಿಷ್ಠೆ, ಸ್ವಾರ್ಥಲಾಲಸೆಗಳೂ ಕೆಲಸ ಮಾಡಿರುತ್ತವೆ.

ಮೈಸೂರು ಸಂಸ್ಥಾನದ ಒಡೆಯರ ಮನೆತನದ ವಿರುದ್ಧ ಬಂಡಾಯವೆದ್ದ ಹೈದರ್ ಮತ್ತು ಟೀಪು ಶೋಷಿತ ಜನವರ್ಗವನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಲೇಬೇಕಾಗಿದ್ದ ಅನಿವಾರ್ಯತೆಗೆ ಕಾರಣ, ದಲಿತ ವರ್ಗಗಳಿಗೆ ಅಂತಹ ಅವಕಾಶಗಳು ಮೂಲತಃ ಒಡೆಯರ ಆಡಳಿತದಲ್ಲೇ ಇದ್ದುವೆಂದು ತಿಳಿದುಬರುತ್ತದೆ. ಅವು ಅಂದಿನ ವ್ಯವಸ್ಥೆಗೆ ಬಾಧಕವಾಗಿರಲೂಬಹುದು, ಸಾಧಕವಾಗಿರಲೂ ಬಹುದು. ಒಟ್ಟಾರೆಯಾಗಿ ಸಾಮಾನ್ಯವ್ಯಕ್ತಿಗಳು ಎಂದು ಮೇಲ್ನೋಟಕ್ಕೆ ಕಾಣಿಸಿಕೊಳ್ಳುವವರು ಒಂದು ಇತಿಹಾಸವನ್ನೇ ಸೃಷ್ಟಿಮಾಡಿರುತ್ತಾರೆ. ಆದರೆ ಅದು ಬಹುಜನರ ಅರಿವಿಗೆ ಬಾರದೇ ಹೋಗಿರುತ್ತದೆ. ಮೈಸೂರು ಒಡೆಯರ ಮನೆತನದ ದೊರೆಗಳು ಮಾತ್ರವಲ್ಲದೆ, ತದನಂತರದ ಸುಲ್ತಾನ್ ಟೀಪು ಆಡಳಿತದಲ್ಲಿ ಕೂಡ ಕೆಳವರ್ಗಗಳಿಗೆ ದೊರೆತ ಸಮಾನ ಅವಕಾಶಗಳಿಂದಾಗಿ ಈ ಪ್ರದೇಶದಲ್ಲಿ ಹತ್ತುಹಲವು ಅಪೂರ್ವ ಚಾರಿತ್ರಿಕ ಘಟನೆಗಳೇ ಆಗಿಹೋಗಿದ್ದು, ಅಂತಹ ಎಷ್ಟೋ ಚಾರಿತ್ರಿಕ ಘಟನೆಗಳನ್ನು ಪಟ್ಟಭದ್ರ ಹಿತಾಸಕ್ತಿಗಳು ಮರೆಮಾಚಿರಲೂ ಬಹುದೆಂಬುದನ್ನು ಮನಜ ಅವರ 'ಸೂರಪ್ಪ' ಕಾದಂಬರಿ ಹೇಳುತ್ತಿರಬಹುದು. ಭರತ ಖಂಡದ ಚರಿತ್ರೆ ಕೇವಲ ರಾಜಮಹಾರಾಜರು ಮತ್ತು ಸುಲ್ತಾನರ ಚರಿತ್ರೆಯೇ ಹೊರತು, ಅದು ಸೈನಿಕರ ಚರಿತ್ರೆಯಂತೂ ಅಲ್ಲವೆಂಬುದನ್ನು ಮರೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ 'ಸೂರಪ್ಪ' ಮಹಾಕಾದಂಬರಿ ತುಂಬಾ ಮಹತ್ವದ್ದೆನಿಸುತ್ತದೆ.

ಟೀಪು ಕಾಲದಲ್ಲಿ ಹಿಂದೂ ಅರಸರಾದ ಒಡೆಯರ ವಂಶದ ಬಗೆಗೆ ವಿಶೇಷವಾದ ಅಭಿಮಾನ, ಪ್ರೀತಿ, ವಿಶ್ವಾಸಗಳನ್ನು ಇರಿಸಿಕೊಂಡಿದ್ದ ಜನಸಾಮಾನ್ಯರು ಯಥಾಪ್ರಕಾರ ಟೀಪುವಿನ ಬಗೆಗೂ ಒಂದು ರೀತಿಯ ವಿಶೇಷ ಗೌರವವನ್ನೇ ಹೊಂದಿದ್ದಂತೆ ಕಂಡುಬರುತ್ತದೆ. ಇದೇ ಸಂದರ್ಭದಲ್ಲಿ ಮತಾಂತರದಂಥ ಒಂದು ವಿವಾದಾಸ್ಪದ ವಿಷಯವನ್ನಂತೂ ಟೀಪುವಿನ ಚರಿತ್ರೆಯ ಜೊತೆಜೊತೆಗೆ ಬರೆದುಕೊಂಡು ಬಂದಿರುವುದು ಕಂಡುಬರುತ್ತದೆ. ಇದಕ್ಕೆ ಟೀಪು ಎಷ್ಟರ ಮಟ್ಟಿಗೆ ಹೊಣೆಗಾರನೆಂಬುದು ಬೇರೊಂದು ಚರ್ಚೆಯ ವಿಷಯವಾಗುತ್ತದೆ.

ಬ್ರಿಟಿಷರನ್ನು ಭಾರತದಿಂದಲೇ ಬಡಿದೋಡಿಸುವ ಮಹತ್ವಾಕಾಂಕ್ಷೆಯಿಂದಾಗಿ ಸ್ವದೇಶದ ಹಿಂದೂಗಳನ್ನು ಮತ್ತು ಮುಸಲ್ಮಾನರನ್ನು ಸರಿದೂಗಿಸಿಕೊಂಡು ಹೋಗುವ ಗುರುತರ ಹೊಣೆಗಾರಿಕೆ, ತನ್ಮೂಲಕ ತನ್ನ ಅರಸುತನವನ್ನು ಉಳಿಸಿಕೊಳ್ಳಲೇಬೇಕಾದ ಅನಿವಾರ್ಯತೆ ಟೀಪುವಿನ ಮುಂದಿದ್ದ ಬಹುದೊಡ್ಡ ಸವಾಲು. ಇಂತಹ ಸಂಕೀರ್ಣ ಹಿನ್ನೆಲೆಯಲ್ಲಿ ತನ್ನ ಸನಿಹದಲ್ಲಿರುವವರಲ್ಲಿ ಯಾರು ನಿಜವಾದ ಸ್ವಾಮಿನಿಷ್ಠರು ಮತ್ತು ಯಾರು ಕಪಟದ ದೇಶಪ್ರೇಮಿಗಳು ಎಂಬುದರ ಬಗೆಗೆ ಕಟ್ಟೆಚ್ಚರ ವಹಿಸುವುದೇ ಅವನಿಗೆ ಪ್ರಥಮವಾಗಿತ್ತು. ಆದುದರಿಂದಲೇ ಮೀರ್ ಸಾದಿಕ್, ಪೂರ್ಣಯ್ಯ, ತಿರುಮಲರಾವ್, ನಾರಾಯಣರಾವ್, ಸಿಪಾಯಿ ಸೂರಪ್ಪ – ಹೀಗೆ ಎಲ್ಲರೂ ಟೀಪುವಿಗೆ ಕಲಸುಮೇಲೋಗರದಂತೆ ಕಂಡು, ಕಡೆಗೆ ಸಿಪಾಯಿ ಸೂರಪ್ಪನಂತಹವರು ಆಕಸ್ಮಿಕ ಶಿಕ್ಷೆಗಳಿಗೆ ಒಳಗಾಗುವ ಪರಿಸ್ಥಿತಿ ಒದಗಿಬರುತ್ತಿತ್ತೇನೋ. ಏಕೆಂದರೆ, ಟೀಪುವಿಗೆ ಬ್ರಿಟಿಷರೊಡನೆ ಯುದ್ಧ ಮಾಡುವುದು ಎಷ್ಟು ಸುಲಭವಾಗಿತ್ತೋ, ಅಷ್ಟರಮಟ್ಟಿಗೆ ಆಂತರಿಕ ದುಶ್ಮನ್‌ಗಳನ್ನು ಗುರುತಿಸಿ ಅವರ ಬಗೆಗೆ ಎಚ್ಚರ ವಹಿಸುವುದು ಮತ್ತು ಸೂಕ್ತಕ್ರಮ ಜರುಗಿಸುವುದೇ ಅಸಾಧ್ಯವೆನಿಸಿತ್ತು. ಈ ರೀತಿಯ ಸಂಘರ್ಷ ಭಾರತೀಯ ಸಂಸ್ಥಾನಗಳ ಬಹುತೇಕ ಎಲ್ಲಾ ರಾಜಮಹಾರಾಜರಿಗೂ ಇತ್ತೆಂಬುದಾಗಿ ಚರಿತ್ರೆಯಿಂದ ತಿಳಿದುಬರುತ್ತದೆ. ಟೀಪುವಿನ ಸಂದರ್ಭದಲ್ಲಿ ಮಾತ್ರ ಅದು ಅತ್ಯಂತ ಜನಜನಿತ ಸಂಗತಿಯೇ ಆಗಿತ್ತೆಂಬುದು ಚರಿತ್ರೆಯಿಂದಲೂ 'ಸೂರಪ್ಪ' ಕಾದಂಬರಿಯಿಂದಲೂ ತಿಳಿದುಬರುತ್ತದೆ. ಹಾಗಾಗಿ ಟೀಪುವಿನ ಆಡಳಿತದಲ್ಲಿ ಕೆಲವೊಮ್ಮೆ ಸೂರಪ್ಪನಂತಹ ನಿರಪರಾಧಿಗಳಿಗೂ ಶಿಕ್ಷೆಯಾಗಿರುವುದೂ ಉಂಟು.

ಸಾಮಾನ್ಯರಲ್ಲಿ ಸಾಮಾನ್ಯನಂತೆಯಿದ್ದ ಒಬ್ಬ ಸಿಪಾಯಿ ಸೂರಪ್ಪ ತನ್ನ ಸ್ವಾಮಿನಿಷ್ಠೆ ಮತ್ತು ಸಾಹಸ ಪ್ರವೃತ್ತಿಯಿಂದ ಒಂದು ಸಂದರ್ಭದಲ್ಲಿ ಟೀಪುವಿನ ಮನಗೆದ್ದು ಅವನ ಆಪ್ತವಲಯಕ್ಕೆ ಬರುತ್ತಾನೆ. ಆದರೆ ಅದೇ ವ್ಯಕ್ತಿ ಮೈಸೂರು ಸಂಸ್ಥಾನದ ಬಗೆಗೆ ವಿಶೇಷ ಗೌರವವನ್ನು ಇರಿಸಿಕೊಂಡಿದ್ದರಿಂದ ರಾಜಮಾತೆಗೆ ಟೀಪುವಿನಿಂದ ಆಗಬಹುದಾಗಿದ್ದ ಅನಾಹುತದಿಂದ ಪಾರುಮಾಡಿ ತನ್ನ ಬಲಿದಾನವನ್ನು ಮಾಡಿಕೊಳ್ಳುತ್ತಾನೆ. ಒಂದು ಕಡೆ ತನಗೆ ಅನ್ನವಿತ್ತ ಸುಲ್ತಾನರ ಜೀವ ರಕ್ಷಿಸಿ ಪ್ರಶಂಸೆಗೆ ಗುರಿಯಾಗಿ ಅವನಿಂದಲೇ ಕೊನೆಗೆ ತೀವ್ರತರನಾದ ಅನುಮಾನದ ಸುಳಿಗೆ ಸಿಲುಕಿ ಬದುಕನ್ನು ಕಳೆದುಕೊಳ್ಳುತ್ತಾನೆ.

ಚಿರತೆಯ ಆಕ್ರಮಣಕ್ಕೆ ಗುರಿಯಾಗಬೇಕಿದ್ದ ಟೀಪುವನ್ನು ಕಾಪಾಡಿ ನೂರು ಎಕರೆ ಇನಾಮತಿ ಜಮೀನಿನ ಉಡುಗೊರೆಯನ್ನು ಪಡೆಯುತ್ತಾನೆ. ಆದರೆ ಟೀಪುವಿನ ದುಶ್ಮನ್‌ಗಳ ಕುತಂತ್ರದಿಂದ 'ರಾಜದ್ರೋಹಿ' ಎನ್ನುವ ಸುಳ್ಳು ಆಪಾದನೆಗೆ ಗುರಿಯಾಗಿ ಘೋರ ಶಿಕ್ಷೆಯನ್ನು ಅನುಭವಿಸುತ್ತಾನೆ. ರಾಜಮಾತೆಯನ್ನು ಕಾಪಾಡಿ, ತನ್ನ ಹೆಂಡತಿ ಮಗುವನ್ನು ಉಳಿಸಿ, ತಾನು ಹುತಾತ್ಮನಾಗುತ್ತಾನೆ. ಎಂದರೆ, ಟೀಪು ಮತ್ತು ಮಹಾರಾಣಿ ಲಕ್ಷ್ಮಮ್ಮಣ್ಣಿ ಇಬ್ಬರೂ ಇವನಿಂದ ಉಪಕೃತರು ಹಾಗೂ ಇವನ ಸಂಸಾರಕ್ಕೆ ಒಂದು ರೀತಿಯಲ್ಲಿ ಆಧಾರವನ್ನು ಒದಗಿಸುವವರು. ಆದರೆ ಸಿಪಾಯಿ ಸೂರಪ್ಪ ಮಾತ್ರ ಅಮರನಾಗುತ್ತಾನೆ. ಇದು ಬದುಕಿನ ವಿಚಿತ್ರ.

ಮೈಸೂರು ಸಂಸ್ಥಾನದ ರಾಜಮಾತೆ ಲಕ್ಷ್ಮಮ್ಮಣ್ಣಿಯವರಾಗಲಿ, ಸಿಪಾಯಿ ಸೂರಪ್ಪನ ಪತ್ನಿ ಸುಂದ್ರವ್ವನಾಗಲಿ ಕಾದಂಬರಿಯಲ್ಲಿ ಹೀಗೆ ಬಂದು ಹಾಗೆ ಹೋಗುವ ಪಾತ್ರಗಳು ಮಾತ್ರ. ಆದರೆ ಇಡೀ ಕಥಾವಸ್ತುವಿನ ಚಲನೆಗೆ ಆ ಎರಡು ಪಾತ್ರಗಳ ಚಾಲಕ ಶಕ್ತಿ ಮಾತ್ರ ಅತ್ಯಂತ ಪರಿಣಾಮಕಾರಿಯಾದುದು. ಪರಾಕ್ರಮಿ ವೀರ ಸಿಪಾಯಿ ಸೂರಪ್ಪ ರಾಜಮಾತೆ

ಲಕ್ಷ್ಮಮ್ಮಣ್ಣಿಯವರನ್ನು ಕಾಪಾಡುವ ಕಥನಭಾಗ ಅನೇಕ ಅರ್ಥಗಳಿಂದ ತುಂಬಿಕೊಂಡು ಓದುಗನ ಚಿಂತನೆಗೆ ಪ್ರಚೋದನೆಯನ್ನು ನೀಡುತ್ತದೆ.

''ಹೆಣ್ಣು ಸಂಸಾರದ ಕಣ್ಣು'', ''ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿ'' – ಎಂಬಂತಹ ಹಲವು ಹತ್ತು ನಾಣ್ಣುಡಿಗಳು ಜನಪದರ ಬದುಕಿನಲ್ಲಿ ನಿತ್ಯ ಚಾಲ್ತಿಯಲ್ಲಿವೆ. ಅದೆಷ್ಟೋ ಸಾಧನೆಗಳ ಸಾಧಕ ಪುರುಷನ ಹಿಂದೆ ಸದಾ ಹೆಣ್ಣೊಬ್ಬಳ ಶಕ್ತ ಚೇತನವಿರುತ್ತದೆ ಎಂಬುದು ಕೇವಲ ನಾಣ್ಣುಡಿ ಮಾತ್ರವಾಗಿರದೆ ಅದೊಂದು ವಾಸ್ತವಿಕ ಸಮಕಾಲೀನ ಸತ್ಯವಾಗಿರುತ್ತದೆ. 'ಕ್ಷಮಯಾ ಧರಿತ್ರೀ', 'ಮಾತೃದೇವೋ ಭವ', ಎಂದು ಹೆಣ್ಣಿಗೆ ಪೂಜನೀಯ ಸ್ಥಾನವನ್ನು ಕೊಟ್ಟಿರುವ ಈ ನೆಲ ಅವಳನ್ನು ಗೌರವಿಸುವ, ಕಡೆಗಣಿಸುವ, ಪ್ರೀತಿಸುವ, ಶೋಷಿಸುವ, ದ್ವೇಷಿಸುವ ಎಲ್ಲ ಕಾರ್ಯಗಳನ್ನೂ ಮಾಡುತ್ತಲೇ ಬಂದಿದೆ. ಇದೊಂದು ನಿರಂತರ ಪ್ರಕ್ರಿಯೆಯೂ ಹೌದು. ಹಾಗಾಗಿ 'ಸೂರಪ್ಪ' ಕಾದಂಬರಿಯಲ್ಲಿನ ಮಹಿಳಾಪಾತ್ರ ಚಿತ್ರಣದಲ್ಲಿ ಈ ಎಲ್ಲಾ ಮುಖಗಳನ್ನೂ ಕಾಣಬಹುದಾಗಿದೆ. ಕಾದಂಬರಿಯಲ್ಲಿನ ಸ್ತ್ರೀಪಾತ್ರಗಳು ಬದುಕಿನ ಎಲ್ಲ ಸಂಕೀರ್ಣತೆಯನ್ನೂ ಮೈಗೂಡಿಸಿಕೊಂಡು ಒಡಮೂಡಿವೆ.

ಪ್ರಮುಖವಾಗಿ, ಇಲ್ಲಿ ಚಿತ್ರಿತವಾಗಿರುವ ಮಹಿಳೆಯರಲ್ಲಿ ಧರಣವ್ವನ ಪಾತ್ರ ಒಂದು. ಈಕೆ ಸಿಪಾಯಿ ಸೂರಪ್ಪನ ಮೊಮ್ಮಗನ ಪತ್ನಿ. ಕತೆಯ ಆರಂಭದಲ್ಲಿಯೇ ಈ ಪಾತ್ರ ಕಾಣಿಸಿಕೊಳ್ಳುತ್ತದೆ. ಈ ಪಾತ್ರಕ್ಕೆ ಹಿನ್ನೆಲೆಯಾಗಿ ಸಿಪಾಯಿ ಸೂರಪ್ಪನ ಪತ್ನಿಯಾದ ಸುಂದ್ರವ್ವನ ಪಾತ್ರವಿದೆ. ಅಲ್ಲಿಂದ ಸುಂದ್ರವ್ವನ ಹಿರಿಯ ಮತ್ತು ಏಕೈಕ ಮಗನಾದ ಚಿಕ್ಕೂರ ಅಥವಾ ಚಿಕ್ಕಸೂರಪ್ಪನ ಹೆಂಡತಿ ಮಲ್ಲಿಗವ್ವನ ಪಾತ್ರವಿದೆ. ಸಿಪಾಯಿ ಸೂರಪ್ಪನ ಹೆಂಡತಿ ಸುಂದ್ರವ್ವ, ಚಿಕ್ಕೂರಪ್ಪನ ಹೆಂಡತಿ ಮಲ್ಲಿಗವ್ವ ಹಾಗೂ ಯಜಮಾನ್ ಸೂರಪ್ಪನ ಹೆಂಡತಿಯಾದ ಧರಣವ್ವ – ಈ ಮೂರು ಪಾತ್ರಗಳು ಮೂರು ವಿಭಿನ್ನ ತಲೆಮಾರಿಗೆ ಸೇರಿದವುಗಳು. ಮೂರು ವಿಭಿನ್ನ ಬದುಕಿನ ನೆಲೆಗಳಲ್ಲಿ ಕಾಣಿಸಿಕೊಳ್ಳುವ ಮೂರು ವಿಭಿನ್ನ ಪಾತ್ರಗಳು. ಕಾದಂಬರಿಯ ಕಥಾವ್ಯಾಪ್ತಿಯಲ್ಲಿ ತಮ್ಮತನದಿಂದಲೇ ನಡೆದುಕೊಳ್ಳುತ್ತವೆ, ಪ್ರತಿಯೊಂದು ಪಾತ್ರವೂ ತನ್ನದೇ ಆದ ವ್ಯಕ್ತಿತ್ವದ ಸ್ವಾಭಾವಿಕ ಪರಿಕರಗಳನ್ನು ಬಿಟ್ಟುಕೊಡುತ್ತವೆ.

ಸಿಪಾಯಿ ಸೂರಪ್ಪ ಶ್ರೀರಂಗಪಟ್ಟಣದಲ್ಲಿ ಸಂಸಾರ ಹೂಡಿದಂದಿನಿಂದ ಆರಂಭಗೊಂಡು ಟೀಪುವಿನ ತೋಪಿಗೆ ಸಿಲುಕಿ ಛಿದ್ರಛಿದ್ರವಾಗುವ ಅಂತ್ಯದವರೆಗೆ ಸುಂದ್ರವ್ವ ಸಿಪಾಯಿ ಸೂರಪ್ಪನ ಬಾಳಸಂಗಾತಿಯಾಗಿ, ಗಂಡನಿಗೆ ತಕ್ಕ ಹೆಂಡತಿಯಾಗಿದ್ದವಳು. ಹಳ್ಳಿಯ ಒಂದು ಸಾಧಾರಣ ಹೆಣ್ಣುಮಗಳಾದ ಈಕೆ ಗಂಡನಿಗೆ ಪ್ರತಿಕ್ಷಣವೂ ನೆರಳಂತೆ ಇದ್ದವಳು. ಬಾಹ್ಯಪ್ರಪಂಚವನ್ನೇ ಕಾಣದ ಈ ಮುಗ್ಧ ಹೆಣ್ಣು ಆಕಸ್ಮಿಕವಾಗಿ ತನ್ನ ಗಂಡ ಟೀಪುವಿನ ಮರಣದಂಡನೆಗೆ ಬಲಿಯಾದಾಗ ಅವನ ಚದುರಿದ ಛಿದ್ರ ಶರೀರದ ಮಾಂಸವನ್ನು ಆಯ್ದುಕೊಂಡು ಒಗ್ಗೂಡಿಸಿ ತಂದು ಅದಕ್ಕೆ ಸಂಸ್ಕಾರ ಮಾಡಿದ ದಾರುಣ ಕತೆ ಹೊಂದಿದ್ದಾಳೆ. ಅಂತಹ ತೀವ್ರ ಪ್ರಕ್ಷುಬ್ಧ ಮನಃಸ್ಥಿತಿಯಲ್ಲೂ ಗಂಡನ ಸಾವಿನ ನಂತರ ತನಗೂ ತನ್ನ ಮಗನಿಗೂ ಒದಗಬಹುದಾದ ಅಪಾಯದ ಜಾಡನ್ನು ಗುರುತಿಸಿಕೊಂಡ ಸುಂದ್ರವ್ವ ಶ್ರೀರಂಗಪಟ್ಟಣವನ್ನು ತೊರೆದು ತನ್ನ ತಂದೆಯ ಆಶ್ರಯಕ್ಕೆ ಬರುತ್ತಾಳೆ. ಈ ಮಧ್ಯೆ ಟೀಪುವಿನಿಂದ ಬಂದಿದ್ದ ಇನಾಮತಿ ಜಮೀನಿನ ಕಾಗದ ಪತ್ರಗಳನ್ನು ಅಪಾರ ಜತನದಿಂದ ಕಾಪಾಡಿಕೊಳ್ಳುತ್ತಾಳೆ. ಆದಾದ ಕೆಲ ಕಾಲಾನಂತರ ಮೈಸೂರು ಒಡೆಯರ ಮನೆತನದ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಹಾಗೂ ನೀಲಕಂಠರಾಜೇ ಅರಸು ಅವರ ಸಹಾಯ ಹಸ್ತ ದೊರೆತಾಗ ಅದನ್ನು ಆಶ್ರಯಿಸಿ ಮೈಸೂರಿನ ಲಕ್ಷ್ಮೀಪುರಕ್ಕೆ ಬಂದು ನೆಲೆಸುತ್ತಾಳೆ. ತದನಂತರ ತನ್ನ ಮಗನನ್ನು ಬೆಳೆಸಿ, ಮಹಾರಾಣಿ ಲಕ್ಷ್ಮಮ್ಮಣ್ಣಿಯವರಿಂದ ಕೊಡುಗೆಯಾಗಿ ಬಂದ ಲಕ್ಷ್ಮೀಪುರದ ಮನೆಯಲ್ಲಿ ಮಗನ ಸಂಸಾರವನ್ನು ಕಟ್ಟಿನಿಲ್ಲಿಸುವಲ್ಲಿ ಸುಂದ್ರವ್ವನ ಪಾತ್ರ ಪೂರ್ಣಗೊಳ್ಳುತ್ತದೆ. ಸಿಪಾಯಿ ಸೂರಪ್ಪನ ವಂಶವನ್ನು ಸಮರ್ಥವಾಗಿ ರೂಪಿಸಿದ ಈಕೆ ತನ್ನ ಸಂಸ್ಕಾರವನ್ನು ತನ್ನ ಮುಂದಿನ ಪೀಳಿಗೆಗೆ ಬಿಟ್ಟುಹೋದಂಥವಳು.

ಅಂದರೆ ಅವಳ ಪಾತ್ರದ ಈ ಮುಖ್ಯ ಪರಿಕರಗಳನ್ನೆಲ್ಲಾ ಪರಿಶೀಲಿಸಿದ ಬಳಿಕ, ದಲಿತ ವರ್ಗದಲ್ಲಿ ಇಂತಹ ಒಂದು ಅರ್ಥಪೂರ್ಣವಾದ ಪಾತ್ರ ನಿರ್ಮಾಣ ಅನ್ಯರಿಗೆ ಅಸಾಧ್ಯವೆಂಬುದು ಈವರೆಗಿನ ಕನ್ನಡ ಕಾದಂಬರಿ ಸಾಹಿತ್ಯದಿಂದಲೇ ವೇದ್ಯವಾಗುತ್ತದೆ. ಕಾದಂಬರಿಕಾರ ಮನಜ ಅವರ ಅನುಭವದ್ರವ್ಯ ಮತ್ತು ಅಧ್ಯಯನದ ಶಕ್ತಿ ಇವೆರಡೂ ಮೇಳವಿಸಿರುವ ಈ ಕಾದಂಬರಿಯಲ್ಲಿನ ದಲಿತ ಪಾತ್ರಗಳು ಮತ್ತು ಮಹಿಳಾ ಪಾತ್ರಗಳು ಜೀವಂತ ವ್ಯಕ್ತಿಗಳೇ ಆಗಿವೆ.

ತದನಂತರದ ಮಹಿಳಾ ಪಾತ್ರವೆಂದರೆ ಚಿಕ್ಕೂರಪ್ಪನ ಪತ್ನಿ ಮಲ್ಲಿಗಮ್ಮ. ಮಲ್ಲಿಗಮ್ಮನ ಪಾತ್ರ ತನ್ನತನದ ಇನ್ನೊಂದು ವಿಭಿನ್ನ ಮಹಿಳಾ ವ್ಯಕ್ತಿತ್ವವಾಗಿಯೇ ಕಾಣುತ್ತದೆ. ಪ್ರಸ್ತುತ ಕಾದಂಬರಿಯಲ್ಲಿ ನೇರವಾಗಿ ಕಾಣಿಸಿಕೊಳ್ಳುವ ಯಜಮಾನ್ ಸೂರಪ್ಪ ಸಿಪಾಯಿ ಸೂರಪ್ಪನ ಮೊಮ್ಮಗ, ಇವನ ಪತ್ನಿ ಧರಣಿ. ಧರಣವ್ವನನ್ನು ಅತ್ತೆ ಮಲ್ಲಿಗಮ್ಮ ನಡೆಸಿಕೊಳ್ಳುವ ರೀತಿ, ಒಂದು ಹಂತದಲ್ಲಿ ಮಗ ಸೂರಪ್ಪನು ಊರಗೂಳಿಯಂತೆ ಇದ್ದಾಗ ಅವನನ್ನು ನಿಯಂತ್ರಿಸುವತ್ತ ಇವಳ ಕಾರ್ಯಪ್ರವೃತ್ತಿ, ಇವುಗಳೆಲ್ಲ ಅತ್ತೆಯಾಗಿ, ತಾಯಿಯಾಗಿ, ಪತ್ನಿಯಾಗಿ ಈಕೆ ನಿಭಾಯಿಸುವ ರೀತಿಗೂ ಅದರ ಹಿಂದಿನ ಅವಳ ಶಕ್ತಿಗೂ ಬಹುಶಃ ಅತ್ತೆ ಸುಂದ್ರವ್ವನ ಪ್ರಭಾವವೇ ಕಾರಣವಿರಬೇಕು. ಏಕೆಂದರೆ, ಈ ಮನೆತನದಲ್ಲಿ 'ಬದುಕು' ಎಂಬುದೊಂದು ಸಂಕಲ್ಪಭರಿತ ಸ್ಥಾಯೀಭಾವವೇ ಆಗಿರಬೇಕು. ಆ ಬದುಕು ಹಾಗೆ ಮುನ್ನಡೆದು ತದನಂತರದ ಧರಣಿಗೂ ಬಂದಿದೆ. ಆಕೆಯೂ ತನ್ನ ಬದುಕಿನ ಸಂದಿಗ್ಧ ಪರಿಸ್ಥಿತಿಯನ್ನು ತನ್ನ ಅತ್ತೆ, ಅತ್ತೆಯ ಅತ್ತೆಯರಂತೆಯೇ ನಿಭಾಯಿಸುತ್ತಾಳೆ. ಸಿಪಾಯಿ ಸೂರಪ್ಪನ ಮನೆತನದ ಈ ಎರಡು ತಲೆಮಾರಿನ ಈ ಇಬ್ಬರು ಮಹಿಳೆಯರು ತಮ್ಮ ತಲೆಮಾರಿಗೆ ತಕ್ಕ ತಮ್ಮ ಸಂಸಾರದ ಒಗತನವನ್ನು ತೂಗಿಸಿಕೊಂಡು ಹೋಗುವ ಕತೆಯೇ 'ಸೂರಪ್ಪ' ಕಾದಂಬರಿಯ ಚಲನಶಕ್ತಿಯೇ ಆದಂತಹ ಒಂದು ಆಂತರಿಕ ಎಳೆ ಎಂದು ಹೇಳಬಹುದಾಗಿದೆ.

ಸೂರಪ್ಪ ಯಾವುದೋ ಒಂದು ಅನಿರೀಕ್ಷಿತ ಸಂದರ್ಭದಲ್ಲಿ ಗೌರಮ್ಮನನ್ನು ತನ್ನ ಎರಡನೇ ಪತ್ನಿಯನ್ನಾಗಿ ಸ್ವೀಕರಿಸಿದ ಸಂದರ್ಭವು ಧರಣಿಯನ್ನು ತಲ್ಲಣಗೊಳಿಸುತ್ತದೆ. ಬಾಳಸಂಗಾತಿಯಾದ ಪತಿಯನ್ನು ಹಂಚಿಕೊಳ್ಳುವ ಸಂದರ್ಭವನ್ನು ಯಾವ ಹೆಣ್ಣೂ ಸಹಿಸುವುದಿಲ್ಲ. ಅಂತೆಯೇ ತನ್ನ ಮಗಳ ಬಾಳಿಗೆ ಮತ್ತೊಂದು ಹೆಣ್ಣು ಪಾಲುದಾರಳಾಗಿ ಬರುವ ಸಂದರ್ಭವನ್ನೂ ಸಹ ಮಗಳ ತಂದೆ ತಾಯಂದಿರು ಸಹಿಸಲಾರರು. ಸಹಜವಾಗಿಯೇ ಆತಂಕ, ದುಃಖ, ದುಮ್ಮಾನಗಳಿಗೆ ಧರಣಿ ಮತ್ತು ಅವಳ ಹೆತ್ತವರು ಸಿಲುಕಿ ತಮ್ಮದೇ ಆದ ರೀತಿಯ ನಿವಾರಣೆಗೆ ಕೈ ಹಾಕಿ ಸಂಚುಮಾಡುವ ಸಂದರ್ಭ ಕಾದಂಬರಿಯಲ್ಲಿ ಬರುತ್ತದೆ. ಆದರೆ, ಆ ಸಂಚು ಒಂದು ರೀತಿಯಲ್ಲಿ ಕೈಗೂಡದೆ ಹೋಗುತ್ತದೆ. ಗೌರಮ್ಮ ಸೂರಪ್ಪನಿಗೆ ಎರಡನೇ ಹೆಂಡತಿಯಾಗಿ ಬರುವ ಎಪಿಸೋಡ್ ಕಾದಂಬರಿಯಲ್ಲಿ ಒಂದು ಅತ್ಯಂತ ಗಮನಾರ್ಹ ಆಕಸ್ಮಿಕ. ಈ ಆಕಸ್ಮಿಕ ಎಷ್ಟೊಂದು ಸಹಜವಾಗಿದೆಯೆಂದರೆ ಮಾನವ ಬದುಕಿನಲ್ಲಿ ಇಂತಹ ಆಕಸ್ಮಿಕಗಳು, ಅವನ ಬದುಕೇ ಒಂದು ಆಕಸ್ಮಿಕ ಎಂಬಂತಹ ಅರ್ಥ ಪರಂಪರೆಯನ್ನೇ ಈ ಎಪಿಸೋಡ್ ಕಟ್ಟಿಕೊಡುತ್ತದೆ. ಈ ಆಕಸ್ಮಿಕವನ್ನು ಕಾದಂಬರಿಯಲ್ಲಿ ಕಟ್ಟಿರುವ ಕಲಾತ್ಮಕ ರೀತಿ, ಕೇವಲ ಕಾದಂಬರಿಯ ಕಥಾಶಿಲ್ಪದ ಹಿನ್ನೆಲೆಯಲ್ಲಿ ಮಾತ್ರವಲ್ಲದೆ, ಅದರ ಅರ್ಥ ಮತ್ತು ಧ್ವನಿಪರಂಪರೆ ಕಾದಂಬರಿಯ ಆಚೆಗಿನ ಇಡೀ ಮಾನವ ಬದುಕನ್ನೇ ಧ್ವನಿಸುತ್ತದೆ. ಮಗಳಾದ ಧರಣವ್ವನ ಬದುಕಿನಲ್ಲಿ ಉಂಟಾದ ಈ ಆಕಸ್ಮಿಕವನ್ನು ನಿವಾರಿಸುವ ಸಲುವಾಗಿ ಗೌರಮ್ಮನ ಬದುಕನ್ನೇ ಕೊನೆಗಾಣಿಸಲು ಯತ್ನಿಸುವ ಮುಕ್ಕಡಳ್ಳಿ ನಂಜುಂಡಯ್ಯ ಮತ್ತು ಅವನ ಹೆಂಡತಿಯಲ್ಲಿ ಉಂಟಾಗುವ ಆಲೋಚನೆಯೂ ಆಕಸ್ಮಿಕವೇ. ಆ ದುರಾಲೋಚನೆ ತಂತಾನೇ ವಿಫಲವಾಗುವುದೂ ಒಂದು ಆಕಸ್ಮಿಕವೇ. ಧರಣಿ ಮತ್ತು ಅವಳ ತಾಯಿ ತಂದೆಯರು ಒಂದು ಪಾಪಕೃತ್ಯದಿಂದ ಪಾರಾಗುವಂತೆ ನಡೆದುದೂ ಸಹ ಇನ್ನೊಂದು ಧ್ವನಿರಮ್ಯವಾದ ಆಕಸ್ಮಿಕವೇ. ಅತ್ತೆ ಮಲ್ಲಿಗಮ್ಮನ ವ್ಯಕ್ತಿತ್ವ, ಧರಣಿಯ ಮೇಲೆ ಸಾಕಷ್ಟು ಪ್ರಭಾವ ಬೀರಿದೆ. ಧರಣಿ ತನ್ನ ಗಂಡನಿಗೆ ಎರಡನೇ ಪತ್ನಿಯಾಗಿ ಬಂದ ಗೌರಿಯನ್ನು ಕ್ರಮೇಣ ಒಪ್ಪಿಕೊಳ್ಳುತ್ತಾಳೆ. ದ್ವಿಪತ್ನಿತ್ವದ ಸಂಕೀರ್ಣತೆಯನ್ನೂ ಅನಿವಾರ್ಯ ಪರಿಸ್ಥಿತಿಗಳ ನೆಲೆಯಲ್ಲಿ ಲೇಖಕರು ಧರಣಿ ಮತ್ತು ಗೌರಿ ನಡುವಿನ ಸವತಿ ಬದುಕಿನ ಸಂಬಂಧವನ್ನು ಅರ್ಥಪೂರ್ಣವಾಗಿಯೂ ಚರ್ಚಾಸ್ಪದವಾಗಿಯೂ ಚಿತ್ರಿಸುತ್ತಾರೆ. ಕಾಲರಾ ಬೇನೆಗೆ ಸಿಕ್ಕಿ ನರಳಿ ಸತ್ತ ಗೌರಿಗೆ ವಿವಾಹಿತ ಮುತ್ತೈದೆಯೊಬ್ಬಳಿಗೆ ಯಾವ ರೀತಿಯ ಗೌರವದ ಸಂಸ್ಕಾರವನ್ನು ನಡೆಸಲಾಗುತ್ತದೆಯೋ ಅದನ್ನೆಲ್ಲವನ್ನೂ ಆಚರಿಸುತ್ತಾಳೆ. ಗೌರಿಯ ಬಗೆಗೆ ಯಾವುದೇ ಕಪಟ ಅಥವಾ ತಟವಟಗಳನ್ನು ಅರಿಯದ ಸರಳ ಮುತ್ತೈದೆಯಾದ ಧರಣವ್ವ ಗೌರಿ ಬದುಕಿರುವವರೆಗೂ ಅವಳ ಯಾವುದೇ ಸಂಚುಗಳ ಅರಿವಿಲ್ಲದ ಮುಗ್ಧ ಮಾನವೀಯ ಹೆಣ್ಣಾಗಿ ಗೌರಿಯನ್ನು ನಡೆಸಿಕೊಳ್ಳುತ್ತಾಳೆ. ಈ ರೀತಿಯ ಚಿತ್ರಣದಿಂದ ಪಾತ್ರದ ಔನ್ನತ್ಯವನ್ನೂ, ಗ್ರಾಮ್ಯದ ಬದುಕಿನ ಸಹಜ ರೀತಿಯನ್ನೂ ಮನಜ ಅವರು ಏಕಕಾಲದಲ್ಲಿ ಕಟ್ಟಿಕೊಡುತ್ತಾರೆ. ತನ್ನೊಟ್ಟಿಗೆ ತನ್ನ ಮನೆಯಲ್ಲಿಯೇ ಗೌರಿಯನ್ನು ಇರಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನವನ್ನು ಧರಣವ್ವ ಮಾಡುತ್ತಾಳೆ. ಗೌರಿಯ ಬಗೆಗೆ ಪ್ರಾರಂಭದಲ್ಲಿ ತನ್ನೊಳಗಿದ್ದ ಸ್ವಾಭಾವಿಕವಾದ ಅಸಹನೆಯನ್ನು ಕ್ರಮೇಣ ತಾನೇ ನೀಗಿಕೊಳ್ಳುತ್ತಾಳೆ. ಹಾಗೆ ನೋಡಿದರೆ 'ಸೂರಪ್ಪ' ಕಾದಂಬರಿಯಲ್ಲಿ ಇನ್ನೂ ಹತ್ತಾರು ಸ್ತ್ರೀಪಾತ್ರಗಳು ಬರುತ್ತವೆಯಾದರೂ ಧರಣವ್ವ ಮತ್ತು ಗೌರಿಯ ಪಾತ್ರಚಿತ್ರಣ ಮಾತ್ರ ಲೇಖಕರಿಗೆ ಅತ್ಯಂತ ಗಂಭೀರವಾದ ಸವಾಲುಗಳನ್ನೇ ಒಡ್ಡುತ್ತದೆ. ಅಂತ್ಯದಲ್ಲಿ ಕಾದಂಬರಿಕಾರರು ಈ ಎರಡು ಪಾತ್ರಗಳ ದ್ವಂದ್ವವನ್ನು ಸಹಜವಾಗಿಯೇ ಚಿತ್ರಿಸುತ್ತಾ ಕ್ರಮೇಣ ಎರಡೂ ಪಾತ್ರಗಳ ಸವತಿ ಮಾತ್ಸರ್ಯವನ್ನು ಶಮನಗೊಳಿಸುತ್ತಾರೆ. ತದನಂತರ ಪರಿಸ್ಥಿತಿಗೆ ಹೊಂದಿಕೊಳ್ಳುವಂತೆ ಪ್ರೌಢಮನಸ್ಸಿನ ವ್ಯಕ್ತಿತ್ವ ಇಬ್ಬರಲ್ಲೂ ವ್ಯಕ್ತವಾಗುತ್ತದೆ.

ಗೌರಿ ಕಾಲರಾ ಬೇನೆಯಿಂದ ಸತ್ತಾಗ ಸೂರಪ್ಪ ಇರುವುದಿಲ್ಲ. ಧರಣಿ ಗೌರಿಯ

ಮೃತದೇಹವನ್ನು ಅವಳಿದ್ದ ಮನೆಯಿಂದಲೇ ಸಂಸ್ಕಾರಕ್ಕೆ ಸಾಗಿಸಬಹುದಿತ್ತು. ಆದರೆ ಹಾಗೆ ಮಾಡದೆ ಊರಿನ ಯಜಮಾನರೊಡನೆ ವಾದಮಾಡಿ ಕಡೆಗೂ ಅವರನ್ನು ಒಪ್ಪಿಸಿ, ತನ್ನ ಹೊಸ ಮನೆಗೆ ಗೌರಿಯನ್ನು ಸಾಗಿಸಿತಂದು, ತನ್ನ ಮನೆಯಲ್ಲಿರಿಸಿ, ಸಂಪ್ರದಾಯದಂತೆ ಸಂಸ್ಕಾರ ಮಾಡುತ್ತಾಳೆ. ದಿಲ್‌ದಾರ್ ಬಸಣ್ಣನೊಡನೆ ವಾದಕ್ಕೆ ಇಳಿದ ಧರಣವ್ವ ''ಬಸಣ್ಣಾ! ಗೌರಿ ಎಷ್ಟೇ ಆದ್ರೂವೇ ನನ್ ಗಂಡನ್‌ಗೆ ಒಲಿದು ಬಂದಂತಾ ಯೆಣ್ಣು, ಅವಳೂ ಒಂದೆಣ್ಣು, ನಾನೂ ಒಂದೆಣ್ಣು. ಅವಳೇ ಸತ್ರೂವೇ ಅವಳು ಯಜಮಾನ್ ಸೂರಪ್ಪನ ಯೆಡ್ತಿಯೇ, ನಾನೇ ಸತ್ರೂವೇ ನಾನೂ ಯಜಮಾನ್ ಸೂರಪ್ಪನ ಯೆಡ್ತಿಯೇ'' ಎನ್ನುತ್ತಾಳೆ. ಗೌರಮ್ಮ ಕಾಲರಾ ಬೇನೆಯಿಂದ ಸಾವನ್ನಪ್ಪಿದಾಗ ಧರಣವ್ವನು ನಡೆದುಕೊಳ್ಳುವ ರೀತಿ ಅವಳಂತಹ ಧರಣಿತೂಕದ ಒಂದು ಹೆಣ್ಣಿಗೆ ಮಾತ್ರ ಸಾಧ್ಯವೆನಿಸುತ್ತದೆ. ವಾಸ್ತವವಾಗಿ ಗೌರಿಯಂತಹ ಸವತಿ ಸತ್ತ ಸಂದರ್ಭದಲ್ಲಿ ಧರಣವ್ವ ಆಂತರ್ಯದೊಳಗೆ ಸಂಭ್ರಮಿಸಬಹುದಿತ್ತು. ಆದರೆ ಅವಳಲ್ಲಿ ಸವತಿಮಾತ್ಸರ್ಯವೆಂಬುದೇ ಇರಲಿಲ್ಲ. ಮನುಷ್ಯ ಪ್ರೇಮ ಮಾತ್ರ ತುಂಬಿತ್ತು. ತತ್ಪರಿಣಾಮವಾಗಿ ಧರಣವ್ವ ಗೌರಿಗೆ ಬದುಕಿನಲ್ಲಿ ಮಾತ್ರವಲ್ಲದೆ, ಅವಳ ಸಾವಿನ ಸಂದರ್ಭದಲ್ಲೂ ಸೂರಪ್ಪನ ಪತ್ನಿಯ ಸ್ಥಾನವನ್ನು ಕೊಟ್ಟು ಗೌರವಿಸುತ್ತಾಳೆ. ಹೀಗೆ ಈ ಪಾತ್ರ ಸಹಜತೆಯ ಅದ್ಭುತವನ್ನೇ ಸಾಧಿಸುತ್ತದೆ. ಈ ಹಿನ್ನೆಲೆಯಲ್ಲಿ ''ಧರಣವ್ವ ಅಂದ್ರೆ ಧರಣಿಗೆಲ್ಲ ಅವ್ವಾ ಅಂತ್ಲೇ ಅರ್ತ !'' ಎನ್ನುವ ಬಸಣ್ಣನ ಈ ಉದ್ಗಾರ ಅತ್ಯಂತ ಅರ್ಥವತ್ತಾಗಿದೆ. ಧರಣವ್ವನ ಸ್ವಭಾವದಿಂದಾಗಿ ಕೆಲವರು 'ಧರ್ಮವ್ವ' ಎನ್ನುವುದೂ ಉಂಟು. ಆದರೂ 'ಧರಣಿ' ಎಂಬ ನಾಮಪದ ತನಗೆ ತಾನೇ ಸಮೃದ್ಧವಾದ ಅರ್ಥಪರಂಪರೆಯನ್ನೇ ಹೊಂದಿದೆ. ಹಬ್ಬಗಳ ಸಂದರ್ಭಗಳಲ್ಲಿ ಗೌರಿಯನ್ನು ಕರೆದು ಆದರಿಸುವುದು ಧರಣವ್ವನಿಗೆ ಅನಿವಾರ್ಯ. ಆದರೆ ಹಾಗೆ ಮಾಡುವುದರಿಂದ ಸವತಿ ಮತ್ಸರ ಎಂಬ ಆಂತರಿಕ ಶತ್ರುವನ್ನೂ ಶಮನ ಮಾಡುತ್ತಾ ನಡೆಯುವ ಈ ಪಾತ್ರವೇ ಅತ್ಯಂತ ಸಂಕೀರ್ಣವಾದುದು. ಹಿರಿಯರಿಗೆ ಆದರ, ಕಿರಿಯರಿಗೆ ಪ್ರೀತಿ, ಗಂಡನನ್ನು ಅರಿತು ನಡೆವ ಸ್ವಭಾವ. ಅದರಲ್ಲೂ ಲಕ್ಷ್ಮೀಪುರದಲ್ಲಿ ಕಾಲರಾ ಬೇನೆ ತಾಂಡವವಾಡುವಾಗ ಗಂಡ ಮತ್ತು ಲಾವಣಿ ಮರಿಚಾಮಯ್ಯನವರಿಂದ ತಿಳಿದಿದ್ದ ಸಂಜೀವಿನಿ ಬೇರಿನ ಔಷಧದಿಂದ ಜೀವರಕ್ಷಣೆಗೆ ತೊಡಗುವ ಸಂದರ್ಭ – ಇಂಥಲ್ಲೆಲ್ಲಾ ಧರಣವ್ವನ ಪಾತ್ರ ತುಂಬಾ ವಾಸ್ತವವಾಗಿಯೂ ಅತ್ಯಂತ ಪ್ರೌಢವಾಗಿಯೂ ಚಿತ್ರಿತವಾಗಿದೆ.

ಶೂದ್ರಾತಿಶೂದ್ರರಿಗೆ ಮೀಸಲಾತಿ ನೀಡಲೇಬೇಕೆಂಬ ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದ ನೀತಿಗೆ ವಿರುದ್ಧವಾಗಿದ್ದ ಆ ಕಾಲದ ಪುರೋಹಿತವರ್ಗದ ಜನ ತಮ್ಮ ರಾಜಕೀಯ ಕುತಂತ್ರದ ಹಿನ್ನೆಲೆಯಲ್ಲಿ ಮೈಸೂರಿನಲ್ಲಿ ಹಿಂದೂ-ಮುಸ್ಲಿಂ ದಂಗೆ ಉಂಟುಮಾಡಿದ ಷಡ್ಯಂತ್ರವನ್ನು ರೂಪಿಸುವುದರಲ್ಲಿ ತೊಡಗಿದ್ದರೆಂಬುದಾಗಿ ಚರಿತ್ರೆ ಹೇಳುತ್ತದೆ. ಈ ವಿಷಯದಲ್ಲಿ ವಿಚಾರಣೆಗಾಗಿ ಲಕ್ಷ್ಮೀಪುರಕ್ಕೆ ಬರುವ ಪೊಲೀಸ್ ತಂಡವನ್ನು ಎದುರಿಸುವ ಬಗೆಗೆ ಮರಿಚಾಮಯ್ಯನವರೊಡನೆ ಧರಣಿ ಆಡುವ ಮಾತುಗಳೂ ಅವಳ ವ್ಯಕ್ತಿತ್ವದ ದಿಟ್ಟತನವನ್ನು ತೋರಿಸುತ್ತವೆ. ಆದರೆ, ಅದಕ್ಕೆ ಊರೊಟ್ಟಿನ ಸಾಮಾಜಿಕ ಉದ್ದೇಶವಿದೆ. ಮನೆಗೆ ಹಿರಿಯ ಸೊಸೆ ತಾನೆಂಬ ಎಚ್ಚರಿಕೆ ಅವಳ ಸಾಂಸಾರಿಕ ಚಟುವಟಿಕೆಗಳಿಂದಲೂ ಪ್ರಕಟವಾಗುತ್ತದೆ. ಮೈದುನನಾದ ಗಂಗನನ್ನು ಅವನ ಹೆಂಡತಿ ಪಾರೋತಿಯನ್ನು ಹಬ್ಬಗಳಂದು ಮನೆಗೆ ಕರೆದು ಆದರಿಸುವ, ಗಂಗಾಧರನ ಕೊಲೆಯಾದ ಸಂದರ್ಭದಲ್ಲಿ ಅವನ ಸಂಸಾರಕ್ಕೆ ನೈತಿಕ ಬೆಂಬಲವನ್ನು ನೀಡುವ, ಈ ಮುಂತಾದ ಗ್ರಾಮೀಣ ಬದುಕಿನ ನಡೆನುಡಿಗಳು ಧರಣವ್ವನನ್ನು ಒಂದು ಜೀವಸ್ನೇಹಿಯನ್ನಾಗಿಸುತ್ತವೆ. ಒಂದು ತುಂಬು ಸಂಸಾರವನ್ನು ತೂಗಿಸಿಕೊಂಡು ಹೋಗುವ ವ್ಯವಹಾರಜ್ಞಾನ, ಮಾತೃತ್ವ, ದಿಟ್ಟತನ – ಈ ಎಲ್ಲವನ್ನೂ ಒಗ್ಗೂಡಿಸಿಕೊಂಡಿರುವ ಧರಣವ್ವನ ಪಾತ್ರ ಕತೆಯ ಸಂದರ್ಭದ ಅನಿವಾರ್ಯ ಪಾತ್ರವಾಗಿದೆ. ಸೂರಪ್ಪನನ್ನು ಕಾಲರಾ ಬೇನೆ ಆಕ್ರಮಿಸಿದಾಗ ಮತ್ತೆ ಧರಣಿಯ ದಿಟ್ಟ ಮುತ್ತೈದೆತನವೇ ಸೂರಪ್ಪನನ್ನು ಉಳಿಸಿರಬೇಕೆಂಬ ಭಾವಪೂರ್ಣವಾದ ಧರಣವ್ವನ ಪಾತ್ರದ ಪರಾಕಾಷ್ಠೆ ಮಾತ್ರವಲ್ಲದೆ, ಮನುಷ್ಯ ಲೋಕ ದಾಂಪತ್ಯ ಬದುಕಿನ ನಿತ್ಯ ಜೀವಸ್ನೇಹದ ಪರಾಕಾಷ್ಠೆಯೂ ಆಗಿದೆ.

ಧರಣಿ ಮತ್ತು ಸೂರಪ್ಪ, ಇಬ್ಬರೂ ಸೂರ್ಯ ಮತ್ತು ಭೂಮಿ ಒಂದನ್ನೊಂದು ನಿರಂತರ ಆಶ್ರಯಿಸಿರುವ ಸಂಕೇತದಂತೆ. ಊರಿನ ಹಲವು ಜನರ ಬಾಯಲ್ಲಿ 'ಧರಣವ್ವ' 'ಧರ್ಮವ್ವ'ನಾಗುತ್ತಿದ್ದಳೆಂಬುದು ಗ್ರಾಮದ ಜನಜೀವನದೊಳಗಿನ ಒಂದು ನೈತಿಕಸತ್ಯವೇ ಆಗಿದೆ. ಊರ ಯಜಮಾನ ಸೂರಪ್ಪನ ಪತ್ನಿಯಾಗಿ ಊರಿನ ಜನರ ಕಷ್ಟಸುಖಗಳನ್ನು ಹಂಚಿಕೊಳ್ಳುವ ಹಿರಿತನದ ಧರಣವ್ವನ ಪಾತ್ರ ಮನಜ ಅವರ ಸಮಾಜಮುಖೀ ಧೋರಣೆಯನ್ನು ಬಿಂಬಿಸುತ್ತದೆ.

ಕಾಲರಾ ಬೇನೆಗೆ ತುತ್ತಾದ ಮಗುವೊಂದರ ಜೀವವನ್ನು ಸಂಜೀವಿನಿ ಬೇರಿನ ರಸದಿಂದ ಉಳಿಸಿದ ಮತ್ತು ಎಲೆತೋಟದ ಕೆಲಸಗಾರರಿಗೆ ಕಂಚಿನ ಬಿಂದಿಗೆಯ ಕುಡಿವ ನೀರಿನ ವ್ಯವಸ್ಥೆ ಮಾಡಿದ ಧರಣವ್ವನ ಸಮಾಜಮುಖೀ ಚಟುವಟಿಕೆಗಳು, ಜೀವಸ್ನೇಹದ ಆಲೋಚನೆಗಳು ಮೊದಲಾದುವೆಲ್ಲ ತುಂಬಾ ಸ್ವಾಭಾವಿಕವಾಗಿಯೇ ಅವಳ ವ್ಯಕ್ತಿತ್ವದ ಹಿರಿತನವನ್ನು ಕಟ್ಟಿನಡೆಸುತ್ತವೆ.

ಹೀಗೆ ಧರಣವ್ವನು ಸವತಿಯನ್ನು ಸಹಿಸಿಕೊಳ್ಳದೆ, ಅವಳ ಅಂತ್ಯಕ್ಕೆ ಸಂಚುಮಾಡಿ ಸಿದ್ಧಳಾಗಿದ್ದುದು ತನ್ನ ಪತ್ನಿತ್ವದ ಪ್ರಾರಂಭದಲ್ಲಿ. ಆದರೆ ಕ್ರಮೇಣ ಸಿಪಾಯಿ ಸೂರಪ್ಪನ ಮನೆತನದ ಪ್ರಭಾವ ಇವಳ ಮೇಲಾಗುತ್ತಾ ಬಂದಂತೆ ಇವಳ ವ್ಯಕ್ತಿತ್ವ ಬೆಳೆಯುತ್ತಾ ಹೋಗುತ್ತದೆ. ಅತ್ತೆ ಮಲ್ಲಿಗಮ್ಮನ ಪ್ರಭಾವದಿಂದಲೂ ಮನೆತನದ ಹಿರಿಯ ಸೊಸೆ ಎಂಬ ಹಿರಿತನವೆಂಬುದು ಅವಳನ್ನು ಆವರಿಸಿಕೊಂಡು ಊರಿಗೆ ಧರಣವ್ವ 'ಧರ್ಮವ್ವ' ಎನ್ನುವ ಮಟ್ಟಕ್ಕೆ ಈ ಪಾತ್ರ ಬೆಳೆದುನಿಲ್ಲುತ್ತದೆ. ಧರಣವ್ವನ ಪಾತ್ರ ಎಲ್ಲಿಯೂ ಅಸಹಜವೆನಿಸದೆ ಸಹಜವಾದ ರೀತಿಯಲ್ಲಿ ಸಾಗುವುದೊಂದು ವೈಶಿಷ್ಟ್ಯ.

'ಸೂರಪ್ಪ' ಕಾದಂಬರಿಯಲ್ಲಿನ ಇತರ ಸ್ತ್ರೀಪಾತ್ರಗಳು ಕೂಡ ಈ ವಿಷಯದಲ್ಲಿ ಗಮನಾರ್ಹ. ನಿದರ್ಶನಕ್ಕೆ ಹಿರಿಯವ್ವ, ಸಾವಿತ್ರಿ, ದ್ಯಾವಿ, ಸಿದ್ದಗಂಗಪ್ಪನ ಹೆಂಡತಿ ನಿಂಗವ್ವ ಹೀಗೆ ಹಲವಾರು ಸ್ತ್ರೀಪಾತ್ರಗಳು ವೈಶಿಷ್ಟ್ಯಪೂರ್ಣವಾಗಿವೆ. ಆ ಒಂದೊಂದು ಪಾತ್ರವೂ ಒಂದೊಂದು ಸ್ವತಂತ್ರವ್ಯಕ್ತಿತ್ವವನ್ನೇ ಹೊಂದಿವೆ. ಕಾದಂಬರಿಯಲ್ಲಿ ಅನಿವಾರ್ಯವಾದ ಪೂರಕ ಪಾತ್ರಗಳಾಗಿ ಕಾಣಿಸಿಕೊಳ್ಳುತ್ತವೆ. ಇವು ಚಿಂತನೆಗೆ ಅರ್ಹವಾದ ತೂಕದ ಪಾತ್ರಗಳೇ ಆಗಿವೆ. ಉದಾಹರಣೆಗೆ, ಮೈಸೂರು ಅರಮನೆಯ ದಸರಾ ಸಂಗೀತ ಕಾರ್ಯಕ್ರಮಕ್ಕಾಗಿ ಉತ್ತರ ಇಂಡಿಯಾದಿಂದ ಬಂದಂತಹ ಗಾಯಕಿ ಪರ್ವೀನ್ ಬೇಗಂಳ ಪಾತ್ರ ಕಾದಂಬರಿಯಲ್ಲಿ ಹೀಗೆ ಬಂದು ಹಾಗೆ ಹೋಗುವಂತಹುದು. ಆದರೆ ಕಾದಂಬರಿಯ ಒಟ್ಟು ಧ್ವನಿಶಿಲ್ಪದ ಮೇಲೆ ಆ ಪಾತ್ರ ಬೀರುವ ಪರಿಣಾಮ ಮಾತ್ರ ಮರೆಯಲಸಾಧ್ಯ.

ಇನ್ನು ಅದೇ ಧರಣವ್ವನ ಪಾತ್ರಕ್ಕೆ ಸರಿಸಾಟಿಯಾದ ಪಾತ್ರದಂತೆ ಚಿತ್ರಿತಗೊಂಡಿರುವ ಪಾತ್ರ ಗೌರವ್ವನದು. ಹೊರನೋಟಕ್ಕೆ ಇದೊಂದು ವಿಚಿತ್ರ ಪಾತ್ರವಾಗಿ ಕಾಣಿಸುತ್ತದೆ. ಆದರೆ, ಆ ಪಾತ್ರದ ವೈಶಿಷ್ಟ್ಯ ಇರುವುದೇ ಅಲ್ಲಿ. ಹಾಗೆ ನೋಡಿದರೆ ಧರಣವ್ವನ ಪಾತ್ರ ಒಂದು ರೀತಿಯಲ್ಲಿ ಸಂಕೀರ್ಣ ಪಾತ್ರವೆನಿಸಿದರೆ, ಗೌರಮ್ಮನದು ಅದಕ್ಕಿಂತಲೂ ಸಂಕೀರ್ಣವಾದ ಇನ್ನೊಂದು ಪಾತ್ರ.

ಸಮಾಜದಲ್ಲಿ ಮೇಲುವರ್ಗದ ಹೆಣ್ಣಾದ ಗೌರಮ್ಮ ಒಂದು ಅನಿರೀಕ್ಷಿತ ಸಂದರ್ಭದಲ್ಲಿ ಸಿಪಾಯಿ ಸೂರಪ್ಪನ ಮೊಮ್ಮಗನಾದ ಲಕ್ಷ್ಮೀಪುರದ ಯಜಮಾನ್ ಸೂರಪ್ಪನ ಮಡದಿಯಾಗುತ್ತಾಳೆ. ತನ್ನ ಪೂರ್ವಾಶ್ರಮದ ಯಾವ ವಿಚಾರವನ್ನೂ ಸೂರಪ್ಪನಿಗೆ ತಿಳಿಸುವುದಿಲ್ಲ. ಅಂದರೆ ಅವಳ ಪೂರ್ವಾಶ್ರಮದ ವಿವರಗಳು ಅಗತ್ಯವೇ ಇಲ್ಲವೆಂಬಂತಹ ಸಹಜ ಹಾಗೂ ಅನಿವಾರ್ಯತೆಯ ನೆಲೆಗಳಲ್ಲಿ ಲೇಖಕರು ಆ ಪಾತ್ರವನ್ನು ಬೆಳೆಸಿರುವುದೇ ಅದರ ವೈಶಿಷ್ಟ್ಯ. ಗೌರಮ್ಮ ತಾನು ಬದುಕಿರುವವರೆವಿಗೂ ಆ ಗುಟ್ಟನ್ನು ಕಾಪಾಡಿಕೊಳ್ಳುತ್ತಾಳೆ. ದೊಡ್ಡ ಹೊಲಗೇರಿಗೆ ಬರುವ ಈಕೆ ತನ್ನ ಪೂರ್ವದ ವ್ಯಕ್ತಿತ್ವವನ್ನು ಸಂಪೂರ್ಣ ಮರೆತು, ದೊಡ್ಡ ಹೊಲಗೇರಿಯ ರೀತಿರಿವಾಜುಗಳನ್ನು ತನ್ನದಾಗಿಸಿಕೊಳ್ಳುತ್ತಾಳೆ. 'ಗೌರಮ್ಮ', 'ಗೌರವ್ವ', 'ಗೌರಿಚಿಕ್ಕಿ', 'ಗೌರತ್ತೆ' – ಎಂಬ ಈ ರೀತಿಯ ಊರಿನ ಲೋಕಾರೂಢಿಯಲ್ಲಿ ಇಲ್ಲಿಯ ಜನರೊಡನೆ ಬೆರೆಯುತ್ತಾಳೆ. ಇಷ್ಟಾದರೂ ಧರಣಿಯ ಜೊತೆಗೆ ಒಟ್ಟು ಬಾಳ್ವೆಯನ್ನು ನಡೆಸದೆ ತಾನೇ ಸ್ವಂತ ಒಂಟಿಮನೆಯ ಹೆಣ್ಣಾಗಿ ಬಾಳುತ್ತಾಳೆ. ಸೂರಪ್ಪನ ಎರಡನೇ ಪತ್ನಿಯಾಗಿ ಧರಣವ್ವನನ್ನು ಅಕ್ಕನಂತೆ ಕಾಣುತ್ತಿದ್ದರೂ, ಎಲ್ಲೋ ಒಂದು ಕಡೆ ಅವಳ ಮೇಲ್ವರ್ಗದ ಮಡಿವಂತಿಕೆ ಅವಳಲ್ಲಿ ಕಂಡೂ ಕಾಣದ ಹಾಗೆ ಅತ್ಯಂತ ನಿಗೂಢವಾಗಿಯೇ ನಡೆದುಹೋಗುವ ರಹಸ್ಯವನ್ನು ಕಾದಂಬರಿಯು ರಹಸ್ಯವಾಗಿ ಬಿಟ್ಟುಕೊಡುತ್ತದೆ. ಆದರೆ ಈಕೆ ಸೂರಪ್ಪನ ತಮ್ಮ ಗಂಗಾಧರನ ಜೊತೆಗೂಡಿ ತನಗೆ ಬಾಳನ್ನು ಕೊಟ್ಟಿದ್ದ ಗಂಡನಾದ ಸೂರಪ್ಪನ ವಿರುದ್ಧವೇ ಮಸಲತ್ತು ನಡೆಸುವ ಅವಳ ಪಾತ್ರದೊಳಗಿನ ಪಿತೂರಿ ಅಷ್ಟು ಸುಲಭವಾಗಿ ಗೋಚರಿಸದೇ ಹೋಗುತ್ತದೆ. ಇದು ಕೇವಲ ಕಥಾತಂತ್ರವೇ ಆಗಬೇಕಿಲ್ಲ. ಏಕೆಂದರೆ ಅದು ಮಾನವ ಸಹಜವಾದ ದೌರ್ಬಲ್ಯವೂ ಆಗಬಹುದು ಅಥವಾ ಸುಲಭವಾಗಿ ಗೋಚರಿಸದ ನೈಜಭೇದವೂ ಆಗಿರಬಹುದು. ಗೌರಮ್ಮ ಅರಮನೆ ರಾಜಪುರೋಹಿತರಾದ ರಾಮಾಶಾಸ್ತ್ರಿಯ ನಾದಿನಿ ಎನ್ನುವ ವಿಚಾರ ಅವಳ ಸಾವಿನ ನಂತರ ಮಾತ್ರ, ಅದೂ ಪೊಲೀಸ್ ಅಧಿಕಾರಿ ಸುಬ್ಬರಾಯರಿಂದ ಪ್ರಪ್ರಥಮವಾಗಿ ಪ್ರಕಟವಾಗುತ್ತದೆ. ಅಲ್ಲದೆ ಗೌರಮ್ಮನು ಆಗಾಗ ಶ್ರೀರಂಗಪಟ್ಟಣಕ್ಕೆ ಹೋಗಿಬರುತ್ತಿದ್ದುದರ ಹಿಂದಿನ ರಹಸ್ಯವೂ ಈ ಪೊಲೀಸ್ ಅಧಿಕಾರಿಯಿಂದಲೇ ಬೆಳಕಿಗೆ ಬರುತ್ತದೆ. ಆದರೆ ಅದರ ಒಂದು ಸ್ಪಷ್ಟ ಕಾರಣ ಮಾತ್ರ ಗಂಗಾಧರನ ಕೊಲೆಯಲ್ಲಿ ಸೇರಿಕೊಂಡಿರುತ್ತದೆ. ಮೈಸೂರಿನ ದೊಡ್ಡಕೆರೆಯಲ್ಲಿ ಮುಳುಗಿಹೋಗಲಿದ್ದ ರಾಜಪುತ್ರ ಜಯಚಾಮರಾಜ ಒಡೆಯರನ್ನು ಸತ್ಯಪ್ಪ ಕಾಪಾಡಿದ್ದು ಅಂತ್ಯದಲ್ಲಿ ಅಸ್ಪೃಶ್ಯತೆಯ [illegible]



# ಹೊಸಿಲ ದಾಟದಿರು

ನಿದ್ದೆಯೊಳಗೆ ನಗುತ್ತಿದೆ
ಮಗು
ಎಂತಂತ ಕನಸು ಕಂಡಿರಬಹುದು ಅದು
ನಾನು ಹೀಗೆ ಕನಸು ಕಂಡಿರಬಹುದೇ ?
ಮೆಲು ನಕ್ಕಿರಬಹುದೇ ?
ನನಗೆ ಪ್ರಾಯದ ಮುಸುಕು
ಹಾಕಿ ಹೋದವರು ಯಾರು ?
ಬೆಳೆದ ಲೇಪಹಚ್ಚಿದವರು ಯಾರು ?
ಉರುಳುವ ಕಾಲವೇ ?
ಅಥವಾ...
ಸವಾಲಾಗಿ ನಿಲ್ಲುವ
ವಿಶೇಷ ಶಕ್ತಿಯೇ ?
ಉತ್ತರ ಹುಡುಕುತ್ತಾ ಕುಳಿತವಳ
ಕಣ್ಣ ಮುಂದೆ, ಗೋಚರಿಸದೇ
ಕಾಲ ಉರುಳುತ್ತಿದೆ
ಮಗು ಬೆಳೆಯುತ್ತಿದೆ
ತೊಟ್ಟಿಲಿಂದ ಇಳಿದು
ಅಂಬೆಗಾಲಿಕ್ಕಿ
ಹೊಸಿಲಾಚೆಗೂ ಹೊರಟುನಿಂತ ಮಗುವಿಗೆ
ಚೀರಿ ಹೇಳಬೇಕೆನಿಸುತ್ತದೆ
ಹೊಸಿಲ ದಾಟದಿರು
ಮಗುವಾಗಿಯೇ ಉಳಿದುಬಿಡು.

ಸ್ಮಿತಾ ಅಮೃತರಾಜ್ ಸಂಪಾಜೆ
[illegible], ಸುಳ್ಯ - [illegible]

ಪಡೆಯಲುದ್ಯುಕ್ತವಾಯಿತು. ಹೀಗೆ ರಾಜಬಾಲಕನ ಪ್ರಾಣರಕ್ಷಣೆ ಹಾಗೂ ತತ್ಪರಿಣಾಮವಾದ ಅಸ್ಪೃಶ್ಯತೆಯ ಘಟನೆಗೆ ಸಂಬಂಧಿಸಿದಂತೆ ಲಕ್ಷ್ಮೀಪುರದಲ್ಲಿ ಒಂದು ವಿಚಾರಣೆ ಏರ್ಪಾಡಾಗುತ್ತದೆ. ಒಡೆಯರ ಮನೆತನದ ರಾಜಪರಿವಾರವೆಲ್ಲ ಆ ವಿಚಾರಣೆಯಲ್ಲಿ ಭಾಗವಹಿಸುವುದೊಂದು ಗಂಭೀರ ಘಟನೆಯಾಗಿ ಪರಿಣಮಿಸುತ್ತದೆ. ಆ ಸಂದರ್ಭದಲ್ಲಿ ಕಣ್ಮರೆಯಾಗಿ ಹೋಗಿದ್ದ ಮತ್ತು ಸತ್ತೇ ಹೋದಳೆಂದು ಭಾವಿಸಲಾಗಿದ್ದ ಗೌರಿಯು ಆಕಸ್ಮಿಕವಾಗಿ ರಾಜಪುರೋಹಿತ ರಾಮಾಶಾಸ್ತ್ರಿಗಳ ಕಣ್ಣಿಗೆ ಬೀಳುತ್ತಾಳೆ. ಆದರೆ ಗೌರಿ ಲಕ್ಷ್ಮೀಪುರದಲ್ಲಿ ಕಾಣಿಸಿಕೊಂಡದ್ದು ರಾಮಾಶಾಸ್ತ್ರಿಗಳಿಗೆ ಪರಮಾಶ್ಚರ್ಯದ ಘಟನೆಯೇ ಆಗಿಬಿಡುತ್ತದೆ.

ಹೀಗೆ ಗೌರಿಯ ಪಾತ್ರದ ಸುತ್ತಲೂ ಹರಡಿಕೊಳ್ಳುವ ಹಲವಾರು ಘಟನೆಗಳು ಕಾದಂಬರಿಯ ಶಿಲ್ಪವನ್ನು ಭದ್ರಗೊಳಿಸಿದೆ. ಗಂಡನಾದ ಯಜಮಾನ್ ಸೂರಪ್ಪನ ಕೊಲೆಯ ಸಂಚನ್ನು ಅವಳೇ ರೂಪಿಸುವುದಾಗಲಿ, ಗಂಗಾಧರಯ್ಯನ ಕೊಲೆ ಪ್ರಕರಣವಾಗಲಿ, ಹಂದಿಯನ್ನು ಕೊಂದು ಆದಂಖಾನ್ ಮಸೀದಿಯೊಳಗೆ ಬಿಸಾಕಿದ ಘಟನೆಯಾಗಲಿ, ನಾತಾರಾಮನ ಹೆಂಡತಿ ಸೀತೆಯ ಬರ್ಬರ ಹತ್ಯೆಯ ಘಟನೆಯಾಗಲಿ, ಅಥವಾ ಸೂರಪ್ಪನ ಮನೆತನದ ವಿರುದ್ಧ ಪಿತೂರಿ ನಡೆಸುವ ನೀಲಕಂಠಶಾಸ್ತ್ರಿ, ಕೊಪ್ಪಲೂರು ಕೆಂಚೇಗೌಡ, ಶಿವಪುರದ ಮರಿಬಸವಾರಾಧ್ಯ – ಹೀಗೆ ಹಲವಾರು ಗಮನಾರ್ಹ ಪಾತ್ರಗಳು ಗೌರಿಯ ಪಾತ್ರದ ಸುತ್ತಲೂ ಎಷ್ಟರಮಟ್ಟಿಗೆ ಸುತ್ತಿಕೊಂಡಿವೆ ಎಂದರೆ, ಪರಸ್ಪರ ಪರಿಣಾಮಕಾರಿಯಾದ ಆ ಘಟನಾವಳಿಯನ್ನು ಬಿಡಿಸಿ ಬಿಡಿಸಿ ಕಾದಂಬರಿಯನ್ನು ಅರ್ಥಮಾಡಿಕೊಳ್ಳಬೇಕೆಂದರೆ ಸಾಕಷ್ಟು ವ್ಯವಧಾನದ ಓದು ಅತ್ಯವಶ್ಯಕವೆನಿಸುತ್ತದೆ.

ಸೂರಪ್ಪನ ಎರಡನೇ ಹೆಂಡತಿಯಾಗುವ ಪೂರ್ವದಲ್ಲಿ ಗೌರಿಯು ಆತ್ಮಹತ್ಯೆಗೆ ಶರಣಾಗಿದ್ದುದಕ್ಕೆ ಕಾದಂಬರಿ ನೀಡುವ ಕಾರಣ ತನ್ನತಾನೇ ಚಿಂತನಾರ್ಹ ಎಂದೆನಿಸುತ್ತದೆ. ಅಲ್ಲದೆ ಅವಳ ಬದುಕಿನ ಒಂದೊಂದು ಘಟನೆ ಕೂಡ ಅವಳ ಪಾತ್ರವನ್ನು ಒಂದೆಡೆಗೆ ಸಂಕೀರ್ಣಗೊಳಿಸಿದೆ; ಇನ್ನೊಂದೆಡೆ, ನಿಗೂಢ ಪಾತ್ರವೆನಿಸುತ್ತದೆ. ರಾಮಾಶಾಸ್ತ್ರಿ ಮತ್ತು ಅವನ ಗುಂಪು ಈಕೆಯನ್ನು ಸೂರಪ್ಪ ಮತ್ತು ಅವನ ಶ್ರೀರಂಗಪಟ್ಟಣದ ಜಮೀನು ಅಲ್ಲದೇ ಇಡೀ ಲಕ್ಷ್ಮೀಪುರ ಇವೆಲ್ಲದರ ವಿರುದ್ಧ ತಮ್ಮ ಸ್ವಾರ್ಥ ಸಾಧನೆಗೆ ಒಂದು ದಾಳದ ಕಾಯಿಯಂತೆ ಬಳಸುತ್ತಾರೆ. ಗಂಗಾಧರನೊಡನೆ ನಡೆಯುವ ಅವಳ ಪ್ರೇಮ ನಿಜವಾದ ಪ್ರೇಮವೇ ಅಥವಾ ಅದೊಂದು ಪಿತೂರಿಯೇ ಎಂಬ ಪ್ರಶ್ನೆ ಕೂಡ ಉದ್ಭವವಾಗುತ್ತದೆ. ಆದರೆ ಗೌರಿಯ ಪಾತ್ರದ ಬಗೆಗೆ ಕಾದಂಬರಿಯಲ್ಲಿ ನಿರ್ಮಾಣವಾಗುವ ದ್ವಂದ್ವ ಅತ್ಯಂತ ಮುಖ್ಯವಾದುದು. ಏಕೆಂದರೆ ಸೂರಪ್ಪನ ಜೊತೆಗಿನ ಅವಳ ಪತಿನಿಷ್ಠೆ ಊರೊಳಗೆ ಪ್ರಶ್ನಾತೀತ. ಆದರೆ ಅವಳ ಪತಿನಿಷ್ಠೆ ಕ್ರಮೇಣ ಪತನವಾಗುತ್ತಾ ನಡೆಯುತ್ತದೆ. ಅವಳ ಈ ಸ್ಥಿತಿಗೆ ಅವಳ ವಂಶದ ಪೂರ್ವದವರು ಕಾರಣವೇ ಅಥವಾ ಸ್ವತಃ ಸೂರಪ್ಪನ ಮನೆತನದ ಆಂತರಿಕ ವಿರಸಗಳೇನಾದರೂ ಕಾರಣವೇ ಎಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಆದರೆ ಇವೆಲ್ಲ ಸೇರಿ ಗೌರಿಪಾತ್ರದ ಸಹಜತೆಯ ಕಡೆಗೆ ಓದುಗನನ್ನು ಸೆಳೆದುಕೊಳ್ಳುತ್ತದೆ.

ಗೌರಮ್ಮನ ಪಾತ್ರದ ಸಹಜ ಸಂಕೀರ್ಣತೆಯನ್ನು ಧ್ವನಿಸುವ ಮತ್ತೊಂದು ಸನ್ನಿವೇಶ ಕಾದಂಬರಿಯಲ್ಲಿದೆ. ಅದು ಗೌರಿ ಇದ್ದಕ್ಕಿದ್ದಂತೆ ಕ್ರೈಸ್ತಧರ್ಮಕ್ಕೆ ಮತಾಂತರಗೊಳ್ಳುವ ತೀರ್ಮಾನ. ಆ ಸಂಗತಿ ಸೂರಪ್ಪನವರ ಮನೆಗೆ ಕ್ರೈಸ್ತಪಾದ್ರಿ ಮತ್ತು ಕ್ರೈಸ್ತ ಸನ್ಯಾಸಿನಿಯರಿಂದಲೇ ತಿಳಿದು ಬಂದು, ತದನಂತರ ಎಲ್ಲರ ಸಮಕ್ಷಮದಲ್ಲಿ ಆ ವಿಷಯ ಚರ್ಚೆಗೆ ತೆರೆದುಕೊಂಡಾಗ ಮತಾಂತರ ತನ್ನ ಮನೆತನಕ್ಕೆ ಹೊಸದೇನಲ್ಲ ಎಂಬ ಸಂಗತಿಯನ್ನು ಗೌರಿ ಬೆಳಕಿಗೆ ತರುತ್ತಾಳೆ. ಅಂದರೆ ಮತಾಂತರದಂತಹ ಈ ವಿಷಯ 'ಸೂರಪ್ಪ' ಕಾದಂಬರಿಯಲ್ಲಿ ಪಡೆದಿರುವ ಸ್ಥಾನವೇ ಅತ್ಯಂತ ಗಂಭೀರವಾದುದು. ಅಲ್ಲದೆ, ಕಾರಂತರ 'ಚೋಮನ ದುಡಿ'ಯಲ್ಲಿನ ಮತಾಂತರದ ಸನ್ನಿವೇಶಕ್ಕೂ ಮನಜ ಅವರ 'ಸೂರಪ್ಪ' ಕಾದಂಬರಿಯಲ್ಲಿನ ಅದೇ ಮತಾಂತರ ಸನ್ನಿವೇಶಕ್ಕೂ ಇರುವ ಅಂತರ ಗಮನಾರ್ಹವಾದುದು. ಏಕೆಂದರೆ ಕಾರಂತರಾಗಲಿ, ಕುವೆಂಪು ಆಗಲಿ ದಲಿತರ ಮತಾಂತರವನ್ನು ಬಲವಂತ ಮತ್ತು ಆಮಿಷಗಳ ಹಿನ್ನೆಲೆಯಲ್ಲಿ ನೋಡುತ್ತಾರೆ. ಅದು ಅವರಿಗೆ ಸಹಜವೂ ಹೌದು. ಆದರೆ ಮನಜ ಅವರು ಕಟ್ಟಿಕೊಡುವ ಮತಾಂತರ ವಿಷಯ ಸಂಪೂರ್ಣವಾಗಿ ಭಿನ್ನವಾದುದೆಂಬುದೇ ಇಲ್ಲಿ ಪ್ರತ್ಯೇಕವಾಗಿ ದಾಖಲಿಸಬೇಕಾಗಿರುವ ಅಂಶ.

ಹೀಗೆ ಈ ಕಾದಂಬರಿ ಒಂದು ಮನೆತನದ ಮೂರು ತಲೆಮಾರಿನ ಕತೆಯನ್ನು ಹೇಳುವ ಸಂದರ್ಭದಲ್ಲಿ ಬರುವ ಹಲವು ಸ್ತ್ರೀಪಾತ್ರಗಳು ಹೇಗೆ ಬದುಕನ್ನು ಕಟ್ಟಿನಿಲ್ಲಿಸುತ್ತವೆ, ಬದುಕನ್ನು ಹೇಗೆ ಮೂರಾಬಟ್ಟೆಯನ್ನೂ ಆಗಿಸಬಲ್ಲವೆಂಬ ನಿತ್ಯಸತ್ಯವನ್ನು ನಾವಿಲ್ಲಿ ಕಾಣುತ್ತೇವೆ.

ಡಾ॥ ಎಂ. ಲೀಲಾವತಿ
ಪ್ರಾಂಶುಪಾಲರು, ನ್ಯಾಷನಲ್ ಕಾಲೇಜ್, ಬಸವನಗುಡಿ
ಬೆಂಗಳೂರು - ೫೬೦ ೦೦೪



ನೊಬೆಲ್ ಪ್ರಶಸ್ತಿ ವಿಜೇತನಾದ ಎರ್‌ವಿನ್ ಷ್ರೋಡಿಂಗರ್‌ರ (*Erwin Schroedinger 1887-1961) Science Theory and Man* ಎಂಬ ಆಂಗ್ಲ ಕೃತಿಯಲ್ಲಿ ಬಂದಿರುವ ಈ ಲೇಖನವು, ವಿಜ್ಞಾನವು ಕಲೆಯಂತೆ ಪುರುಷತಂತ್ರವಲ್ಲ, ವಸ್ತುತಂತ್ರವಾದುದು – ಎಂಬ ಲೋಕಪ್ರಸಿದ್ಧ ಪ್ರತೀತಿಯನ್ನು ಅಲ್ಲಗಳೆಯುವ ವಿಸ್ಮಯಾವಹ ಬರಹ. ಆಸ್ಟ್ರಿಯ ದೇಶದಲ್ಲಿ ಜನಿಸಿದ ಈ ವಿಜ್ಞಾನಿ, ಸ್ಟುಟ್‌ಗಾರ್ಟ್, ಬರ್ಲಿನ್ ಮುಂತಾದ ವಿಶ್ವವಿದ್ಯಾಲಯಗಳಲ್ಲಿ ಭೌತಶಾಸ್ತ್ರವನ್ನು ಬೋಧಿಸಿದರು. ೧೯೩೩ರಲ್ಲಿ ಪಾಲ್ ಡಿರಾಕ್‌ರೊಂದಿಗೆ ನೊಬೆಲ್ ಪ್ರಶಸ್ತಿ ಸಹಭಾಗಿಗಳಾದರು.


ಮೂಲ

**ಎರ್‌ವಿನ್ ಸಿ. ಷ್ರೋಡಿಂಗರ್**


# ವಿಜ್ಞಾನವು ಕಾಲಿಕವಾದ ಒಂದು ಫ್ಯಾಷನ್ ಆಗಿದೆಯೋ ?

**ಪ್ರಶ್ನೆ:** ಝೋಲಾ ಹೇಳಿದ ಪ್ರಸಿದ್ಧ ಸೂಕ್ತಿಯೊಂದಿದೆ – ಪ್ರಕೃತಿಯನ್ನು ಒಂದು ಚಿತ್ತಸ್ಥಿತಿಯ ದ್ವಾರಾ ನೋಡುವುದೇ ಕಲೆಯೆಂಬುದಾಗಿ. ವಿಜ್ಞಾನದ ಬಗೆಗೂ ಇದೇ ಮಾತನ್ನೇ ಹೇಳಬಹುದೇ? ಈ ಪ್ರಶ್ನೆಯು ಮುಖ್ಯವಾದುದು. ಏಕೆಂದರೆ, ವಿಜ್ಞಾನದ ಹೆಸರಿನಲ್ಲಿ ಈಗಿನ ಕಾಲದಲ್ಲಿ ಪದೇ ಪದೇ ಮಂಡಿಸಲಾಗುತ್ತಿರುವ ಮೂಲಭೂತವಾದ ವಾದವೊಂದರ ಮೇಲೆ ಇದರ ಪರಿಣಾಮವಿದೆ. ವಿಜ್ಞಾನವು ಚಿತ್ರಕಲೆ-ಸಾಹಿತ್ಯ-ಸಂಗೀತಗಳಂತಲ್ಲ. ಅವು ವಸ್ತುಸ್ಥಿತಿಯನ್ನು ಪುರುಷತಂತ್ರವಾಗಿ ಅರಿಯುವ ಬಗೆಗಳು. ಎಂದೇ ಸಾಂಸ್ಕೃತಿಕ ಪರಿಸರವು ಬದಲಾದಂತೆ ಬದಲಾಗುವ ಶಕ್ಯತೆಯುಳ್ಳವುಗಳು, ಅವುಗಳು. ಆದರೆ ವಿಜ್ಞಾನವು ಎಂತಹ ಸತ್ಯಸ್ತೋಮವನ್ನು ನಮಗೆ ಕೊಡಮಾಡುವಂತಹುದೆಂದರೆ, ಮನುಷ್ಯನ ಮನಃಸ್ಥಿತಿಯ ಮೂಸೆಯಿಂದ ಅದು ಆಕಾರವನ್ನು ತಳೆದಿರುವಂತಹುದಲ್ಲ. ಎಂದೇ ಅದು ವಸ್ತುತಂತ್ರವಾದುದು ಹಾಗೂ ದೃಢವಾದುದು. ಹೀಗಿದೆ ಈ ವಾದ. ಇದು ಎಷ್ಟರಮಟ್ಟಿಗೆ ಸತ್ಯವಾದುದು ?

**ವಿಜ್ಞಾನ : ಎರಡು ಬಗೆಗಳು**

ಈ ಪ್ರಶ್ನೆಯನ್ನು ನೇರಾಗಿ ಉತ್ತರಿಸುವ ಮುಂಚೆ, ವಿಜ್ಞಾನದ ಎರಡು ಗುಂಪುಗಳ ನಡುವೆ ಒಂದು ಭೇದವನ್ನು ತೋರಿಸಬೇಕಾಗಿದೆ. ''ಖಚಿತವಾದ ವಿಜ್ಞಾನ''ಗಳೆಂದು ಹೇಳಲು ಬರುವಂತಹವು ಒಂದು ಕಡೆ; ಮನುಷ್ಯನ ಚೈತನ್ಯವನ್ನೂ ಅದರ ಕಾರ್ಯಗಳನ್ನೂ ಕುರಿತಾಗಿ ಹೇಳುವಂತಹವು ಎರಡನೆಯ ಕಡೆ. ಇತಿಹಾಸ, ಸಮಾಜಶಾಸ್ತ್ರ ಮನೋವಿಜ್ಞಾನ ಮುಂತಾದುವು ಈ ಎರಡನೆಯ ಗುಂಪಿಗೆ ಸೇರಿರತಕ್ಕವು.

**ಇತಿಹಾಸಾದಿಗಳು ಪೂರ್ಣವಾಗಿ ವಸ್ತುನಿಷ್ಠವಲ್ಲ**

ಈ ಮಾನವಿಕ ವಿಜ್ಞಾನಗಳು ಯಾವ ಸತ್ಯಸಮೂಹವನ್ನು ಮುಂದಿಡುವವೋ, ಅವು ಸಂಪೂರ್ಣವಾಗಿ ವಸ್ತುತಂತ್ರವೆಂಬುದಾಗಿ ಘೋಷಿಸಿಕೊಳ್ಳಲಾರವು – ಎಂಬುದು ಸ್ಫುಟವಾಗಿದೆ, ಎಂದು ನಾನು ಭಾವಿಸುತ್ತೇನೆ. ಉದಾಹರಣೆಗಾಗಿ, ಇತಿಹಾಸವನ್ನು ತೆಗೆದುಕೊಳ್ಳೋಣ. ತಾನು ಚಿತ್ರಿಸುವ ಘಟನೆಗಳ ವಾಸ್ತವಿಕ ಸತ್ಯವನ್ನೇ ಇತಿಹಾಸಕಾರನು ನಿರೂಪಿಸಬೇಕು – ಎಂಬುದಾಗಿ ನಾವು ಆಗ್ರಹಪಡುತ್ತೇವೆ, ಸರಿಯೆ. ಆದರೂ 'ಘಟನಾವಳಿಗಳ ಉಲ್ಲೇಖವನ್ನಷ್ಟೇ ಮಾಡುವವನಾಗಬಾರದು, ಇತಿಹಾಸಕಾರ; ಇನ್ನೂ ಏನೋ ಆಧಿಕ್ಯವಿರಬೇಕು' – ಎಂದಾಗಬೇಕಿದ್ದಲ್ಲಿ, ನೀರಸವಾದ ಘಟಿತಗಳ ಶೋಧ ಹಾಗೂ ಕಥಾನಕವೆಂಬಷ್ಟಕ್ಕಿಂತಲೂ ಅದು ಹೆಚ್ಚಾದದ್ದಾಗಿರಬೇಕು. ಆದುದರಿಂದ, ತನಗೆ ಲಭ್ಯವಾದ 'ಕಚ್ಚಾಮಾಲು' ಏನುಂಟೋ ಅದರೊಳಗಿಂದ ಆತನು ಮಾಡತಕ್ಕ ಆಯ್ಕೆ; ಅದನ್ನು ಆತನು ರೂಪಿಸಿಕೊಳ್ಳುವ ಬಗೆ; ಹಾಗೂ ಅದನ್ನೂ ಕೊನೆಯಲ್ಲಿ ಆತನು ನ್ಯಸಿಸುವ ಪರಿ – ಇವೆಲ್ಲವೂ ಆತನ ಒಟ್ಟಾರೆ ವ್ಯಕ್ತಿತ್ವದಿಂದ ಅವಶ್ಯವಾಗಿಯೂ ಪ್ರಭಾವಿತವಾಗಿರುವುದೇ ಸರಿ. ತಾನು ಯಾವ ವಿಷಯವನ್ನು ಅಧಿಕರಿಸುತ್ತಿದ್ದಾನೋ ಆ ಬಗ್ಗೆ ಐತಿಹಾಸಿಕದಿಂದ ಆಗುವ ಈ ಸ್ವಕೀಯವಾದಂತಹ 'ದುಷ್ಪ್ರವೇಶ' (ಹಸ್ತಕ್ಷೇಪ)ವನ್ನು ನಾವು ಸಂತೋಷದಿಂದ ಕ್ಷಮಿಸಿಯೇವು; ಅದು ಹೀಗಿದ್ದಾಗ: ಗಟ್ಟಿಯಾದ ವ್ಯಕ್ತಿತ್ವವುಳ್ಳವನ ಸ್ಪರ್ಶದಲ್ಲಿರಬೇಕು; ಇತಿಹಾಸದ ಬರಡಾದ ಘಟನೆಗಳನ್ನು ಒಂದು ಆಕರ್ಷಕವಾದ ಮಾನವೀಯವಾದ ನಮೂನೆಯೊಂದನ್ನು ಆತನು ನಮಗಾಗಿ ಹೆಣೆದಿಟ್ಟಿರಬೇಕು. ವಸ್ತುತಃ ವೈಜ್ಞಾನಿಕವಾದ ಇತಿಹಾಸವು ಆರಂಭವಾಗುವುದೆಂದರೆ ಇಲ್ಲಿಯೇ – ಜಾಗರೂಕನಾಗಿ ಇತಿಹಾಸಘಟಿತಗಳನ್ನು ಮಾತ್ರ ಗುರುತುಹಾಕಿಡುವವನ ಕಾರ್ಯವಾದರೂ ಇಂತಹ ಕಾರ್ಯಕ್ಕೆ ಕಚ್ಚಾ ಪದಾರ್ಥವನ್ನು ಒದಗಿಸುವುದಷ್ಟೇ ಆಗಿರತಕ್ಕುದು.

ಮಾನವಜೀವನವನ್ನೂ ನಡತೆಯನ್ನೂ ಅಧಿಕರಿಸುವ ಎಲ್ಲಾ ವಿಜ್ಞಾನಗಳ ಬಗೆಗೂ ಈ ತೆರನಾದ ಮಾತುಗಳು ಅನ್ವಯಿಸುವುವೇ. ಕ್ಷೇತ್ರಗಳು ಯಾವುವೇ ಇರಲಿ, ಮಾನವ ಪ್ರಕೃತಿಯ ಪ್ರಭಾವಶಾಲಿಯಾದ ಅಚ್ಚು ಅವೆಲ್ಲವುಗಳಲ್ಲಿಯ ಸತ್ಯಗಳ ನಿರೂಪಣೆಯ ಮೇಲೆ ಅವಶ್ಯವಾಗಿಯೂ ತೋರಬೇಕಾದುದೇ. ಈ ವಿಜ್ಞಾನಗಳ ಕಾರ್ಯಪರಿಪಾಟಿಯಲ್ಲಿ ಎಷ್ಟೆಷ್ಟು ಶಕ್ಯವೋ ಅಷ್ಟಷ್ಟೂ ವಸ್ತುನಿಷ್ಠತೆಯನ್ನು ಉಳಿಸಿಕೊಂಡಿರಬೇಕೆಂಬ ಆದರ್ಶವೇನೋ ಸದಾ ಇದ್ದೇ ಇದೆ. ಈ ಕ್ಷೇತ್ರದಲ್ಲಿಯ ಕೃಷಿಯು ವೈಜ್ಞಾನಿಕವೆಂದೋ ಅಲ್ಲವೆಂದೋ ಪರಿಗಣಿತವಾಗುವುದು ಯಾವುದನ್ನು ಅವಲಂಬಿಸುವುದೆಂದರೆ, ವಸ್ತುನಿಷ್ಠತೆಯ ಈ ಆದರ್ಶಕ್ಕೆ ಅದು ಎಷ್ಟರಮಟ್ಟಿಗೆ ಹೊಂದುವುದು, ಅಥವಾ ಅಲ್ಲಿಂದ ಜಾರುವುದು – ಎಂಬ ಲೆಕ್ಕದ ಮೇರೆಗೆ. ಹೀಗಿದ್ದೂ, ಕಲಾತ್ಮಕವಾದ ಅಂಶವೆಂಬುದಿಲ್ಲವಾದ ಯಾವುದೇ ಮಾನವೀಯ ವಿಜ್ಞಾನಗಳೂ ಇರಲಾರವು. ಇದು ಅವಲ್ಲಿ ಎಷ್ಟೆಷ್ಟು ಉಂಟೋ, ಅಷ್ಟಷ್ಟೂ ಅವು ಝೋಲಾ ಇತ್ತ ವರ್ಣನೆಗೆ ಒಳಪಡುವುವು. ಯಾವ ವಿಷಯವನ್ನು ಅವು ಹೇಳಹೊರಡುವವೋ ಅವು ಈ ರೀತಿ ಚಿತ್ತವೃತ್ತಿಯ ದ್ವಾರಾ ಬರತಕ್ಕವೇ ಆಗಿರುವುವು.

**'ನಿಖರ' ವಿಜ್ಞಾನಗಳ ಬಗೆ**

'ಖಚಿತ' ವಿಜ್ಞಾನಗಳ ಕಡೆಗೆ ಈಗ ತಿರುಗೋಣ. ಈ ವಿಜ್ಞಾನಗಳಲ್ಲಿ ಅನುಸರಿಸುವ ಕಾರ್ಯವೈಖರಿಯಂತೆ, 'ಪುರುಷನಿಷ್ಠವಾದುದೆಲ್ಲವನ್ನೂ ಪರಿತ್ಯಜಿಸತಕ್ಕದು' – ಎನ್ನುವ ತತ್ತ್ವವುಂಟು. ಭೌತಿಕವಿಜ್ಞಾನವು ಸಾರಭೂತವಾಗಿ ಈ

ಗುಂಪಿಗೇ ಸೇರತಕ್ಕುದು. ಸಂಶೋಧಕನ ತನ್ನತನದ ನುಗ್ಗುವಿಕೆಯನ್ನು ಈ ಎಲ್ಲ ಭೌತಿಕಸಂಶೋಧನೆಗಳಿಂದ ಕಟ್ಟುನಿಟ್ಟಾಗಿ ದೂರ ಮಾಡಲಾಗುತ್ತದೆ – ಇದರಿಂದಾಗಿ ಜಡಪ್ರಕೃತಿಯನ್ನು ಕುರಿತಾದ ವಸ್ತುನಿಷ್ಠತ್ವವು ಮಾತ್ರವೇ ಸಾಧಿಸಲ್ಪಡಲಾಗಲೆಂಬ ಕಾರಣದಿಂದಾಗಿ. ಈ ಸತ್ಯವನ್ನು ಕೊನೆಗೊಮ್ಮೆ ಘೋಷಿಸಿದ ಬಳಿಕ, ಇಡೀ ಜಗತ್ತಿನಲ್ಲಿ ಯಾರೇ ಆದರೂ ಪ್ರಯೋಗದ ಪರೀಕ್ಷೆಗೆ ಅದನ್ನು ಒಳಪಡಿಸಬಹುದು; ಮತ್ತು ಸರ್ವದಾ ಅದೇ ಫಲಿತವೇ ಬರುವುದು. ಈ ಪರ್ಯಂತ ಭೌತಶಾಸ್ತ್ರವು ಮಾನುಷ ಮನೋವೃತ್ತಿಗೆ ಅನಧೀನವಾದುದು. ಅದು ಉಪಾದೇಯವೆಂಬುದರ ಘೋಷಣೆಗೆ ಇದುವೇ ಪ್ರಧಾನಾಧಾರವೆಂದು ಹೇಳಲಾಗುತ್ತದೆ. ಭೌತಶಾಸ್ತ್ರದ ಕೆಲವು ಧುರೀಣರು ಎಷ್ಟು ದೂರ ಹೋಗುವರೆಂದರೆ, ಭೌತಿಕ ಸಂಶೋಧನೆಯ ಸಿದ್ಧಾಂತಗಳಿಂದ ವ್ಯಕ್ತಿಯ ಮನಃಸ್ಥಿತಿಯನ್ನು ದೂರವಿಡಬೇಕೆನ್ನುವುದಷ್ಟೇ ಅಲ್ಲ; ಮಾನುಷಾಂಶವೆಂಬುದನ್ನೇ ಸಮಗ್ರವಾಗಿ ಪರಿವರ್ಜಿಸಬೇಕೆನ್ನುವಷ್ಟರಮಟ್ಟಿಗೆ ಸಂಭಾವಿಸುತ್ತಾರೆ. ಮಾನುಷಾಕೃತಿ ಶಾಲಿತೆಯ ಪ್ರತಿ ಸ್ತರವನ್ನೂ ವಿವರ್ಜ್ಯವಾಗಿಸಲಾಗುತ್ತದೆ. ವಿಜ್ಞಾನದ ಇದೊಂದು ಕ್ಷೇತ್ರದಲ್ಲಾದರೂ ಗ್ರೀಕರ ಸೋಫಿಸ್ಟರು ಹೇಳುತ್ತಿದ್ದ 'ಸರ್ವವಸ್ತುಮಾತಾರ (ಅಳೆಯುವವ)ನೂ ಮಾನವನು' ಎನ್ನುವುದು ಇನ್ನು ಮುಂದಾದರೂ ಆಗಿರಬಾರದೆಂಬ ಉದ್ದೇಶದಿಂದ.

**ವಸ್ತುನಿಷ್ಠ ವಿಜ್ಞಾನದ ಹಿರಿಮೆ**

ಇಂತಹ ಹೇಳಿಕೆಯು ಸಂಪೂರ್ಣವಾಗಿ ಸತ್ಯವಾಗಿರುವುದೇ ? ಬೇರಾವುದೇ ವಿಜ್ಞಾನಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಇದಿಲ್ಲಿ ಸತ್ಯ. ಆದರೆ ಇದು ತೀರಾ ದೂರ ಹೋಗುತ್ತದೆ ಎಂಬುದಾಗಿ ನನಗೆ ತೋರುತ್ತದೆ. ಭೌತಿಕ ಪ್ರಯೋಗವೊಂದು – ಸರಳೋದಾಹರಣೆಗೆ ಹೇಳುವುದಾದರೆ, ನಕ್ಷತ್ರಗಳ ಎಣಿಕೆಯೆಂಬುದು – ನ್ಯೂಯಾರ್ಕಿನಲ್ಲಿ ವಿಲ್‌ಸನ್ ಎಂಬುವನು ಮಾಡಿದರಾಗಲಿ, ಬರ್ಲಿನ್ನಿನಲ್ಲಿ ಫ್ರೌಲೀಸ್ ಮ್ಯುಲ್ಲರ್ ಎಂಬುವಳು ಮಾಡಿದರಾಗಲಿ ಮಾಡಿದವರಾರೆಂಬ ಪ್ರಶ್ನೆಯನ್ನು ಅವಲಂಬಿಸುವುದಲ್ಲ – ಎಂಬುದನ್ನು ಯಾವ ಅಭ್ಯಂತರವಿಲ್ಲದೆ ಒಪ್ಪಬಹುದು. ಫಲವು ಸದಾ ಒಂದೇ – ಅಂದರೆ, ಪ್ರಯೋಗಕ್ಕೆ ಬೇಕೆನಿಸತಕ್ಕ ಶಾಸ್ತ್ರೀಯ ನಿಬಂಧನೆಗಳನ್ನೆಲ್ಲ ಅನುಸರಿಸುವುದಾಗಿದ್ದಲ್ಲಿ.

ಭೌತಶಾಸ್ತ್ರದಲ್ಲಿಯ ಎಲ್ಲಾ ಪ್ರತಿಷ್ಠಿತ ಪ್ರಯೋಗಗಳಿಗೂ ಇದು ಅನ್ವಿತವಾಗುವುದೇ. ಯಾವುದೇ ಪ್ರಯೋಗದ ಸಾಗುವಿಕೆಯಿರಲಿ, ಭೌತಿಕಸಂಶೋಧನೆಯ ಕ್ರಮಬದ್ಧ ವಿಧಾನವೆಂಬುದರೊಳಗೆ ಅದಕ್ಕೆ ಪ್ರವೇಶವಾಗುವ ಮುನ್ನ ನಾವು ಕಡ್ಡಾಯವಾಗಿ ನೋಡುವ ಅಪರಿಹರಣೀಯವಾದ ಪ್ರಥಮ ನಿಬಂಧನೆ ಎಂದರೆ ಇದುವೆ: ಅದು ಅವ್ಯಭಿಚಾರಿಯಾಗಿ ಅದದೇ ಫಲಿತಗಳನ್ನೇ ಉಂಟುಮಾಡುವುದೆಂಬುದು. ಈ ನಿಬಂಧನೆಯನ್ನು ಅದು ಅನುಸರಿಸದಾದಲ್ಲಿ ಯಾವುದೇ ಪ್ರಯೋಗವನ್ನು ನಾವು ವೈಜ್ಞಾನಿಕವಾದ ತಪಾಸಣೆಗಾಗಲಿ ಅಂಗೀಕಾರಕ್ಕಾಗಲಿ ಅರ್ಹವೆಂದು ಭಾವಿಸೆವು. ಈ ರೀತಿಯಲ್ಲಿ ಪುನರ್‌ವಿಧೇಯ ಪ್ರಯೋಗಗಳಿಂದ ಬಂದ ಒಂದೊಂದೂ ಫಲಿತಗಳ ಮಹತ್ತಾದ ರಾಶಿಯಿಂದಲೇ ಭೌತಿಕಶಾಸ್ತ್ರದ ನೆಯ್ಗೆಯನ್ನು ಹೆಣೆದಿರುವುದು. ಮುಂದು ಮುಂದಿನ ವೈಜ್ಞಾನಿಕ ಪ್ರಗತಿಗೆ 'ಕಚ್ಚಾ ಪದಾರ್ಥ'ವಾಗಿ ಬಳಸಲು ಇಂತಹ ಪ್ರತಿಷ್ಠಿತ ಫಲಿತಾಂಶಗಳು ಮಾತ್ರವೇ ಅನುಮತವಾಗಿರುವುದು. ಅಂತೂ ನಿಷ್ಕೃಷ್ಟ ಪ್ರಯೋಗ ವೊಂದಲ್ಲದೆ ಮತ್ತಾವುದೇ ಜ್ಞಾನಾಕರವನ್ನೂ ಇಲ್ಲಿ ಸೇರಿಸದಾದ ಕಾರಣ, ಸರ್ವಥಾ ವಸ್ತುತಂತ್ರವಾದ ಸತ್ಯಕ್ಕೆ ಅಧಿಕೃತವಾಹಕವು ತಾನೆಂಬುದಾಗಿ ತನ್ನ ಘೋಷಣೆಯನ್ನು ಮುಂದಿಡಲು ಭೌತಿಕಶಾಸ್ತ್ರವು ಸಂಪೂರ್ಣವಾಗಿಯೂ ತನ್ನ ಹಕ್ಕುಗಳ ಮಿತಿಯೊಳಗೆ ಇರುವುದಾಗಿ ಮೊದಲ ನೋಟಕ್ಕೆ ತೋರುವುದಷ್ಟೆ. ಆದರೆ ಈ ಘೋಷಣೆಯನ್ನು ತೂಗಿನೋಡುವಾಗ ಬೇರೆ ಕೆಲವು ಲೆಕ್ಕಾಚಾರಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾದುದು ಅವಶ್ಯವಾಗುತ್ತದೆ.

**ಭೌತವಿಜ್ಞಾನಗಳೂ ಪರಿಸರಕ್ಕೆ ಅಧೀನ !**

ಪ್ರಯೋಗಲಬ್ಧವಾದುವಾವುವೋ ಅವು ಮಾತ್ರವೇ ಸದಾಕಾಲಕ್ಕೂ ಭೌತಿಕ-ವಿಜ್ಞಾನದ ನ್ಯಾಯಬದ್ಧವಾದ ಪರಿಕರಗಳು. ಆದರೆ ಭೌತಿಕ ಶಾಸ್ತ್ರದ ಸಂರಚನೆಯು ಯಾವ ಪರಿಕರಗಳನ್ನು ಆಧರಿಸಿದೆಯೋ, ಅವನ್ನು ವಾಸ್ತವವಾಗಿ ಒದಗಿಸಿದ ಪ್ರಯೋಗಗಳ ಸಂಖ್ಯೆಯನ್ನು ಗಮನಿಸಿ. ಈ ಸಂಖ್ಯೆಯು ಅಸಂಶಯವಾಗಿಯೂ ಹಿರಿದೇ. ಆದರೆ ಅದೆಷ್ಟು ಪ್ರಯೋಗಗಳನ್ನು ನಡೆಸಬಹುದಾಗಿತ್ತೋ, ಆದರೆ ವಾಸ್ತವವಾಗಿ ಎಂದೂ ನಡೆಸಿಯೇ ಇಲ್ಲವೋ, ಆ ಸಂಖ್ಯೆಗೆ ಹೋಲಿಸಿದಲ್ಲಿ, ಇದು ಅದರ ಒಂದು ಅವಲೇಶವಷ್ಟೇ ಆದೀತು. ಆದ್ದರಿಂದ, ವಿಜ್ಞಾನದ ಈಗಿನ ಸಂರಚನೆಗೆ ಆಧಾರವಾದ 'ಕಚ್ಚಾಪದಾರ್ಥ'ದ ವಿಷಯದಲ್ಲಿ ಒಂದು ಆಯ್ಕೆಯನ್ನು ಮಾಡಿಯಾಗಿದೆಯೆಂದೇ ಇದರ ಅರ್ಥ. ಇಂತಹ ಆಯ್ಕೆಯಾದರೂ ಕೇವಲ ವೈಜ್ಞಾನಿಕವೇ ಏನಲ್ಲದ ಬೇರೆ ಸನ್ನಿವೇಶಗಳಿಂದ ಪ್ರಭಾವಿತವಾಗಿದ್ದಿರಬೇಕು. ಇಷ್ಟರಮಟ್ಟಿಗಂತೂ, ಸರ್ವಥಾ ಸ್ವಪರಿಸರ ನಿರಪೇಕ್ಷವೆಂಬುದಾಗಿ ಭೌತಿಕಶಾಸ್ತ್ರವು ತನ್ನ ಬಗೆ ಘೋಷಿಸಿಕೊಳ್ಳಲಾಗದು.

**ಆಯ್ಕೆಗಳ ನಿಮಿತ್ತಗಳು**

ಹೊಸದೊಂದು ದಿಕ್ಕಿನಲ್ಲಿ ಸಂಶೋಧನೆ ಮಾಡಲು ಯಾವನಾದರೂ ಬಯಸಿದನೆನ್ನಿ. ಆಗ, ಶಕ್ಯವಾದ ಹಲವಾರು ಪ್ರಯೋಗಗಳಿರಬಹುದಷ್ಟೆ. ಅವುಗಳಲ್ಲಿ ಆಯ್ಕೆಯನ್ನು ಆತನು ಮಾಡಲ್ಕು ಹೊರಟಾಗ ಅಲ್ಲಿ ಪಾತ್ರವಹಿಸುವ ಅಂಶಗಳಲ್ಲಿ ಕೆಲವನ್ನು ತೆಗೆದುಕೊಳ್ಳೋಣ. ಸ್ಫುಟವಾಗಿಯೇ, ಅಲ್ಲಿಯ ಮೊಟ್ಟಮೊದಲ ಪ್ರಶ್ನೆಯೆಂದರೆ, ಲಬ್ಧ ಸನ್ನಿವೇಶಗಳಲ್ಲಿ ಯಾವ ಪ್ರಯೋಗಗಳು ಸಂಸಾಧ್ಯವೆಂಬುದೇ. ಕೆಲವು ಪ್ರಯೋಗಗಳಿಗೆ ಅವಶ್ಯವಾದ ಉಪಕರಣ ಪರಿವಾರವು ಸಂಕುಲವೂ ದುಬಾರಿಯೂ ಆಗಿರುತ್ತದೆ; ಮತ್ತು ಅದನ್ನು ಪಡೆಯುವ ಸಾಧನವಾದರೂ ಸದಾ ಸನ್ನಿಹಿತವಾಗೇನೂ ಇರದು. ಈ ಪ್ರಯೋಗಗಳು ಅದೆಷ್ಟೇ ಆಶಾಪ್ರದವಾಗುವುದಾದರೂ, ಅವನ್ನು ಮಾಡಲು ಹೋದರೆ ತಗಲುವ ಹೆಚ್ಚಿನ ಖರ್ಚುಗಳೆಂಬ ಕಾರಣದಿಂದಾಗಿ, ಅವನ್ನು ಅತ್ತ ಸರಿಸಬೇಕಾಗುವುದಷ್ಟೆ.

**ಪರಿವರ್ಜನೆಗಳ ಪರಿಗಳು**

ಮತ್ತಿಷ್ಟು ಪ್ರಯೋಗಗಳ ಸಮೂಹವನ್ನು ಸಂಪೂರ್ಣವಾಗಿ ಬೇರೆಯಾದ, ಹಾಗೂ ವ್ಯಕ್ತಿನಿಷ್ಠ ಕಾರಣಗಳಿಂದಾಗಿ, ಅವು ಶಕ್ಯವಾದರೂ ಸಹ ಬದಿಗಿರಿಸ ಬೇಕಾಗುವುದುಂಟು. ವಿಜ್ಞಾನಿಯ ಮನಸ್ಸಿಗೆ ಅವು (ಆ ಪ್ರಯೋಗಗಳು) ಹೊಳೆಯುತ್ತವೆ; ಆದರೆ ತತ್‌ಕ್ಷಣಕ್ಕೆ ಅವು ಆತನಿಗೆ ನೀರಸವಾಗಿ ತೋರುತ್ತವೆ – ಏಕೆಂದರೆ, ತಾನು ಕೈಗೊಂಡಿರುವ ಕಾರ್ಯಕ್ಕೆ ಅವು ನೇರಾಗಿ ಸಂಬಂಧಿಸಿಲ್ಲ – ಎಂಬ ಕಾರಣವೇ ಅಲ್ಲದೆ, ಮತ್ತೂ ಒಂದು ಕಾರಣಕ್ಕಾಗಿಯೂ : ಅವುಗಳು ಯಾವ ಫಲಿತಗಳಿಗೆ ಒಯ್ದಾವು ಎಂಬುದನ್ನು ತಾನರಿತಿರುವೆನೆಂಬುದಾಗಿ ಆತನು ಭಾವಿಸಿರಬಹುದು. ಅಂತಹ ಫಲಿತಾಂಶಗಳನ್ನು ನಿಖರವಾಗಿ ತಾನು ಮುಂಗಾಣಲಾರೆನೆಂದಾದರೂ, ಅವುಗಳು ಪ್ರಕೃತಕ್ಷಣದಲ್ಲಿ ಪ್ರಮುಖವಲ್ಲ, ಗೌಣ – ಎಂಬುದಾಗಿ ಆತನಿಗೆ ಕಂಡಿರಬಹುದು, ಎಂದೇ ಕಡೆಗಣಿಸಿರಬಹುದು. ಇವೇ ಅಲ್ಲದೆ, ಆ ಎಲ್ಲಾ ಫಲಿತಗಳನ್ನೂ ಗಣನೆಗೆ ತಾನು ತೆಗೆದುಕೊಳ್ಳುವುದಾದಲ್ಲಿ ಅವುಗಳ ಆ ಪ್ರಭೂತತೆಯನ್ನಿಟ್ಟುಕೊಂಡು ಬಿಟ್ಟು ಏನು ಮಾಡಬೇಕೆಂಬುದೇ ತೋರದೆ ಹೋಗಬಹುದೆಂಬ ಲೆಕ್ಕಾಚಾರವೂ ಆತನಿಗೆ ಬಂದೀತು. ಜೊತೆಗೆ, ನಮ್ಮ ಮನಸ್ಸುಗಳು ಆಸಕ್ತಿಯ ವಿಷಯಗಳ ಅನಂತ ಪರಿಧಿಯನ್ನೇನೂ ಹೊಂದಿರವಷ್ಟೆ. ಆ ಕ್ಷಣಕ್ಕೆ ಕೆಲ ಕೆಲ ವಿಷಯಗಳು ನಮ್ಮ ಗಮನ ಸೆಳೆಯುತ್ತವೆ. ಇದರ ಫಲವೇನೆಂದರೆ, ನಾವು ಯೋಚಿಸದೆಯೇ ಇರುವಂತಹ ಪರ್ಯಾಯ-ಪ್ರಯೋಗಗಳು – ಅತ್ಯಂತ ಶಕ್ಯವಾದಂತಹವೇ – ಭೂರಿಸಂಖ್ಯಾ ಪ್ರಮಾಣದಲ್ಲಿಯೇ ಇದ್ದಿರಲೇಬೇಕು; ಅವನ್ನು ನಾವು ಯೋಚಿಸಿಯೇ ಇರೆವು – ನಮ್ಮ ಕುತೂಹಲವು ಬೇರೆಡೆ ಆಕೃಷ್ಟವಾಗಿದೆಯೆಂಬ ಕಾರಣದಿಂದಾಗಿ.

ಇದಿಷ್ಟೂ ಸಹ ಅನಿವಾರ್ಯವಾದ ಒಂದು ಸಿದ್ಧಾಂತಕ್ಕೆ ನಮ್ಮನ್ನು ಒಯ್ಯುತ್ತದೆ. ಅದೇನೆಂದರೆ, ನಮ್ಮ ವೈಜ್ಞಾನಿಕ ನಿಲುವನ್ನು ನಿಶ್ಚಯಿಸುವುದರಲ್ಲಿ, ಹಾಗೂ ಮುಂದಿನ ಪ್ರಗತಿಯ ರೇಖೆಗೊಂದು ನಿರ್ದಿಷ್ಟವಾದ ದಿಕ್ಕನ್ನು ತಂದುಕೊಡುವಲ್ಲಿ, ಪುರುಷಾಯತ್ತ ಪರಿಕರಗಳು ಪ್ರವೇಶಿಸುವುದನ್ನು ನಾವು ನಿಷೇಧಿಸಲಾರೆವು.

**ಆದಿಮಾನವನ ಆದಿದರ್ಶನಗಳತ್ತ**

ನಾವು ಸಾಧಿಸುವ ಯಾವುದೇ ಮುನ್ನಡೆಯು ನಮ್ಮೆದುರಿಗೇ ಇರುವ ಹಾಗೂ ಲಭ್ಯವಾಗಿರುವ ಪರಿಕರಗಳನ್ನು ನೇರವಾಗಿ ಅವಲಂಬಿಸಿಯೇ ಇರುವುದೆಂಬುದನ್ನು ವಾಚ್ಯವಾಗಿ ಹೇಳಬೇಕಿಲ್ಲವಷ್ಟೆ. ಮತ್ತು ಇವುಗಳಾದರೂ, ಈ ಹಿಂದಿನ ಸಂಶೋಧಕರು ಸಾಧಿಸಿರುವ ಫಲಿತಗಳನ್ನು ಸೂಚಿಸುವುವು. ಅವರ ಈ ಫಲಿತಗಳಾದರೂ ಹಿಂದೆ ನಡೆದ ಆಯ್ಕೆಗಳಿಂದ ಜನ್ಯವಾದವು. ಆ ಆಯ್ಕೆಗಳೂ ಸಹ ಅಂದು ಉಪಸ್ಥಿತವಿದ್ದ ಪರೀಕ್ಷಾ ಪರಿಕರಗಳನ್ನು ಕುರಿತಾಗಿ ಯಾವುದೋ ಒಂದು ಚಿಂತನಪ್ರಣಾಳಿಯು ಕೆಲಸಮಾಡಿದುದರಿಂದ ಆದುದು. ವೈಜ್ಞಾನಿಕ ಪ್ರಗತಿಯ ಅಗಣಿತಸ್ತರಗಳ ಪರಂಪರೆಗಳನ್ನು ಹಿಡಿದು ಹಿಂದಕ್ಕೆ ಹೋದೆವಾದರೆ, ಜಗತ್ತನ್ನು ಅರಿಯಲೆಂದು, ಹಾಗೂ ತನ್ನ ಸುತ್ತಣ ಜಗತ್ತಿನಲ್ಲಿ ತಾನು ಗಮನಿಸಿದ ಘಟನೆಗಳ ತರ್ಕಬದ್ಧ ಮಾನಸಿಕ ಚಿತ್ರವನ್ನು ನಿರ್ಮಿಸಿಕೊಳ್ಳಲೆಂದು, ಆದಿಮಾನವನು ನಡೆಸಿದ ಮೊಟ್ಟಮೊದಲಿನ ಸತ್ಸಂಕಲ್ಪಯತ್ನದಲ್ಲಿಗೇ ಬರುವೆವು.

ಪ್ರಕೃತಿಯನ್ನು ಕುರಿತಾಗಿ ಆದಿಮಾನವನ ಈ ಪ್ರಥಮವೀಕ್ಷಣಗಳು, ಸಂಕಲ್ಪ

ಪೂರ್ವಕವಾಗಿ ನಿರ್ಮಿಸಿಕೊಂಡ ಯಾವುದೇ ಮಾನಸಿಕಪ್ರಕಾರ ವಿಶೇಷಗಳಿಂದ ಜನಿಸಿದುವಲ್ಲ. ಆದಿಮಾನವನು ತನಗಾಗಿ ಮಾಡಿಕೊಂಡ ಈ ಪ್ರಕೃತಿಚಿತ್ರವು ಸುತ್ತಣ ಪರಿಸ್ಥಿತಿಗಳಿಂದಾಗಿ ತಾನಾಗಿಯೇ ಹೊಮ್ಮಿದಂತೆಯೇ ಇರುವಂತಹುದು; ಆ ಪರಿಸ್ಥಿತಿಗಳಾದರೂ ಜೈವಿಕವಾದ ಸಂದರ್ಭವನ್ನೂ, ಪರಿಸರದೊಳಗೆ ಶರೀರ ಧಾರಣೆಯ ಆವಶ್ಯಕತೆಯನ್ನೂ ಇತ್ತ ದೈಹಿಕಜೀವನ-ಆಪತ್ತುಗಳ ನಡುವಣ ಪಾರಸ್ಪರಿಕ ಪ್ರತಿಕ್ರಿಯೆಯನ್ನೂ, ಅತ್ತ ಪ್ರಾಕೃತಿಕ ಸನ್ನಿವೇಶವನ್ನೂ ಅವಲಂಬಿಸಿರುವಂತಹವು. ಈ ಅಂಶವನ್ನು ನಾನು ಹೇಳುತ್ತಿರುವುದರ ಉದ್ದೇಶವಿದು: ವಸ್ತು ನಿಷ್ಠಾಂಶಗಳ ಪ್ರಬಲಾಧಿಕಾರಕ್ಕೆ ಆರಂಭದಿಂದಲೇ ಕಡ್ಡಾಯವಾದ ಮೂಲಧಾತುವೊಂದಿದೆಯೆಂಬ ಆರೋಪ ವೇನುಂಟೋ ಅದನ್ನು ಮೊದಲಿಗೇ ಸ್ಥಗಿತಗೊಳಿಸುವುದು – ಅದು ನಿಶ್ಚಯವಾಗಿಯೂ ಸತ್ಯವಲ್ಲ; ಏಕೆಂದರೆ, ವಿಜ್ಞಾನದ ಆರಂಭವೆಂಬುದು ನಿಸ್ಸಂಶಯವಾಗಿ, ಸ್ವಜೀವಿತಾರ್ಥಕ್ಕಾಗಿ ಮನುಷ್ಯನಿಂದಾದ ಹೋರಾಟವೆಂಬ ಮಾನವೀಯ ಅವಶ್ಯಕತೆಯಿಂದ ಜನಿಸಿದುದು.

**ವಿಜ್ಞಾನದಲ್ಲಿ ನವದಿಶೋದಯಗಳು : ನೆರ್ನ್‌ಸ್ಟನ ಉದಾಹರಣೆ**

ಯಾವುದೋ ಒಂದು ಚಿಂತನವೋ ಅಥವಾ ಚಿಂತನಸಮೂಹವೋ ಕಾಲಘಟ್ಟವೊಂದರಲ್ಲಿ ಸಸಾರವೂ ಪ್ರಧಾನವೂ ಆಗಿಬಿಡುವುದು ಆಗಾಗ್ಗೆ ಸಂಭವವಷ್ಟೆ. ಅಲ್ಲಿಯ ತನಕ, ನೀರಸವೆಂದೂ ಗೌಣವೆಂದೂ ಪರಿಗಣಿತವಾಗಿದ್ದ ಅದು ಆಗ ಕೆಲವು ಪ್ರಯೋಗ ಪದ್ಧತಿಗಳನ್ನು ಹೊಸ ಅರ್ಥವತ್ತೆಯೊಂದಿಗೆ ಬೆಳಗಿಸುವುದು. ಉದಾಹರಣೆಗೆ, ಮೂವತ್ತು ವರ್ಷಗಳ ಹಿಂದೆ ಯಾರೊಬ್ಬರೂ ಈ ಪ್ರಶ್ನೆಯ ಬಗ್ಗೆ ಕೇಳುವ ವಿಶೇಷಾಸಕ್ತಿಯನ್ನು ಹೊಂದಿರಲಿಲ್ಲ: ಉಷ್ಣತೆಯು ಬದಲಾದಂತೆ ಪದಾರ್ಥವೊಂದರ ಘರ್ಮಸಾಮರ್ಥ್ಯವು ಹೇಗೆ ಬದಲಾಗುವುದೆಂದು. ಈ ಘರ್ಮಸಾಮರ್ಥ್ಯವು ತೀರ ಕಡಿಮೆಯ ಉಷ್ಣತೆಯಿದ್ದಾಗ ಹೇಗೆ ಪ್ರತಿಕ್ರಿಯಿಸುತ್ತದೆಂಬುದಕ್ಕೆ ಪ್ರಾಮುಖ್ಯವೀಯುವ ಕನಸನ್ನು ಸಹ ಯಾರೂ ಕಾಣದಾಗಿದ್ದರು. ಪ್ರಾಯಃ ಯಾರೋ ವೃದ್ಧ ಮತಿಹೀನನೊಬ್ಬ – ಚಿಂತಿಸಲು ಸರಿಯಾದ ವಸ್ತುವೇ ಇಲ್ಲದವನು – ಈ ಪ್ರಶ್ನೆಯ ಬಗ್ಗೆ ಕುತೂಹಲಿಯಾಗಿದ್ದಿದ್ದಾನು; ಅಥವಾ ಇನ್ನಾರೋ ಮಹಾ ಪ್ರತಿಭಾಶಾಲಿಯಾದವನೊಬ್ಬ. ಆದರೆ, ತನ್ನ ಘರ್ಮಚಲನಿಕೆಯ ತೃತೀಯ ನಿಯಮವನ್ನು ನೆರ್ನ್‌ಸ್ಟ್ ಯಾವಾಗ ಮುಂದಿಟ್ಟನೋ, ಆಗ ಇಡೀ ಪರಿಸ್ಥಿತಿಯೇ ಥಟ್ಟನೆ ಬೇರೆಯಾಯಿತು. ನೆರ್ನ್‌ಸ್ಟನ ಪ್ರಮೇಯದಲ್ಲಿ ರೂಪುಗೊಂಡದ್ದು ಒಂದು ಆಶ್ಚರ್ಯಕರ ಸಮಾವೇಶ : ಅದೆಂದರೆ ಸರ್ವಪದಾರ್ಥಗಳ ಘರ್ಮಸಾಮರ್ಥ್ಯವೂ ತೀರ ಕಡಿಮೆಯಾದ ಉಷ್ಣತೆಯಲ್ಲಿ ಸೊನ್ನೆಯತ್ತ ಪ್ರವೃತ್ತವಾಗುವುದು; ಮತ್ತೂ ಒಂದು ವಿಷಯವನ್ನು ಅದು ಸಾಧಿಸಿತು – ರಾಸಾಯನಿಕ ಸಾಮ್ಯಸ್ಥಿತಿಗಳೆಲ್ಲವನ್ನೂ ಮೊದಲೇ ಲೆಕ್ಕ ಹಾಕಿಟ್ಟಿರಬಹುದು – ಅದು ಯಾವಾಗೆಂದರೆ, ನಿರ್ದಿಷ್ಟ ಉಷ್ಣತೆಯಲ್ಲಿ ರಾಸಾಯನಿಕ ಕ್ರಿಯೆಯ ಘರ್ಮವು ಗೊತ್ತಿದ್ದಲ್ಲಿ; ಹಾಗೂ ಆ ಕ್ರಿಯೆಗಳಲ್ಲಿ ಪಾಲ್ಗೊಳ್ಳುವ ವಸ್ತುಗಳ ಘರ್ಮಸಾಮರ್ಥ್ಯವೂ ಸಾಕಷ್ಟು ಕಡಿಮೆಯ ಉಷ್ಣತೆಯ ಪರ್ಯಂತವಾಗಿಯೂ ಗೊತ್ತಿದ್ದಲ್ಲಿ.

**ಐನ್‌ಸ್ಟೀನನ ಉದಾಹರಣೆ**

ಹೆಚ್ಚು ಕಡಿಮೆ ಇದೇ ತೆರನಾದ ಸ್ಥಿತಿಯೇ ಸ್ಥಿತಿಸ್ಥಾಪಕಸ್ಥಿರಾಂಕಗಳ ವಿಷಯದಲ್ಲಿ ಆಗಿರುವುದು. ಈ ಸ್ಥಿರಾಂಕಗಳ ಮೌಲ್ಯಗಳ ಅರ್ಥವೇನೆಂಬುದನ್ನು ಭೌತಶಾಸ್ತ್ರಜ್ಞರು ಈವರೆಗೆ ಕಡೆಗಾಣಿಸಿದ್ದರು; ಅದನ್ನು ಬಳಸುವ ತಾಂತ್ರಿಕರು, ಸೇತು ನಿರ್ಮಾಪಕರು, ಭೂಕಂಪವಿದರು – ಅವರುಗಳು ಚಿಂತಿಸಿಕೊಳ್ಳಲೆಂದು ಬಿಟ್ಟಿದ್ದರು. ಆದರೆ ಐನ್‌ಸ್ಟೀನನೂ ಮತ್ತು ಅವನನ್ನು ಅನುಸರಿಸಿ ಡಿಬೈಯೂ ಯಾವಾಗ ಅಲ್ಪೋಷ್ಣತೆಯಲ್ಲಿ ಪದಾರ್ಥಗಳ ಘರ್ಮಸಾಮರ್ಥ್ಯವು ಕ್ಷಯಿಸುವುದರ ಬಗೆಗಿನ ಸಾಮಾನ್ಯಪ್ರಮೇಯವೊಂದನ್ನು ಮಂಡಿಸಿದರೋ – ಅದರಿಂದಾಗಿ ಯಾವ ಉಷ್ಣತೆಯಲ್ಲಿ ಘರ್ಮಸಾಮರ್ಥ್ಯದ ಇಳಿತವು ಮೊದಲ ಬಾರಿಗೆ ಗೋಚರವಾಗುವುದು ಪ್ರಕೃತವಸ್ತುವಿನ ಸ್ಥಿತಿಸ್ಥಾಪಕ ಧರ್ಮಗಳಿಗೆ ಸಂಬಂಧಪಟ್ಟುದೆಂದು ಪ್ರತಿಪಾದಿತವಾಯಿತೋ – ಆಗ ಅತ್ಯಂತ ವಿನೂತನವೂ ಹಾಗೂ ಅನಿರೀಕ್ಷಿತವೂ ಆದ ಸಂಬಂಧವು ಹೊಸದೊಂದು ಕೌತುಕತೆಯನ್ನು ಉಂಟುಮಾಡಿಸಿತು; ಮತ್ತು ಇದರಿಂದಾಗಿ ಈ ಕ್ಷೇತ್ರದಲ್ಲಿ ಬಹುತ್ರ ವ್ಯಾಪಿಸಿದ ಪ್ರಯೋಗಕರಣಕ್ಕೆ ಎಡೆಗೊಟ್ಟಿತು; ಅಷ್ಟೇ ಅಲ್ಲದೆ, ಅದನ್ನಿನ್ನೂ ಬೆಳೆಸಿತು – ಉದಾಹರಣೆಗೆ ಅದು ನಾನಾ ಸ್ಥಾಪಿತದಿಶೆಗಳಿಗೂ ಅನ್ವಯಿಸಿತು – ಇತ್ಯಾದಿತ್ಯಾದಿ.

**ವಿಜ್ಞಾನದಲ್ಲಿ ಪ್ರತಿಭಾ ತಿರಸ್ಕಾರ : ಗ್ರಿಮಾಲ್ಡಿಯ ಉದಾಹರಣೆ**

ಮತ್ತೊಂದು ಉದಾಹರಣೆಯುಂಟು; ಅದು ಬಹಳ ದುರಂತಮಯವಾದ ಉಪೇಕ್ಷೆಗೆ ವಿಷಯವಾದುದನ್ನು ಕುರಿತದ್ದು; ಅದೆಂದರೆ ಗ್ರಿಮಾಲ್ಡಿಯು (೧೬೧೮-೧೬೬೩) ಬೆಳಕಿನ ವಿಯೋಜನೆಯ ಬಗೆಗೆ ನಡೆಸಿದ ಪ್ರಯೋಗಕ್ಕೆ ಸಂಬಂಧಿಸಿದುದು. ದೂರದಲ್ಲಿಯ ಮೂಲದಿಂದ ಹೊರಟು ಕಿಂಡಿಯೊಂದರ ದ್ವಾರಾ ಬರುತ್ತಿರುವ ದೀಪಾಂಶುವೊಂದು ಕಂಡುಬಂದುದರಿಂದಾದ ತಂತಿಯೊಂದರ ನೆರಳು, ನಿರೀಕ್ಷ್ಯವಾದ ಧರ್ಮಗಳನ್ನು ತೋರಿಸುವುದಿಲ್ಲ. ಅರ್ಥಾತ್, ಜ್ಯೋತಿರ್ವಲಯವೊಂದಕ್ಕೆ ಅಡ್ಡ ನಿಲ್ಲುವ ಸರಳವಾದ ತಮಸ್ಸಿನ ಪಟ್ಟಿಯಲ್ಲ ಅದು. ಈ ತಮಃಪಟ್ಟಿಕೆಯು ಒಂದು ಸಂಕೀರ್ಣವಾದ ವಿಷಯ. ಅದರ ಅಂಚಿನತ್ತ ಮೂರು ವರ್ಣಮಯವಾದ ಪಟ್ಟಿಗಳಿದ್ದು, ಅವುಗಳ ಅಗಲವು ಛಾಯೆಯ ಅಂಚಿನತ್ತ ಹೋದಂತೆ ಕೃಶತರವಾಗುವುದು; ಛಾಯೆಯ ಒಳಭಾಗವು, ಛಾಯೆಯ ಅಂಚುಗಳಿಗೆ ಸಮಾನಾಂತರವಾದ ಸೌಮ್ಯ ವರ್ಣದ ರೇಖೆಗಳೊಂದಷ್ಟರಿಂದ ಕ್ರಮಿಸಲ್ಪಟ್ಟಿರುವುದು. ಹೈಗೆನ್ಸ್‌ನ ತರಂಗ ಪ್ರಮೇಯಗಳ ಪ್ರತಿಪಾದನೆಗಿಂತಲೂ ಮುಂಚೆ ನಡೆಸಲಾದ ಪರೀಕ್ಷೆಯಿದು. ಜ್ಯೋತಿಷ್ಕಿರಣಗಳು ಕೇವಲ ಸರಳರೇಖೆಯಲ್ಲಿ ಮಾತ್ರವೇ ಚಲಿಸವೆಂಬುದನ್ನೂ, ಹಾಗೂ ಋಜುರೇಖೆಯಿಂದಾಚೆಗಾಗುವ ವಿಗತಿಯು ಬಣ್ಣದೊಂದಿಗೆ – ಅಥವಾ, ನಾವಿಂದು ಹೇಳುವಂತೆ, ಅದರ ತರಂಗಾಂತರದೊಂದಿಗೆ ನಿಕಟವಾಗಿ ಸಂಬಂಧಿಸಿದುದು ಎಂಬುದನ್ನು ಸ್ಪಷ್ಟವಾಗಿಯೂ ನಿಸ್ಸಂಶಯವಾಗಿಯೂ ಸಿದ್ಧಮಾಡಿದ ಪ್ರಯೋಗವು ಆ ತೆರನಾದವುಗಳಲ್ಲಿ ಪ್ರಥಮವಾದ ಪ್ರಯೋಗವಾಗಿದೆ.

**ವಿಜ್ಞಾನದ ಬೆಳವಣಿಗೆ ತರ್ಕಬದ್ಧವಲ್ಲ : ಮಾಖ್**

ಜ್ಯೋತಿಃಪ್ರಸರಣವನ್ನು ಅರ್ಥಮಾಡಿಕೊಳ್ಳುವುದು, ಹಾಗೂ ಭೌತಿಕಜಗತ್ತಿನ ಸಾಧಾರಣ ವೈಜ್ಞಾನಿಕಚಿತ್ರಣವನ್ನು ಅರ್ಥಮಾಡಿಕೊಳ್ಳುವುದು – ಇವೆರಡಕ್ಕೂ ಮೂಲಭೂತವಾದ ವಾಸ್ತವಾಂಶವಿದೆಂದು ನಮ್ಮ ದಿವಸಗಳಲ್ಲಿ ಇದು ಪರಿಗಣಿತವಾಗಿದೆ. ಗ್ರಿಮಾಲ್ಡಿಯ ಪ್ರಯೋಗದ ಅರ್ಥವತ್ತೆಯನ್ನು ಅದ್ಯತನಪರಿಭಾಷೆಯಲ್ಲಿ ಹೇಳುವುದಾದರೆ, ನಾವು ಹೀಗೆ ಹೇಳಬೇಕು: ೧೯೨೭ರಲ್ಲಿ ಹೈಸೆನ್‌ಬರ್ಗ್ ನಿರೂಪಿಸಿದಂತಹ ಪಾರಿಮಾಣಿಕಗತಿಶಾಸ್ತ್ರದಲ್ಲಿಯ ಅನಿಶ್ಚೇಯತಾತತ್ತ್ವದ ಮೊದಲ ಪ್ರತಿಪಾದನೆಯನ್ನು ಗ್ರಿಮಾಲ್ಡಿಯು ಮಾಡಿದ್ದನು – ಎಂಬುದಾಗಿ. ಯೊಂಗ್ ಹಾಗೆ ಫ್ರೆಸ್ನೆಲ್‌ಗಳ ಕಾಲದ ಪರ್ಯಂತ, ಗ್ರಿಮಾಲ್ಡಿಯ ಈ ನಿರ್ವರ್ಣನಗಳು ಯಾರ ಗಮನವನ್ನೂ ಸೆಳೆದುದೇ ಇಲ್ಲವೆನ್ನಬೇಕು; ಅವಕ್ಕೆ ಯಾರೊಬ್ಬರೂ ಯಾವ ಹಿರಿದಾದ ಪ್ರಾಮುಖ್ಯವನ್ನೂ ಕೊಟ್ಟುದ್ದಿಲ್ಲ. ವಿಜ್ಞಾನವೆಂಬುದೇನುಂಟೋ ಅದಕ್ಕೆ ಯಾವುದೇ ಸಾಧಾರಣೋಪಯೋಗವೂ ಇಲ್ಲವೆನ್ನುವ ಪ್ರಾಕೃತಿಕಘಟಿತವೊಂದರತ್ತ ಅವು ಬೊಟ್ಟುಮಾಡುವುವು, ಅಷ್ಟೆ; ಮುಂದಿನ ನೂರೈವತ್ತು ವರ್ಷಗಳ ಕಾಲ ಆ ಬಗೆಯ ಪ್ರಯೋಗಗಳೊಂದೂ ನಡೆಯಲಿಲ್ಲ – ಅವನ್ನು ಸರಳತಮವೂ ಅತ್ಯಲ್ಪಮೂಲ್ಯಕವೂ ಆದ ವಸ್ತುಗಳನ್ನಿಟ್ಟುಕೊಂಡು ಮಾಡಬಹುದಾಗಿದ್ದರೂ ಸಹ. ಇದಕ್ಕೆ ಕಾರಣವೆಂದರೆ : ಮುಂದೆ ಶೀಘ್ರದಲ್ಲೇ ಪ್ರತಿಪಾದಿತವಾದ ಎರಡು ಜ್ಯೋತಿಃ ಪ್ರಮೇಯಗಳಲ್ಲಿ, ನ್ಯೂಟನ್ನಿನ ಕಣಪ್ರಮೇಯವೇ ಪ್ರಚುರವಾಗಿ ಅಂಗೀಕಾರವನ್ನು ಪಡೆದುಕೊಂಡಿತು – ತತ್‌ಪ್ರತೀಪ (= ವಿರುದ್ಧ)ವಾದ ಹೈಗನ್ಸ್‌ನ ತರಂಗಪ್ರಮೇಯಕ್ಕಿಂತಲೂ. ಹೀಗಾಗಿ ಜನರ ಸಾಧಾರಣಕೌತುಕವೇ ಬೇರೊಂದು ದಾರಿಯಲ್ಲಿ ನಿರ್ದೇಶವನ್ನು ಹೊಂದಿತು. ಈ ಹಾದಿಯನ್ನು ಹಿಡಿದು, ವ್ಯವಹಾರಕ್ಕೆ ಪ್ರಮುಖವೆನಿಸತಕ್ಕ ಕುತೂಹಲಕಾರಿಯಾದ ಬೇರೆ ಪ್ರಯೋಗಗಳನ್ನು ಮಾಡಲಾಯಿತು; ಅವು ಯುಕ್ತವಾದ ಪ್ರಾಯೋಗಿಕವಾದ ಸಿದ್ಧಾಂತಗಳಿಗೂ ದಾರಿಮಾಡಿಕೊಟ್ಟವು; ಅವೆಂದರೆ, ಪ್ರತಿಫಲನ ನಿಯಮಗಳು ಹಾಗೂ ವಕ್ರೀಭವನ ನಿಯಮಗಳು ಮತ್ತು ಲೋಚನೀಯೋಪಕರಣಗಳ ನಿರ್ಮಾಣಗಳಲ್ಲಿ ಅವುಗಳ ಅನ್ವಯ. ನ್ಯೂಟನ್ನಿನ ಕಣಪ್ರಮೇಯವು ತಪ್ಪೆಂಬುದಾಗಿ ಹೇಳಲು ನಮಗೆ ಹಕ್ಕೇನಿಲ್ಲ – ಹಾಗೆಂಬುದಾಗಿ ಹೇಳುವುದು ದೀರ್ಘಕಾಲದವರೆಗೂ ಪದ್ಧತಿಯೇ ಆಗಿ ಹೋಗಿತ್ತಾದರೂ. ಆಧುನಿಕ ವಿಜ್ಞಾನದ ಈಚಿನ ಸಿದ್ಧಾಂತಗಳು ಕಣ ಪ್ರಮೇಯಕ್ಕಾಗಲಿ ತರಂಗ ಪ್ರಮೇಯಕ್ಕಾಗಲಿ ಸರಿದೂಗುವುವಲ್ಲ. ಆಧುನಿಕ ವೈಜ್ಞಾನಿಕ ಸಿದ್ಧಾಂತಗಳಂತೆ ಪ್ರಾಕೃತಿಕ-ಘಟಿತದ ಎರಡು ತೀರ ಬೇರೆಮುಖಗಳ ಮೇಲೆ ಈ ಎರಡು ಪ್ರಮೇಯಗಳು ಬೆಳಕು ಚೆಲ್ಲುವುವು. ಅಲ್ಲದೆ, ಇಂದಿನವರೆವಿಗೂ ಸಹ, ಈ ಎರಡೂ ಮುಖಗಳನ್ನೂ ಪರಸ್ಪರ ಸಾಮರಸ್ಯಕ್ಕೆ ನಾವು ಹೊಂದಿಸಲಾಗಿಲ್ಲ. ಪ್ರಶ್ನೆಯ ಒಂದು ಪಾರ್ಶ್ವವನ್ನು ಕುರಿತಾಗಿ ಬಹುಕಾಲ ತಾಳಲಾದ ಆದರವು ಮತ್ತೊಂದರ ಬಗ್ಗೆ ತಾಳಬಹುದಾದುದನ್ನು ಸಂಪೂರ್ಣವಾಗಿ ಮುಳುಗಿಸಿಹಾಕಿತು. ಜ್ಯೋತಿಃಸ್ವಭಾವದ ಬಗೆಗಿನ ಪ್ರಾಯೌಗಿಕ ಸಂಶೋಧನೆಯನ್ನೂ, ಈ ಸಂಶೋಧನೆಯಿಂದ ಒಂದು ಕಾಲದಲ್ಲೋ ಮತ್ತೊಂದು ಕಾಲದಲ್ಲೋ ಜನ್ಮತಾಳಿದ ನಾನಾ ಪ್ರಮೇಯಗಳ ಬಗೆಗೆ ಷರಾ ಬರೆಯುತ್ತಾ, ''ವೈಜ್ಞಾನಿಕ ಪ್ರಗತಿಯೆಂಬುದು ಅದೆಷ್ಟು

ಅಲ್ಪ ಪ್ರಮಾಣದಲ್ಲಿ ತರ್ಕಬದ್ಧವಾಗಿಯೂ ಕ್ರಮಬದ್ಧವಾಗಿಯೂ ಘಟಿಸುತ್ತದೆ!'' ಎಂಬುದಾಗಿ ಎರ್‌ನೆಸ್ಟ್ ಮಾಖ್ ಹೇಳುತ್ತಾನೆ. ಇದೇ ತೆರನಾದ – ಅಥವಾ, ಇದಕ್ಕೆ ಪ್ರತಿಲೋಮವಾದ ಪ್ರಸಂಗವು ದ್ರವ್ಯಪ್ರಕೃತಿಯನ್ನು ಕುರಿತಾದ ಪ್ರಮೇಯಗಳ ವಿಷಯದಲ್ಲಿ ಉಂಟಾಯಿತು : ದ್ರವ್ಯದ ವಿಷಯದಲ್ಲಿ, ಕಣ ಪ್ರಮೇಯವೇ ಇತ್ತೀಚಿನ ವರೆಗೂ ಜಯಶೀಲವಾಗಿದ್ದುದು – ಏಕೆಂದರೆ, ಜ್ಯೋತಿಸ್ಸನ್ನು ಕುರಿತಾದ ಪ್ರಸಂಗದಂತಲ್ಲದೆ, ದ್ರವ್ಯವನ್ನು ಕುರಿತಾದ ತರಂಗಪ್ರಮೇಯಕ್ಕೆ ಪ್ರಾಯೋಗಿಕವಾದ ಸಿದ್ಧಿಯನ್ನು ಒಡ್ಡುವುದು ಕ್ಲಿಷ್ಟತರವೇ ಸರಿ.

**ಕಿರ್‌ಷಾಫ್‌ನ ಆಗ್ರಹ : ಸಂಶೋಧನ ಮನೋವಿಜ್ಞಾನಕ್ಕೆ ವಿಸಂವಾದಿ**

ಕಿರ್‌ಷಾಫ್ (೧೮೨೪-೧೮೮೭)ನ ನಂತರ, ನಮಗೆ ಇದನ್ನು ಒಪ್ಪುವುದು ವಾಡಿಕೆಯಾಗಿಹೋಗಿಬಿಟ್ಟಿದೆ : ಏನೆಂದರೆ, ವಿಜ್ಞಾನವೆಂಬುದು ಅಂತತೋಗತ್ವಾ ಇಂದ್ರಿಯಗಳಿಂದ ಗೃಹೀತವಾದುದೇನುಂಟೋ ಅದರ ನಿಷ್ಕೃಷ್ಟ ಹಾಗೂ ಪ್ರಾಮಾಣಿಕವಾದ ವರ್ಣನೆಯಲ್ಲದೆ ಮತ್ತೇನೂ ಅಲ್ಲವೆಂಬುದಾಗಿ. ಈ ಪ್ರತಿಷ್ಠಿತ ಪ್ರಮೇಯಕಾರಿ ಸಿದ್ಧೋಕ್ತಿಯನ್ನು ಪ್ರಮೇಯ ರಚನಾವ್ಯಾಪೃತರೆಲ್ಲರಿಗೂ ಒಂದು ಸುವಿಮೃಷ್ಟವಾದ ಜಾಗರವೆಂಬುದಾಗಿ ಉಲ್ಲೇಖಿಸಿ ಹೇಳಲಾಗಿದೆ. ಉಪಲಬ್ಧಿಶಾಸ್ತ್ರದ ದೃಷ್ಟಿಯಿಂದ ಇದರಲ್ಲಿ ನಿಸ್ಸಂಶಯವಾಗಿಯೂ ಸಾಕಷ್ಟೇ ಸತ್ಯವಿದೆ; ಆದರೆ ಸಂಶೋಧನೆಯ ಮನೋ ವಿಜ್ಞಾನಕ್ಕೆ ಮಾತ್ರ ಇದು ಹೊಂದುವಂತಹುದೇ ಅಲ್ಲ. ಪ್ರಾಯೋಗಿಕವಾದ ಸಂಶೋಧನೆಯಲ್ಲಿ ಕಂಡುಹಿಡಿಯಲಾದ ಪಾರಿಮಾಣಿಕ ನಿಯಮಗಳಿಗೆ ಯಾರಾದರೂ ಯಾವುದೇ ಕೌತುಕವನ್ನು ತೋರುವರೆಂದು ನಂಬುವುದು ಸಂಪೂರ್ಣವಾಗಿಯೂ ಸಾಪರಾಧವಾದುದು – ಈ ನಿಯಮಗಳನ್ನಷ್ಟನ್ನು ಮಾತ್ರವೇ ಹಾಗೆಯೇ ಪರಿಗಣಿಸುವುದಾದರೆ : ಉದಾಹರಣೆಗೆ, ಕೆಲವು ಆರ್ಗಾನಿಕ್ ಸಂಯುಕ್ತಗಳ ಬಾಷ್ಪಮರ್ದವಾಗಲಿ, ಮೂಲಧಾತುಗಳ ನಿರ್ದಿಷ್ಟ ಘರ್ಮವಾಗಲಿ ಉಷ್ಣತೆಯನ್ನು ಈ ಪ್ರಕಾರದಲ್ಲೋ ಆ ಪ್ರಕಾರದಲ್ಲೋ ಅವಲಂಬಿಸಿರುವುದೆಂಬುದು. ಈ ಬಗೆಯ ಯಾವುದೇ ಅವೇಕ್ಷಣದಲ್ಲಿ ನಮ್ಮ ಆಸಕ್ತಿಯೆಂಬುದು, ಮುಂದೆ ಸಾಧಿಸಲೆಳಸುವ ಯಾವುದೋ ಫಲಿತವನ್ನು ಕುರಿತಾಗಿ ನಾವು ತೋರಬೇಕೆಂದಿರುವ ಲೆಕ್ಕಾಚಾರಕ್ಕೋಸ್ಕರವಾಗಿ ಮತ್ತು ಈ ನಿರೀಕ್ಷಿತ ಲೆಕ್ಕಾಚಾರ ಅಥವಾ ಚಿಂತನಮಾರ್ಗವು ಸ್ಪಷ್ಟವೂ ವಿಸ್ತೃತವೂ ಆದ ಪ್ರಮೇಯವೊಂದರ ರೂಪದಲ್ಲಿ ಈಗಾಗಲೇ ಅಸ್ತಿತ್ವದಲ್ಲಿರಬಹುದು; ಅಥವಾ ಪ್ರಾಯೋಗಿಕ ಸಂಶೋಧನೆಯನ್ನು ಮಾಡುವುದರಲ್ಲಿ ಪ್ರತಿಭಾಸಂಪನ್ನನಾದವನೊಬ್ಬನ ತಲೆಯೊಳಗಿನ ಅಸ್ಫುಟಸ್ಫುರಣ ಮಾತ್ರದ ಗರ್ಭಾವಸ್ಥೆಯಲ್ಲಷ್ಟರಲ್ಲೇ ಇನ್ನೂ ಇರಬಹುದು : ಅದಿಲ್ಲಿ ಅಕಿಂಚಿತ್‌ಕರ.

**ಸಂಶೋಧನೆಯ ಸಂಗತತೆಯ ಬಗ್ಗೆ ಸವಾಲು ಸೂಕ್ತ**

ನಾವು ಮಾಡುತ್ತಿರುವ ಸಂಶೋಧನೆಯನ್ನು ಅದೇತಕ್ಕಾಗೆಂದು ಸಾಮಾನ್ಯ ಜನಕ್ಕೆ ನಾವು ವಿವರಿಸಹೋದಾಗಿನ ಕ್ಲೇಶವನ್ನು ಎದುರಿಸಿದ ಕ್ಷಣದಲ್ಲೇ ನನ್ನ ಉಕ್ತಿಯ ಮನೋವೈಜ್ಞಾನಿಕ ಸತ್ಯತೆಯು ಸ್ಫುಟವಾಗುವುದು. ನಾನು ಸಾಮಾನ್ಯಜನದ ಬಗ್ಗೆ ಮಾತನಾಡುತ್ತಿರುವಲ್ಲಿ, ಯಾರನ್ನು ಸಾಮಾನ್ಯರೆಂದು ಹೇಳುತ್ತಿರುವೆ ? ಆಗದ ಹೋಗದ ಕೆಲಸಗಳಿಗೆ ಮನಸ್ಸು ಕೊಡದಂತಹವರಿಗೆ ಮಾತ್ರವಲ್ಲ;ಅವರಿಗೆ ಅದರಲ್ಲೆಲ್ಲ ಆಸಕ್ತಿಯೇ ಇಲ್ಲದಿರಬಹುದು ಅಥವಾ ನಿತ್ಯಗಟ್ಟಲೆಯ ವಿಷಯಗಳಲ್ಲೇ ಅವರು ಮುಳುಗಿಹೋಗಿರಬಹುದು : ಆ ಪದವು ಇನ್ನೂ ಹೆಚ್ಚಿನ ವಿಸ್ತಾರವನ್ನು ಸೂಚಿಸಬೇಕೆಂಬುದು ನನ್ನ ಆಶಯ. ಒಂದು ಸಂಶೋಧನೆಯಲ್ಲಿ ಸಹಕಾರವೀಯುವುದಕ್ಕೋಸ್ಕರ ವಿಜ್ಞಾನ ಹಾಗೂ ಸಾಹಿತ್ಯಗಳ ನಾನಾಪ್ರತಿನಿಧಿಗಳನ್ನು ಒಂದುಗೂಡಿಸುವ ವಿದ್ವದ್‌ವೃಂದದ ಮಧ್ಯದಲ್ಲಿ ಮೇಲೆ ಹೇಳಿದ ಅರ್ಥದಲ್ಲಿನ ಸಾಮಾನ್ಯತ್ವವನ್ನು ಪ್ರತಿಯೊಬ್ಬನೂ ತನ್ನಲ್ಲಿ ತಾನು ಪ್ರತಿದಿನವೂ ಕಂಡುಕೊಳ್ಳುವವನಾಗಿರುತ್ತಾನಷ್ಟೆ. ತನ್ನ ಪ್ರತಿಯೊಬ್ಬ ಸಹಸದಸ್ಯನೂ ಸಹ ಇದೇ ಅರ್ಥದಲ್ಲಿ ತನ್ನನ್ನು ತಾನು ಸಾಮಾನ್ಯನೆಂದೇ ಭಾವಿಸುವನಷ್ಟೆ. ಏಕೆಂದರೆ, ಸಹೋದ್ಯೋಗಿಯೊಬ್ಬನಿತ್ತ ಪ್ರವಚನವನ್ನು ಕೇಳಿದ ಬಳಿಕ, ಪ್ರತಿಯೊಬ್ಬನಿಗೂ ಹೀಗೆ ಅನ್ನಿಸುವುದು (ಅದು ಅಗೌರವವೆಂದು ತೋರುವುದಾದರೂ) ಅನಿವಾರ್ಯವೇ ಸರಿ : ಅಯ್ಯೋ ಭಗವಂತಾ, ಇದಾವ ವಿಷಯಕ್ಕಾಗಿ ಈ ಮನುಷ್ಯ ಇದಿಷ್ಟು ಹೆಣಗಾಡುತ್ತಿದ್ದಾನೆ ಎಂದು! ಈ ನಿಲುವೇನೂ ಮನಸ್ಸಿಗೆ ಘಾತ ಮಾಡಲಿಕ್ಕಾಗೆಂದಂತೂ ಅಲ್ಲವಷ್ಟೆ. ಆದರೆ ನಾನು ಪ್ರತಿಪಾದನೆ ಮಾಡುತ್ತಿರುವ ವಿಷಯಕ್ಕೆ ಅದೊಂದು ಒಳ್ಳೆಯ ನಿದರ್ಶನ. ಅದೇನೆಂದರೆ – ಪ್ರಕೃತಿಯನ್ನು ಕುರಿತಾಗಿ ಒಬ್ಬನು ಕೇಳಬಹುದಾದ ಭೂರಿಭೂರಿ ಪ್ರಶ್ನೆಗಳಲ್ಲಿ ಕೆಲವು ಪ್ರಶ್ನೆಗಳ ಅತಿ ಪ್ರಾಮುಖ್ಯವನ್ನೂ – ಹಾಗೆಯೇ ಮತ್ತೆ ಕೆಲವು ಪ್ರಶ್ನೆಗಳ ಅತಿಪ್ರಾಮುಖ್ಯವನ್ನೂ – ಮನುಷ್ಯನೊಬ್ಬನು ಒಡನೆಯೇ ಒಪ್ಪಿಕೊಳ್ಳಲು ಯಾವುದೋ ಒಂದು ವಿಶಿಷ್ಟವಾದ ಆಸಕ್ತಿಯ ದಿಕ್ಕು ಅವಶ್ಯವೇ ಆಗಿರುತ್ತದೆ – ಎಂಬುದು. ಈಗಷ್ಟೆ ಹೇಳಲಾಗಿರುವ ಪ್ರಸಂಗದಲ್ಲಿ (ಅದು ನಿಮ್ಮ ಪ್ರವಚನವೆಂದೇ ಇಟ್ಟುಕೊಳ್ಳೋಣ), ನಿಮ್ಮ ಸಹೋದ್ಯೋಗಿಯೊಬ್ಬನು ನಿಮ್ಮಲ್ಲಿಗೆ ಬಂದು ಹೀಗೆ ಹೇಳುವುದೂ ಶಕ್ಯವಿದ್ದೀತು : ''ನೋಡಪ್ಪಾ, ಆ ವಿಷಯವದೇಕೆ ನಿನಗಿಷ್ಟಿಷ್ಟವಾಗಿದೆಯೋ ಅದನ್ನು ದಯಮಾಡಿ ಹೇಳು. ನನಗಂತೂ ಅದು ಅತ್ಯಂತ ಅಪ್ರಕೃತವೆಂದೇ ತೋರುವ ವಿಷಯ... ಇತ್ಯಾದಿತ್ಯಾದಿ.'' ಆಗ ವಿವರಿಸಲು ನೀನು ಪ್ರಯತ್ನಿಸುವೆ. ನಿನ್ನ ವಿಷಯವು ಮಿಕ್ಕ ವಿಷಯಗಳೊಂದಿಗೆ ಹೊಂದಿರುವ ಸಂಬಂಧಗಳನ್ನೆಲ್ಲಾ ನೀನು ತೋರಿಸಬಯಸುವೆ. ಆ ವಿಷಯವನ್ನು ಕುರಿತಾಗಿ ನೀನು ಏತಕ್ಕಾಗಿ ಆಸಕ್ತಿಯನ್ನು ತಳೆದಿರುವೆಯೆಂಬ ಕಾರಣವನ್ನು ಸಮರ್ಥನೆ ಮಾಡಿಕೊಳ್ಳಲು ಎಳಸುವೆ. ನಿನ್ನ ಪ್ರವಚನವೇ ಆಗುತ್ತಿದ್ದಾಗ ಎಷ್ಟೋ ಅದಕ್ಕಿಂತಲೂ ಹೆಚ್ಚಾಗಿ ಈಗ ಈ ಚರ್ಚೆಯ ಸಂದರ್ಭದಲ್ಲಿ ನಿನ್ನ ಭಾವನೆಗಳು ಸಾಗ್ರಹವಾಗಿ ಕೆರಳಿರುವುದನ್ನು ನೀನು ಗಮನಿಸಿಕೊಳ್ಳುವೆ. ಅಷ್ಟೇ ಅಲ್ಲ, ನಿನ್ನ ಸಹೋದ್ಯೋಗಿಯೊಂದಿಗಿನ ಚರ್ಚೆಯಲ್ಲಿ, ಚರ್ಚಿತ ವಿಷಯದಲ್ಲಿ ನಿನ್ನ ಹೃದಯಕ್ಕೆ ಅತ್ಯಂತ ಹತ್ತಿರವಾದ ಅಂಶಗಳೇನೋ ಅಲ್ಲಿಗೆ ನೀನು ಈಗ ಮಾತ್ರವೇ ಸಾರಿರುವ ಸತ್ಯಾಂಶದ ಅರಿವೂ ನಿನಗುಂಟಾಗುವುದು.

ಪ್ರಾಸಂಗಿಕವಾಗಿ, ನಾನಿಲ್ಲೊಂದು ವಿಷಯವನ್ನು ಹೇಳಬಹುದು : ವಿಜ್ಞಾನ ಹಾಗೂ ಸಾಹಿತ್ಯಗಳ ದೂರದೂರದ ಶಾಖೆಗಳಿಂದಲೂ ಪ್ರತಿನಿಧಿಗಳನ್ನು ಒಟ್ಟಿಗೆ ತಂದು ಸಂಶೋಧನಕಾರ್ಯದಲ್ಲಿ ಸಹಶ್ರಮಿಗಳಾಗಿ ಅವರನ್ನು ಸೇರಿಸುವುದಕ್ಕೆ ಪ್ರಬಲತಮವಾದ ಕಾರಣವೊಂದನ್ನು ನಾವಿಲ್ಲಿ ಕಾಣುವೆವು – ಎಂಬುದನ್ನು. ಈ ಸೇರೋಣಗಳಿಗೊಂದು ಪ್ರಯೋಜನವಿದೆ. ತಾನು ಮಾಡುತ್ತಿರುವುದೇನು ಎಂಬುದರ ಬಗೆಗೆ ಆಗಾಗ್ಗೆ ವಿಮರ್ಶಿಸಿಕೊಳ್ಳಲು ಬಲವಂತಪಡಿಸುವುದರಲ್ಲೂ ಈ ಸೇರ್ಪಡೆಗಳು ಸಹಾಯಕ. ಹಾಗೂ ಜ್ಞಾನ ಪ್ರಪಂಚದ ಬೇರೆ ಕ್ಷೇತ್ರಗಳಲ್ಲಿ ತನಗೆ ಸಮನಾದವರೆಂದು ಯಾರನ್ನು ತಾನು ಭಾವಿಸುತ್ತಾನೆ ಅವರಿಗೆ ತನ್ನ ಧ್ಯೇಯೋದ್ದೇಶಗಳನ್ನು ತಿಳಿಸಲೂ ಈ ಸೇರ್ಪಡೆಗಳು ಸಹಾಯಕ, ಹಾಗೂ ಸ್ವಾಸ್ಥ್ಯಪ್ರದ. ಈ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಸಿದ್ಧಪಡಿಸಿಕೊಳ್ಳಲು ಆ ಕಾರಣ ಕಷ್ಟಪಡಬೇಕಾಗುತ್ತದೆಯಷ್ಟೆ. ಏಕೆಂದರೆ ಅವರಿಗೆ ಒಂದು ವೇಳೆ ಅರ್ಥವಾಗದಿದ್ದಲ್ಲಿ, ಅದಕ್ಕೆ ಜವಾಬ್ದಾರನು ತಾನೇ – ಎಂದು ಆತನು ಅಂದುಕೊಳ್ಳುತ್ತಾನೆ. ಹಾಗೂ, ಅದು ತನ್ನ ತಪ್ಪಲ್ಲ, ಅವರದ್ದೇ ತಪ್ಪು – ಎಂಬುದಾಗಿ ದರ್ಪದಿಂದ ಅಂದುಕೊಳ್ಳುವುದನ್ನು ಬಿಡುತ್ತಾನೆ.

**ವಿಜ್ಞಾನಿಗಳ ಸಹಮತಿ ವಸ್ತುನಿಷ್ಠತೆಯ ಸೂಚಕವಲ್ಲವೆ ?**

ಸ್ವಪೂರ್ವವರ್ತಿ ಸಂಶೋಧನೆಯ ಒಟ್ಟಿನ ದಿಶೆ ಹಾಗೂ ಅದರ ನಿರ್ದಿಷ್ಟ ಪ್ರಯೋಗ ಕ್ರಮಗಳತ್ತ ಗಮನವನ್ನು ಸೆಳೆದುದಾವುದು ಎಂಬುದರ ಪರಿಜ್ಞಾನವಿಲ್ಲದೆಯೇ ಒಂದು ಸಂಶೋಧನೆಯ ವಿಶೇಷ ಪ್ರಾಮುಖ್ಯವೇನೆಂಬುದನ್ನು ಗ್ರಹಿಸಲಾಗುವುದಿಲ್ಲ – ಎಂಬುದೇನೋ ಸರಿಯೇ. ಆದರೂ, ವಿಜ್ಞಾನದಲ್ಲಿಯ ಅತ್ಯಾಂತರಿಕತ್ವದ ಅಂಶದತ್ತ ಈ ಯಾಥಾರ್ಥ್ಯವು ವಾಸ್ತವವಾಗಿ ಬೊಟ್ಟು ಮಾಡುತ್ತದೆಯೇ ? – ಎಂಬುದಾಗಿ ಆಳವಾಗಿಯೇ ಪ್ರಶ್ನಿಸಲೂ ಶಕ್ಯವಿದೆ. ಏಕೆಂದರೆ, ಇದಕ್ಕೆ ಪ್ರತಿಪಕ್ಷವಾಗಿ, ತಮ್ಮ ತಮ್ಮ ಅಧ್ಯಯನಗಳ ಶಾಖೆಗಳಲ್ಲಿ ಇನ್ನೂ ಯಾವ ಯಾವ ಸಂಶೋಧನೆಗಳು ಶ್ಲಾಘಿಸಲ್ಪಡುವುವು ಅಥವಾ ಇಲ್ಲ– ಎಂಬುದರ ಬಗೆಗೆ ಜಗದಾದ್ಯಂತದ ವಿಜ್ಞಾನಿಗಳು ಸಹಮತಿಯಿಂದಲೇ ಕೂಡಿರುವರು. ವಸ್ತುನಿಷ್ಠತೆಗೆ ಇದುವೆ ಸಾಕ್ಷ್ಯವಲ್ಲವೆ ? – ಎಂಬುದಾಗಿ ಯಾರಾದರೂ ತಾರ್ಕಿಕವಾಗಿ ಕೇಳಬಹುದಾದದ್ದೇ.

ಅದೇನೆಂಬುದನ್ನು ನಾವು ಖಚಿತಪಡಿಸಿಕೊಳ್ಳೋಣ. ಈ ವಾದವೇನೊ ಜಗತ್ತಿನಾದ್ಯಂತದ ಸಂಶೋಧಕರೆಲ್ಲರಿಗೂ ಅನ್ವಯಿಸುವಂತಹುದೆಂದರೂ, ಅದು ವಿಜ್ಞಾನದ ಒಂದೇ ಶಾಖೆಯನ್ನು ಕುರಿತಾಗಿ, ಹಾಗೂ ನಿರ್ದಿಷ್ಟವಾದ ಒಂದು ಕಾಲವನ್ನು ಕುರಿತಾಗಿ. ಇವರೆಲ್ಲರೂ ವಾಸ್ತವವಾಗಿ ಒಂದೇ ಕಟ್ಟೇ ಸರಿ. ಈ ಸಮೂಹವಾದರೂ ಸುಮಾರು ಚಿಕ್ಕದೆಂದೇ ಹೇಳಬೇಕು; ವಿಸ್ತಾರವಾಗಿ ಚದುರಿಹೋಗಿದೆಯಾದರೂ ಆಧುನಿಕ ಸಂವಹನ ಮಾರ್ಗಗಳು ಅದನ್ನು ಒಂದಾಗಿಸಿವೆ. ಇದರ ಸದಸ್ಯರು ಅದದೇ ನಿಯತಕಾಲಿಕಗಳನ್ನೇ ಓದುತ್ತಾರೆ; ಅಭಿಪ್ರಾಯಗಳನ್ನು ವಿನಿಮಯಮಾಡಿಕೊಳ್ಳುತ್ತಾರೆ. ಮತ್ತು ಇದರ ಫಲಿತಾಂಶವೆಂದರೆ, ಯಾವುದಾದರೊಂದು ವಿಷಯವನ್ನು ಕುರಿತಾಗಿ ಯಾವ ಅಭಿಪ್ರಾಯಗಳು ತರ್ಕಬದ್ಧವೆಂಬುದರ ಬಗೆಗೆ ತಕ್ಕಮಟ್ಟಿಗೆ ನಿಶ್ಚಿತವಾದ ಸಹಮತಿಯಿರುವುದು. ಯಾವುದೇ ಪ್ರಗತಿಯ ಸಾಧನೆಯಾಗಲಿ, ಆ ಬಗ್ಗೆ ಸಮಾನ ವೃತ್ತಿಯರ ಉತ್ಸಾಹವು ಈ ಬಗ್ಗೆ ಮೂಡುತ್ತದೆ. ಯಾವುದೇ ಒಂದು ವ್ಯಕ್ತಿಸಮೂಹವು ಯಾವೊಂದು ಜಯವಿಶೇಷವನ್ನು ಸಾಧಿಸಲಿ, ಆಗ ಸಮಾನ ವೃತ್ತಿಕರೆಲ್ಲರೂ ಸಾಮೂಹಿಕವಾಗಿ ಅದನ್ನು ತಮ್ಮೆಲ್ಲರ ಸಾಮಾನ್ಯ ಸಾಧನೆ ಎಂದೇ ಕೊಂಡಾಡುವರು. ಈ ಲೆಕ್ಕದ

ಮೇರೆಗೆ, ಅಂತಾರಾಷ್ಟ್ರೀಯ ವಿಜ್ಞಾನವು ಅಂತಾರಾಷ್ಟ್ರೀಯ ಕ್ರೀಡೆಯ ಹಾಗೆ ಮತ್ತು ತತ್‌ಕ್ಷಣಕ್ಕೇ ಸಾರ್ಥಕ್ಯಸಂಪಾದಕವಾದುದನ್ನು ಅದರಿಂದಾಗಲಿ ಇದರಿಂದಾಗಲಿ ನಿರೀಕ್ಷೆಮಾಡುವುದೇನೂ ಇರದು – ಎಂಬೀ ಕಾರಣದಿಂದಾಗಿ, ಮಾನುಷೋದ್ಯಮದ ಒಂದು ಉನ್ನತವೂ ನಿಸ್ಸಂಗವೂ ಆದ ಕ್ಷೇತ್ರಕ್ಕೆ ಅವು ಅನ್ವಯಿಸುವಂತಹವು.

**ಅಂತಾರಾಷ್ಟ್ರೀಯ ಕ್ರೀಡೆಯಂತೆ ಅಂತಾರಾಷ್ಟ್ರೀಯ ವಿಜ್ಞಾನ**

ಇನ್ನು ವಿಜ್ಞಾನದ ಈ ಅಂತಾರಾಷ್ಟ್ರೀಯತೆಯೆಂಬುದು ಒಂದು ಶೋಭನವೂ ಸ್ಫೂರ್ತಿಪ್ರದವೂ ಆದ ವಿಷಯ. ಆದರೆ ಇದುವೆ, ವಿಜ್ಞಾನದ ವಸ್ತುನಿಷ್ಠತೆಗೆ ಸಾಧಕವಾಗಿರುವ ಈ ಸಾರ್ವಜನೀನ ಸಮ್ಮತಿಯನ್ನು ಕಿಂಚಿತ್ತಾಗಿ ಸಂಶಯಗ್ರಸ್ತವನ್ನಾಗಿ ಮಾಡುವಂತಹುದು. ಅಂತಾರಾಷ್ಟ್ರೀಯ ಕ್ರೀಡೆಯನ್ನೇ ತೆಗೆದುಕೊಳ್ಳಿ. ಇಂತಿಂತಹ ವ್ಯಕ್ತಿಯು ಎಷ್ಟು ಎತ್ತರ ಜಿಗಿದನು ಅಥವಾ ಇಂತಿಂತಹ ವ್ಯಕ್ತಿಯು ಎಷ್ಟು ದೂರಕ್ಕೆ ಚಕ್ರವನ್ನು ಎಸೆದನು – ಎಂಬುದರ ಬಗ್ಗೆ ವಸ್ತುನಿಷ್ಠವೂ ಪಕ್ಷಪಾತರಹಿತವೂ ಆದ ದಾಖಲಾತಿಗೆ ಬೇಕಾದ ಸ್ಥಿತಿ-ಸಂದರ್ಭಗಳು ಇವೆಯೆಂಬುದೇನೋ ಸರ್ವಥಾ ಸತ್ಯಭೂತವಾದುದೇ. ಆದರೆ ಈ ಉತ್‌ಪತನ, ಚಕ್ರಕ್ಷೇಪಣಗಳೂ ಬಹುಮಟ್ಟಿಗೆ ಒಂದು ಫ್ಯಾಷನ್ನಿನ ಪ್ರಶ್ನೆಯೇ ಅಲ್ಲವೆ? ಮತ್ತು ಭೌತಶಾಸ್ತ್ರದಲ್ಲಿ ಸಹ ಈ ಪ್ರಯೋಗಗಳ ಸಾರ ಎಂಬುದರ ಕಥೆಯೂ ಅಲ್ಲವೆ ?

**ನವೀನತೆಗೆ ಆದರವೆಲ್ಲಿ ?**

ಸಾರ್ವಜನಿಕ ಕ್ರೀಡೆಯನ್ನು ತೆಗೆದುಕೊಂಡರೆ, ನಮಗಲ್ಲಿ ಪರಿಚಯವಿರುವುದೆಂದರೆ ಬಳಸಿಕೊಂಡು ಬರಲಾಗಿರುವ ಕೆಲವು ಬಗೆಗಳ ಆಟಗಳೊಂದಿಗಷ್ಟೆ. ಅದಕ್ಕೆ ಕಾರಣ, ಬಹುಮಟ್ಟಿಗೆ ಅವುಗಳ ಬಗೆಗಿನ ವಿದ್ಯಮಾನ ಕುತೂಹಲವೋ, ಜನಾಂಗೀಯ ರುಚಿಗಳೋ, ವಾತಾವರಣದ ಪರಿಸ್ಥಿತಿಗಳೋ ಆಗಿರುವುದು. ಆದರೆ ಮಾನವನ ಸ್ನಾಯು ಬಲವು ಯಾವ ಸಾಮರ್ಥ್ಯವನ್ನು ಹೊಂದಿದೆಯೋ ಅದರ ಬಗೆಗಿನ ಸರ್ವಥಾ ನಿಃಶೇಷವೂ ವಸ್ತುನಿಷ್ಠವೂ ಆದ ಚಿತ್ರವನ್ನು ಇವು ತಂದುಕೊಡುವುವೆಂದು ಹೇಳಲು ಯಾವ ಆಧಾರವೂ ಇಲ್ಲ ಮತ್ತು ವಿಜ್ಞಾನದಲ್ಲಿಯೂ ನಮಗೆ ಪರಿಚಯವಿರುವುದು ಯಾವುದೋ ಕೆಲವೇ ಪ್ರಾಯೋಗಿಕ ಫಲಿತಾಂಶಗಳ ಗುಂಪಿನ ಬಗೆಗೆ; ಅದಾದರೂ ಅನ್ಯಪ್ರಯೋಗಗಳಿಂದ ಲಭ್ಯವಾಗತಕ್ಕ ಫಲಿತಗಳಿಗೆ ಹೋಲಿಸಿದರೆ ಲವಲೇಶವೆಂಬಷ್ಟು ಅಲ್ಪವಾದುದು. ಕ್ರೀಡಾಪ್ರಪಂಚದಲ್ಲಿ ಯಾವನಾದರೊಬ್ಬ ಆಟಗಾರನು ತನ್ನ ಮಸ್ತಿಷ್ಕವನ್ನು ಕೆಡಿಸಿಕೊಂಡು ಹೊಸದೊಂದು ಆಟವನ್ನು ಆರಂಭಿಸಬೇಕೆಂದು ಕೊಂಡರೆ ಹೇಗೋ ಹಾಗೆ – ಅರ್ಥಾತ್ ಅದನ್ನು ಕುರಿತು ಇತರರನ್ನು ಒಪ್ಪಿಸುವ

# ನಾಗಬೆತ್ತದ ಹುಡುಗಿ



**ಮಾ**ತು ಸೂತಕದ ಮುನ್ನ
ಮೌನ ಗುಡಾರದ ತುಂಬ ಹರಿದಾಡಿ
ಮಾತಾಗುತ್ತದೆ ತುಟಿಯಲ್ಲಿ

ಶಬ್ದ–ನಿಶ್ಶಬ್ದದ ಹಂಗಿನ ತುದಿಯಲ್ಲಿ
ಸೆಳೆತ ತಪ್ಪುತ್ತದೆ ಮತ್ತೆ–ಮತ್ತೆ
ಮಾತಿಗೆ ಮೈಯಾನಿಸಿ
ಅದೇ ಬಯಲಿನ ಮೇಲೆ ದೀಪವಾಗುತ್ತದೆ

ಮೂರನೇ ಜಾವದ ನಿದ್ದೆಗೆ
ಮುತ್ತಿನರಮನೆ ಕಟ್ಟಿ
ಮೋಹದ ಲೋಲಾಕದ ಶಬುದ ಮೆಟ್ಟಿ
ಸುತ್ತು ಬಳಸಿ ಮೌನ ಮುರಿಯುತ್ತದೆ
ಮತ್ತೆ ಬೆಳಕರಿದಂತೆ ಮಾತಾಗುತ್ತದೆ

ಕವುಚಿ ನಿಂತ ಬಯಲ ಬಾಗಿಲ ತುಂಬ
ಒತ್ತುವರಿಯೆಂದು ಒತ್ತಾಗಿ ಮೇಳೈಸಿ
ಹೊತ್ತು–ಹೊತ್ತಿಗೂ ಹಂಬಲದ ದೀಪವುರಿಸಿ
ಮಸಣದ ಹಾದಿಗೆ ಹೆಜ್ಜೆಯಾಗುತ್ತದೆ

ಸರಹೊತ್ತು ಸರಿದಂಗೆ
ನಿಟಾರನೆ ನಿಂತು ಬಿರುಗಣ್ಣು ಬೀರುತ್ತಾ
ಗಾಳಿ ಮಾರೆಮ್ಮನಂತೆ ಕುಣಿ–ಕುಣಿದು
ನೆಲದ ಒಡಲಿನ ತುಂಬ ಕಾಯವಾಗುತ್ತದೆ

ನುಡಿಯಾಗಿ ಸಿರಿಯಾಗಿ
ನೆಲಬದುಗಳ ಬಂಧುವಾಗಿ
ಬಾಡಿದೆದೆಯ ಮೈಯ ಆಭರಣವಾಗಿ
ಕಣ್ಣ ಕಾವಲು ತುಂಬ ನಿಗುರಿ ಹೊಳೆವ ಮಿಂಚಾಗಿ
ಕೊನೆಗವಳು ಮಾತಾಗುತ್ತಾಳೆ

ಪಹಣಿ ಬರೆದಿಟ್ಟು ಹಿಡಿಯಲಾಗದ ಜಲುವ
ತಹಶೀಲು ಮಾಡಿ ಮಡಚಲಾಗದ ಶಬುದ
ಮೈಯ ಕಾವಡಿಯೊಳಗೆ ಮರೆತ ಮತ್ಸ್ಯ–
ಗಂಧಿಯ ಹಾಡು ಮೈಯಾಗಿ ಕಾಯವಾಗಿ

ಅಗ್ನಿಗರ್ಭದ ಹಗಲು ಜೋಳಿಗೆಯಲ್ಲಿ
ಅರ್ಧ ನರಸತ್ತ ಅಧಮರ ಅರವಟ್ಟಿಗೆ
ಆರು ಮೂರಾಗಿ ಮೂರು ನೂರಾಗಿ
ನೂರೆಲ್ಲಾ ಊರ ಸೊಲ್ಲು ನುಡಿಯಾಗಿ

ಪರರ ನುಡಿಯಂಚಿಗೆ ಎಳ್ಳುದೀಪ ಉರಿಸಿ
ಒಂದೊಂದು ಮಾತಾಗಿ,
ಮಾತಿಗೆ ಮೈಯಾದ ನಾಗಬೆತ್ತದ ಹುಡುಗಿಯ–
ಮೈಯಲ್ಲಿ ನೂರೆಂಟು ಕಣ್ಣಾಗಿ.

ಲಕ್ಕೂರು ಪಿ. ಆನಂದ
'ಪದ್ಮಗೌರಿ'
ಪೊಲೀಸ್ ಠಾಣೆ ಎದುರು
ಲಕ್ಕೂರು ಅಂಚೆ
ಮಾಲೂರು ತಾಲ್ಲೂಕು
ಕೋಲಾರ ಜಿಲ್ಲೆ - ೫೬೩ ೧೬೦

ಆಶೆಯನ್ನು ಹೇಗೆ ಹೊಂದಿರಲೇ ಆರನೋ ಹಾಗೆಯೇ – ಇಲ್ಲೂ: ವಿಜ್ಞಾನಿಯೊಬ್ಬನು ತನ್ನ ಊಹಕ ಪ್ರತಿಭೆಯನ್ನೆಲ್ಲ ಬಳಸಿಕೊಂಡು ಈವರೆಗೆ ಯಾರೂ ಚಿಂತಿಸಿಲ್ಲದ ನೂತನ ಸಂಶೋಧನ ಪದ್ಧತಿಯೊಂದರ ಬಗ್ಗೆ ಮಾಡುವ ಪ್ರಯತ್ನವೂ ಹಾಗೆಯೇ ವ್ಯರ್ಥವೇ ಆಗುತ್ತದೆ. ವಿಜ್ಞಾನದ ಇತಿಹಾಸದಿಂದ ನಾನು ತೆಗೆದು ತೋರಿಸಿರುವ ಪ್ರಸಂಗಗಳು ಇದಕ್ಕೆ ಸಾಕ್ಷಿ.

**ವಿಜ್ಞಾನಿಯ ಮೇಲಿನ ಅನ್ಯಪ್ರಭಾವಗಳು**

ನಮ್ಮ ನಾಗರಿಕತೆಯೆಂಬುದು ಒಂದು ಸಜೀವಸಾಮಸ್ತ್ಯ. ವೈಜ್ಞಾನಿಕ ಸಂಶೋಧನೆಗಾಗಿ ತಮ್ಮ ಜೀವಿತವನ್ನೇ ಮುಡಿಪಾಗಿಡುವ ಅದೃಷ್ಟಶಾಲಿ ವ್ಯಕ್ತಿಗಳಾರುಂಟೋ ಅವರು ಸಸ್ಯಶಾಸ್ತ್ರಜ್ಞರೋ ಭೌತಶಾಸ್ತ್ರಜ್ಞರೋ ರಾಸಾಯನಿಕತಜ್ಞರೋ ಆದೇನಾಗಿರಬಹುದೋ ಅದಷ್ಟು ಮಾತ್ರವೇ ಅಲ್ಲ. ಅವರು ಮನುಷ್ಯರು; ತಮ್ಮ ಕಾಲದ ಮಕ್ಕಳು. ಪ್ರಯೋಗಶಾಲೆಯನ್ನು ಪ್ರವೇಶಿಸಿದಾಗಾಗಲಿ, ಪ್ರವಚನಸಭೆಯ ವೇದಿಕೆಯನ್ನೇರಿದಾಗಾಗಲಿ, ವಿಜ್ಞಾನಿಯು ತನ್ನ ಮರ್ತ್ಯಶರೀರವನ್ನು ಕಳಚಿ ಹಾಕಿ ಬಿಡಲಾಗುವುದಿಲ್ಲ. ಆತನ ಪ್ರಧಾನವಾದ ಉತ್ಸುಕತೆಯು ತರಗತಿ ಪ್ರಯೋಗಾಲಯಗಳಲ್ಲಿ ಸಂಶೋಧನೆಯತ್ತ ಇರಬಹುದು – ಹಗಲಿನಲ್ಲಿ; ಆದರೆ ಹಿಂದಿನ ಮಧ್ಯಾಹ್ನ-ಸಂಜೆಗಳಲ್ಲಿ ಆತನು ಮಾಡುತ್ತಿದ್ದುದೇನು ? ಮಿಕ್ಕವರು ಹೇಗೋ ಹಾಗೆ ಆತನೂ ಸಾರ್ವಜನಿಕ ಸಭೆಗೆ ಹೋಗುತ್ತಾನೆ, ಅಥವಾ ಪತ್ರಿಕೆಗಳಲ್ಲಿ ಅವುಗಳ ಬಗೆಗೆ ಓದುತ್ತಾನೆ. ವಿಶೇಷವಾಗಿ ಇಂದಿನ ದಿನಗಳಲ್ಲಿ, ಜನಹಿತಪರವಾದ, ಮುಂಚೂಣಿಯಲ್ಲಿ ಕಿಕ್ಕಿರಿದು ಸೇರಿಕೊಳ್ಳುತ್ತಲೇ ಇರುವ ಚಿಂತನ ಸ್ತೋಮಗಳ ಚರ್ಚೆಯನ್ನು ತಪ್ಪಿಸಿಕೊಳ್ಳಲು ಆತನು ಇಷ್ಟಪಡನು. ವಿಜ್ಞಾನಿಗಳು ಕೆಲವರು ಸಂಗೀತಪ್ರಿಯರು; ಕೆಲವರು ಕಾದಂಬರಿಗಳನ್ನೂ ಪದ್ಯಗಳನ್ನೂ ಓದುವರು; ಕೆಲವರು ಚಿತ್ರಮಂದಿರಗಳಿಗೆ ಹೋಗುವರು; ಕೆಲವರಿಗೆ ಸಂಗೀತ-ಶಿಲ್ಪಗಳಲ್ಲಿ ರುಚಿ. ಸಿನೆಮಾ ಪ್ರಭಾವವನ್ನು ತಾನು ತಪ್ಪಿಸಿಕೊಳ್ಳುವವನೆಂದೂ, ಅದನ್ನು ತಾನು ಲೆಕ್ಕಿಸನೆಂದೂ ಯಾರಾದರೂ ಭಾವಿಸುವುದಾದರೆ, ಅಂತಹವರು ನಿಜಕ್ಕೂ ಭ್ರಾಂತರೇ ಸರಿ. ಏಕೆಂದರೆ, ಸಿನೆಮಾತಾರೆಗಳ ಚಿತ್ರಗಳತ್ತ ಹಾಗೂ ಜಾಹೀರಾತುಗಳ ಪ್ರದರ್ಶನಿಕೆಗಳತ್ತ ಗಮನಹರಿಸದೆ ಆತನಿಗೆ ರಸ್ತೆಯಲ್ಲಿ ನಡೆಯಲೇಆಗದು. ಸಾರಾಂಶವಾಗಿ, ನಾವುಗಳೆಲ್ಲರೂ ನಮ್ಮ ಸುತ್ತಿನ ಸಾಂಸ್ಕೃತಿಕ ಪರಿಸರದ ಭಾಗಿಗಳಾಗಿರುತ್ತೇವೆ.

**ವಿಜ್ಞಾನವೂ ಫ್ಯಾಷನ್ನೇ ?**

ಇವೆಲ್ಲದರಿಂದಲೂ ಸಿದ್ಧವಾಗುವುದೆಂದರೆ, ಯಾವುದೇ ಒಂದು ನಿರ್ದಿಷ್ಟ ವಿಷಯ ಹಾಗೂ ಅದರ ನಿರ್ದಿಷ್ಟ ದಿಕ್ಕುಗಳಲ್ಲಿ ಒಬ್ಬನು ತೋರುವ ಆದರ ಆಸಕ್ತಿಗಳು ಆತನ ಪರಿಸರದಿಂದಲೂ, ಸಾಂಸ್ಕೃತಿಕ ಸನ್ನಿವೇಶದಿಂದಲೂ, ತಾನು ಜೀವಿಸಿರುವ ಕಾಲದ ಪ್ರವೃತ್ತಿಸ್ವಾಭಾವ್ಯದಿಂದಲೂ ಅವಶ್ಯವಾಗಿಯೂ ಪ್ರಭಾವಿತವಾಗಿರುವುದು – ಎಂಬುದಾಗಿ. ನಮ್ಮ ನಾಗರಿಕತೆಯ ಎಲ್ಲಾ ಶಾಖೆಗಳಲ್ಲೂ ಯಾವುದೋ ಒಂದು ಜಾಗತಿಕನೋಟವು ಪ್ರಭಾವವತ್ತಾಗಿರುವುದು; ರಾಜಕೀಯದಲ್ಲಾಗಲಿ ಕಲೆಯಲ್ಲಾಗಲಿ ಅಥವಾ ವಿಜ್ಞಾನದಲ್ಲಾಗಲಿ ನಾನಾ ಚಟುವಟಿಕೆಗಳು ಆಕರ್ಷಕವಾಗಿರುವುದಕ್ಕೆ ಕಾರಣ ಅವು ಆ ಯುಗದ ಫ್ಯಾಷನ್‌ಗಳಾಗಿರುವುದೇ 'ನಿಖರ'ವಾದ ವಿಜ್ಞಾನವಾದ ಭೌತಶಾಸ್ತ್ರದಲ್ಲಿ ಸಹ ಇವುಗಳು ಅವಶ್ಯವಾಗಿಯೂ ತಮ್ಮನ್ನು ತೋರಿಸಿಕೊಳ್ಳತಕ್ಕವೇ.

**ಪರಪ್ರಭಾವಗಳನ್ನು ಪರಿಭಾವಿಸುವ ಬಗೆಯುಂಟೆ ?**

ಕ್ರಿಯಾಶೀಲವಾಗಿರುವ ಅಂತಹ ವ್ಯಕ್ತಿಗತಪ್ರಭಾವಗಳನ್ನು ನಾವು ಗುರುತಿಸುವುದಾಗಲಿ, ಬೊಟ್ಟು ಮಾಡಿ ತೋರಿಸುವುದಾಗಲಿ, ಆಗುವುದು ಹೇಗೆ ? ಸಮಕಾಲೀನ ದೃಗ್‌ವಿಧಾನಕ್ಕೆ ಮಾತ್ರ ನಮ್ಮನ್ನು ನಾವು ಸೀಮಿತಗೊಳಿಸಿಕೊಂಡಿದ್ದಲ್ಲಿ ಅದು ಸುಲಭಸಾಧ್ಯವಾಗದು. ಏಕೆಂದರೆ ಜನಸ್ತೋಮದ ಒಟ್ಟಿನ ಪ್ರವೃತ್ತಿಯ ಪ್ರಭಾವಕ್ಕೆ ವೈಯಕ್ತಿಕ ದಿಶೆಗಳು ಇಷ್ಟರಮಟ್ಟಿಗೆ ಒಳಪಟ್ಟಿವೆಯೆಂಬುದನ್ನು ತೋರಿಸಲು ಒಂದೇ ಸಾಂಸ್ಕೃತಿಕ ಪ್ರವಾಹದಲ್ಲಿ ಆಧಾರಭೂತವಾದ ಮಾನರೇಖೆಗಳೇ ಇರಲಾರವು. ಈಗಿನ ಕ್ಷಣದಲ್ಲಿ ಭೂಮಿಯನ್ನೆಲ್ಲಾ ವ್ಯಾಪಿಸಿಕೊಂಡಿರುವ ಹೆಚ್ಚು ಕಡಿಮೆ ಒಂದೇ ಸಂಸ್ಕೃತಿಯೆಂಬುದೊಂದುಂಟು ಮತ್ತು ಇದರಿಂದಾಗಿ ನಾನಾ ದೇಶಗಳಲ್ಲಿಯ ವಿಜ್ಞಾನಾತ್ಮಕ ಹಾಗೂ ಕಲಾತ್ಮಕ ಬೆಳವಣಿಗೆಗಳು ಬಹುಮಟ್ಟಿಗೆ ಸಮವೇ ಆದ ಏಕವೇ ಆದ ಕಾಲಿಕವಾದ ಪರಿಯಿಂದ ಪ್ರಭಾವಿತವಾಗಿರುತ್ತವೆ. ಆ ಕಾರಣಕ್ಕಾಗಿ, ನಾನು ಹೇಳಿರುವುದನ್ನು ತಿಳಿಯಾಗಿಸುವುದಕ್ಕೋಸ್ಕರ ಐತಿಹಾಸಿಕವಾದ ಉದಾಹರಣೆಗಳನ್ನು ತೆಗೆದುಕೊಳ್ಳುವುದೇ ಉತ್ತಮವಾದುದು. ಏಕೆಂದರೆ, ಹಿಂದಿನ ಕಾಲದಲ್ಲಿ ಜೈವಿಕ ಸಂಸ್ಕೃತಿಗಳು ಇನ್ನೂ ಚಿಕ್ಕ ಚಿಕ್ಕ ಭೂಪ್ರದೇಶಗಳಿಗೇ ಸೀಮಿತವಾಗಿರುತ್ತಿದ್ದುವು; ಹಾಗೂ ಈ ಭೂಗ್ರಹದ ಮೇಲೆ ಏಕಕಾಲದಲ್ಲೇ ಅವುಗಳ ಇನ್ನೂ ಹೆಚ್ಚಿನ ವೈವಿಧ್ಯವಿದ್ದಿತು.

**ಇತಿಹಾಸ ಸಮೀಕ್ಷೆ : ಗ್ರೀಕರ ಕುಂಠಿತಪ್ರಜ್ಞೆ**

ಒಂದೇ ಸಾಂಸ್ಕೃತಿಕ ಪರಿಸರದಲ್ಲಿಯ ಪ್ರತಿಯೊಂದು ಕ್ರಿಯಾರೇಖೆಯೂ ಆ ಸಂಸ್ಕೃತಿಯ ಸಾಧಾರಣಪ್ರವೃತ್ತಿಗೆ ವಶವಾಗಿರುವುದು – ಎಂಬುದಕ್ಕೆ ಗ್ರೀಕರ ಸಂಸ್ಕೃತಿಯು ಪ್ರಥಮ ಶ್ರೇಣಿಯ ಉದಾಹರಣೆ. ಗ್ರೀಕರ ವಿಜ್ಞಾನ ಹಾಗೂ ಕಲೆಗಳಲ್ಲಿ, ಹಾಗೂ ಒಟ್ಟಿನ ಜೀವನ ದೃಷ್ಟಿಕೋನದಲ್ಲಿಯೇ – ನಾವೊಂದು ಸಮಾನಲಕ್ಷಣವನ್ನು ಕ್ಷಣಮಾತ್ರದಲ್ಲಿಯೇ ಗುರುತಿಸಬಹುದು. ಸ್ಪಷ್ಟವೂ ಪಾರದರ್ಶಕವೂ ಅಶಿಥಿಲವೂ ಆದ ಯೂಕ್ಲಿಡನ ಜ್ಯಾಮಿತಿಯ ಸಂರಚನೆಯು ಋಜುವೂ ಸರಳವೂ ಮಿತವೂ ಆದ ಗ್ರೀಕ್ ದೇವಾಲಯಾಕಾರಗಳಿಗೆ ಸಂವಾದಿಯಾಗಿರುವುದು. ದೇವಾಲಯದ ಇಡೀ ರಚನೆಯೇ ಕಿರಿದೂ ನಿಕಟವೂ ದ್ರಷ್ಟೃವಿನ ನೇತ್ರ ವಿಷಯಕ್ಕೆ ಪೂರ್ಣವಾಗಿ ಒಳಪಡುವಂತಹುದೂ, ತನ್ನ ವಿಸ್ತೃತಿಯಲ್ಲಾಗಲಿ ಆಕಾರದಲ್ಲಾಗಲಿ ಎಲ್ಲೂ ಮರೆಯಾಗದುದೂ, ಕಣ್ಗಳಿಗೆ ಅಗೋಚರವಾಗದುದೂ ಆಗಿರುವಂತಹುದು. ಗೋಥಿಕ್ ವಾಸ್ತುವಿಗಿಂತ ಇದು ತೀರಭಿನ್ನವೇ ಆದುದು. ಅಂತೆಯೇ ಗ್ರೀಕರ ವಿಜ್ಞಾನದಲ್ಲಿ ಅನಂತದ ಕಲ್ಪನೆಯ ಅರ್ಥವೂ ಅತ್ಯಲ್ಪವಾಗಿ ಇರುವಂತಹುದು. ಮಿತಿರಹಿತವಾದ ಕ್ರಿಯಾವಳಿಯೆಂಬ ಕಲ್ಪನೆಯೇ ಗ್ರೀಕರಿಗೆ ಭೀತಿಪ್ರದವಾಗಿತ್ತು – ಪ್ರಸಿದ್ಧವಾದ ಅಕಿಲ್ಲೆಸ್ ಹಾಗೂ ಆಮೆಯ ವಿರೋಧಾಭಾಸದಲ್ಲಿ ಸಾಬೀತಾಗುವಂತೆ ಡೆಡಿಕಿಂಡ್ ಕೊಟ್ಟಂತಹ ಅಭಾಜ್ಯಾಂಕ ಲಕ್ಷಣದಲ್ಲಿ ಗ್ರೀಕಚಿತ್ತವು ಕುತೂಹಲಗೊಳ್ಳಲು ಸಾಧ್ಯವೇ ಇಲ್ಲ – ಚಚ್ಚೌಕದ ಅಥವಾ ಘನದ ಶ್ರುತಿರೇಖೆಯ ಮೂಲಕ ಸಂಕ್ಷಿಪ್ತ ರೂಪದಲ್ಲಿ ಅಭಾಜ್ಯಾಂಕವೆಂಬುದರ ಕಲ್ಪನೆಯು ಆಗಲೇ ವಿದ್ಯಮಾನವಾಗಿತ್ತಾದರೂ ನಮ್ಮ ನಾಟಕಕ್ಕೆ ಹೋಲಿಸಿದರೆ ಗ್ರೀಕರ ನಾಟಕವು – ತತ್ರಾಪಿ ಆರಂಭಿಕ ಕಾಲದವು – ತೀರಾ ಸ್ಥಾವರವಾದವು. ಅದರಲ್ಲಿ ಕ್ರಿಯೆಯೆಂಬುದೇ ಹೆಚ್ಚು ಕಡಿಮೆ ಇಲ್ಲವಾಗಿದೆ : ದುರಂತ ಸನ್ನಿವೇಶವೊಂದು ನಮ್ಮ ಕಣ್ಣ ಮುಂದಿರುತ್ತದೆ ಮತ್ತು ಕೆಲವು ನಿರ್ದಿಷ್ಟ ಸಂದರ್ಭಗಳಲ್ಲಿ ಮನುಷ್ಯನೊಬ್ಬನು ತೆಗೆದುಕೊಳ್ಳುವ ತೀರ್ಮಾನಗಳಿಗೆ ಕ್ರಿಯೆಯು ಸೀಮಿತವಾಗಿರುತ್ತದೆ. ಅಂತೆಯೇ ಗ್ರೀಕರ ಭೌತಶಾಸ್ತ್ರದಲ್ಲೂ ಗತಿಶೀಲತೆಯು ಕಾಣಲಿಕ್ಕೆ ದೊರೆಯದು. ಮುಂದು ಮುಂದಿನ ಘಟ್ಟಗಳಲ್ಲಿ ಚಲನದ ವಿಶ್ಲೇಷಣವೆಂಬುದನ್ನು ಗ್ರೀಕರು ಸಂಭಾವಿಸಲೂ ಇಲ್ಲ – ಮುಂದಿನ ಕ್ಷಣದಲ್ಲಿ ಏನಾಗುವುದೋ ಅದರ ಕಾರಣವಾಗಿ ಹಿಂದಿನ ಕ್ಷಣದಲ್ಲೇನು ? – ಎಂಬುದನ್ನು ಹೇಗೆ ನ್ಯೂಟನ್ನನು ಕೇಳಿದನೋ ಹಾಗೆ ಅಲ್ಲಿಲ್ಲ. ಈ ಬಗೆಯ ವಿಶ್ಲೇಷಣವೆಂಬುದು ಚಿಲ್ಲರೆಯೆಂದೂ ತನ್ನ ಸೌಂದರ್ಯಪ್ರಜ್ಞೆಗೆ ವಿಸಂವಾದಿಯೆಂದೂ ಗ್ರೀಕನು ಭಾವಿಸುವವನಾಗಿದ್ದ. ವಸ್ತುವೊಂದು ಸಮಗ್ರವಾಗಿ ಚಲಿಸುವುದರ ಪಥವನ್ನು ಆತನು ತಿಳಿದುಕೊಳ್ಳುವುದು – ಎಂಬುದಾಗಿ ಚಿಂತಿಸಲಾರದವನಾಗಿದ್ದ; ಆದರೆ ಅದು ಈಗಾಗಲೇ ಸಮಗ್ರವಾಗಿಯೇ ಅಲ್ಲಿದ್ದು ಬಂದಿರುವುದು – ಎಂಬುದಾಗಿ ಆತನ ಚಿಂತನೆ ಸರಳತಮವೆನಿಸುವ ಚಲನೆಯಲ್ಲಿ ಋಜುರೇಖಾ ಚಲನ ಕ್ರಮವು ತಿರಸ್ಕೃತವಾಯಿತು. ಏಕೆಂದರೆ, ತನ್ನ ಪೂರ್ಣವ್ಯಾಪ್ತಿಯಲ್ಲಿ ಸರಳರೇಖೆಯೂ ಗೋಚರವಾಗುವಂತಹುದಲ್ಲ: ಋಜುರೇಖಾ ಚಲನೆಯು ಎಂದೂ ಮುಗಿಯುವುದೂ ಅಲ್ಲ, ಸಮಗ್ರವಾಗಿ ಗ್ರಾಹ್ಯವೂ ಅಲ್ಲ. ಚಲನ ವಿಷಯಕವಾದ ತಮ್ಮ ಸಮಸ್ಯೆಯನ್ನು ಗ್ರೀಕರು ಬಗೆಹರಿಸಿಕೊಂಡುದು, ನಕ್ಷತ್ರ ಪರಿಕೀರ್ಣವಾದ ಆಕಾಶವನ್ನು ಗಮನಿಸಿ ನೋಡುವುದರಿಂದ. ಇದರಿಂದ ಅವನು ತೀರ್ಮಾನಿಸಿಕೊಂಡುದೆಂದರೆ, ವಸ್ತುವೊಂದರ ಅತ್ಯಂತ ಪರಮವೂ ಸಹಜವೂ ಆದ ಗತಿಯೆಂದರೆ ಸಮಾನ ವೇಗದಿಂದ ವೃತ್ತಾಕಾರವಾದ ಪಥವನ್ನು ಅದು ಕ್ರಮಿಸುವಂತಹುದು – ಎಂಬುದಾಗಿ; ಹಾಗೂ ಇಂತಹ ಚಲನೆಯಲ್ಲಿ ಅದನ್ನು ಬೃಹತ್ತರವಾದ ಕೇಂದ್ರಸ್ಥ ವಸ್ತುವೊಂದು ನಿಯಮಿಸುವುದಾಗಿ ಪ್ರಚೋದಿಸುವುದೂ ಆಗಿದೆಯೆಂದು. ಗ್ರೀಕ್ ಚಿತ್ತದ ಈ ಬಾಲಿಶ ನಿರ್ಮಿತಿಯನ್ನು ಕುರಿತಾಗಿ ಅಪಹಾಸ್ಯ ಮಾಡುವುದಕ್ಕೆ ನಮಗೆ ಹಕ್ಕೆಂಬುದೇನೂ ಇಲ್ಲವೆಂದು ನಾನು ಭಾವಿಸುತ್ತೇನೆ. ಸ್ವಲ್ಪವೇ ಕಾಲದ ಹಿಂದೆ ಇದೇ ತೆರನಾದದ್ದನ್ನೇ, ಸ್ವತಃ ನಾವೇ, ಅಣುವಿನ ಪಾರಿಮಾಣಿಕ ಪ್ರಮೇಯದಲ್ಲಿ ಮಾಡುತ್ತಿದ್ದೆವು. ಇದಕ್ಕೆ ಸದೃಶವಾದ ಬಾಲಿಶತೆಗಳಲ್ಲೇ ನಾವು ತೃಪ್ತಿಪಟ್ಟುಕೊಂಡಿದ್ದೇವೆ ಮತ್ತು ಅವುಗಳಿಂದಾಚೆಗಿನ ಯಾವ ಹೆಜ್ಜೆಗಳನ್ನು ನಾವು ಯತ್ನಿಸಿದ್ದೆವೋ ಅವು ನ್ಯೂಟನ್ನಿನ ಭೇದಾರ್ಥಕ ವಿಶ್ಲೇಷಣೆಯ ಟೊಳ್ಳುತನವನ್ನು ಇನ್ನೂ ಊರಿಸಿದೆಯೇ ವಿನಾ ಅವಾಸ್ತವಗೊಳಿಸಿಲ್ಲ.

**ಆಧುನಿಕ ನಿದರ್ಶನ : ಅನ್ವಯ ಚಾತುರ್ಯ**

ಮತ್ತೊಂದು ನಿದರ್ಶನದತ್ತ ತಿರುಗೋಣ. ಮತ್ತಿನ್ನಾವುದೇ ವಿಚಿಂತಿತಕ್ಕಿಂತಲೂ ಹೆಚ್ಚಾಗಿ ಆಧುನಿಕ

ವಿಜ್ಞಾನದ ಎಲ್ಲಾ ಮಂಡಲಗಳಲ್ಲೂ ವಿಕಾಸವಾದವು ಪ್ರಭವಿಷ್ಣುಪ್ರಭಾವವನ್ನು ಹೊಂದಿದೆ; ಅಷ್ಟೇಕೆ, ಆಧುನಿಕ ಜೀವನದ ಸಮಗ್ರತೆಯಲ್ಲಿಯೇ ಅದು ಸಾಧಾರಣ ರೂಪದಲ್ಲೂ ಹಾಗೂ ಡಾರ್ವಿನ್ನನು ಆ ಬಗ್ಗೆ ಇತ್ತ ಅದರ ವಿಶಿಷ್ಟ ನಿರೂಪಣೆಯಲ್ಲಿ (– ಅರ್ಥಾತ್ 'ಸಮರ್ಥತಮವಾದುದರ ಉಳಿವಿ'ನ ದ್ವಾರಾ ಸ್ವಯಂಕೃತವಾದ ಹೊಂದಾಣಿಕೆಯೆಂಬುದು). ಈ ವಿಚಿಂತಿತವು ಅದೆಷ್ಟು ಗಾಢವಾಗಿತ್ತು ಎಂಬುದರ ಸೂಚನೆಯನ್ನು ಕೊಡುವುದಾದರೆ, ಷೋಪನ್‌ಹಾವರ್‌ನಂತಹ ಸ್ಪಷ್ಟದೃಷ್ಟಿಯ ಬುದ್ಧಿಜೀವಿಯು ಅದನ್ನು ಗ್ರಹಿಸಲಾಗಲಿಲ್ಲವೆಂಬುದನ್ನು ನಾವು ಮೊದಲು ಸ್ಮರಿಸಬೇಕು. ಆತನಂತೂ ಅದನ್ನು ಉಗ್ರವಾಗಿ ನಿರಾಸೆಮಾಡಿದನು. ಏಕೆಂದರೆ, 'ಈಗ' ಎಂಬುದು ಸದಾಕಾಲಕ್ಕೂ ಏಕವೇ ಆದ ಕ್ಷಣವಾಗಿರುತ್ತದೆ; ಹಾಗೂ 'ಅಹಂ' ಎನ್ನುವುದೂ ಏಕೈಕ ವ್ಯಕ್ತಿಯೇ ಆಗಿರುತ್ತಾನೆ – ಎಂಬ ಅಷ್ಟೇ ಆಳವಾದ ತನ್ನ ಸಿದ್ಧಾಂತಕ್ಕೆ ಅದು ವಿರುದ್ಧವೆಂದು ಆತನು ಬಗೆದನು. ಆದರೆ ಅತ್ತ ಹೆಗೆಲನ ಸಂಚಿಂತನವು ಅದನ್ನೂ ಒಳಪಡಿಸಿಕೊಂಡದ್ದಾಗಿ ತನ್ನ ಆಯುಸ್ಸನ್ನು ನಮ್ಮ ಕಾಲದವರೆಗೂ – ತನ್ನ ಸಹಜಾಯುರ್ಮಾನವನ್ನೂ ಮೀರಿ – ದೀರ್ಘತರವಾಗಿಸಿಕೊಂಡಿದೆ. ಅಷ್ಟೇ ಅಲ್ಲದೆ, ಎರ್‌ನ್‌ಸ್ಟ್ ಮಾಖ್ (೧೮೩೮-೧೯೧೬) ಇದನ್ನು ವೈಜ್ಞಾನಿಕ ಕ್ರಿಯಾವಳಿಗೇ ಅನ್ವಯಿಸಿಬಿಟ್ಟಿದ್ದಾನೆ : ಆತನ ಅವಲೋಕನವೇನೆಂದರೆ, ವಾಸ್ತವಾಂಶಗಳಿಗೆ ಹೊಂದುವಂತಹವುಗಳಲ್ಲಿ ಉಪಯುಕ್ತತಮವಾದುದು ಯಾವುದೋ ಅವುಗಳನ್ನು ಹುಡುಕುವುದರ ಮೂಲಕ ಅಂತಹ ಚಿಂತನಗಳ ಕ್ರಮಿಕವಾದ ಅಳವಡಿಕೆಯೇ ಅದು ಹೌದು – ಎಂಬುದಾಗಿ; ಹಾಗೂ, ಅದಕ್ಕೆ ಅಷ್ಟು ತಕ್ಕದ್ದಲ್ಲದರ ಪರಿತ್ಯಾಗವೂ ಹೌದು – ಎಂಬುದಾಗಿ. ಜ್ಯೋತಿರ್ಭೌತ ವಿಜ್ಞಾನದಲ್ಲಿ ನಾವು ಕಲಿತಿರುವುದೆಂದರೆ : ಬೇರೆ ಬೇರೆ ಬಗೆಯ ನಕ್ಷತ್ರಗಳೆಂದರೆ, ಏಕಮಾತ್ರವಾದ ತಾರಕಾವಿಕಾಸದ ಬೇರೆಬೇರೆ ಘಟ್ಟಗಳೆಂದರೆ, ಅವನ್ನು ನೋಡುವುದೆಂಬುದನ್ನು ಮತ್ತು ತೀರ ಈಚೆಗೆ ಈ ಅಭಿಪ್ರಾಯವನ್ನು ಮುಂದಿಡುವುದನ್ನೂ ಕಾಣುತ್ತೇವೆ : ಒಟ್ಟಿನಲ್ಲಿ ಜಗತ್ತು ಸಹ ನೈಶ್ಚಲ್ಯದ ಸ್ಥಿತಿಯಲ್ಲಿ ಪ್ರಾಯಶಃ ಇಲ್ಲ; ಆದರೆ ಯಾವುದೋ ಒಂದು ನಿರ್ದಿಷ್ಟ ಕಾಲದಲ್ಲಿ – ಅದಾದರೂ ತೀರಾ ಹಿಂದೆಂಬುದಾಗಿಯೂ ಅಲ್ಲವೆಂದು ಸಂಕ್ಷೇಪವಾಗಿ ಹೇಳಬಹುದು – ತನ್ನ ಸಾಕಷ್ಟೇ ಭಿನ್ನವಾಗಿದ್ದ ಸ್ಥಿತಿಯಿಂದ, ನಿರಂತರವೂ ಪರಿವರ್ಧನಶೀಲವಾದ ಘಟ್ಟಕ್ಕೆ ಅದು ಬದಲಾಗಿರುವುದೆಂಬುದಾಗಿ – ಹಾಗೂ ಹಬ್‌ಲ್‌ನ ದರ್ಶನಾತಿಶಯಗಳಿಂದಾಗಿ ಇದುವೆ ಅದರ ವರ್ತಮಾನ ಘಟ್ಟವೆಂಬುದಾಗಿ – ನಾವು ಅರಿತಿದ್ದೇವೆ. (ಈ ಅವಲೋಕನಗಳು ತೋರಿಸುವುದೇನೆಂದರೆ ತೀರ ದೂರದ ಶುಕ್ಲಪಟಲಗಳ ವರ್ಣರೇಖೆಗಳು ಅಧಿಕತರ ತರಂಗಾಂತರಗಳಿಗೆ ಸಾಕಷ್ಟೇ ಬದಲಿಸುವುವೆಂದು; ಮತ್ತು ಈ ಬದಲಿಕೆಯು ಆ ಶುಕ್ಲಪಟಲದ ದೂರಕ್ಕೆ ಅನುಪಾತ ಎಂದು. ನಮ್ಮಿಂದ ದೂರಸಾಗುತ್ತಿರುವ ಈ ಪುಂಜಗಳ ಅತಿತಮವಾದ ಮಹಾವೇಗಗಳನ್ನೂ ಇದು ತೋರಿಸಿಕೊಡುವುದು; ಅಖಂಡ ಜಗತ್ತೇ ಒಂದು ಸಾಧಾರಣವಾದ ಪ್ರವಿಸ್ತರಣದ ಕ್ರಿಯಾಕ್ರಮದಲ್ಲಿರುವಂತೆ ಕಾಣುತ್ತದೆ). ಈ ಊಹಿತವು ಕೇವಲ ಶೂನ್ಯವಾದ ಭ್ರಮ ಕಲ್ಪನೆಯೆಂದು ನಾವೆಣಿಸೆವು – ಏಕೆಂದರೆ ವಿಕಾಸವಾದದ ವಿಚಿಂತಿತಕ್ಕೆ ನಾವೀಗ ಹೊಂದಿಕೊಂಡು ಬೆಳೆದುಬಿಟ್ಟಿದ್ದೇವೆ. ಇಂತಹ ವಿಚಿಂತಿತಗಳನ್ನೇನಾದರೂ ಪೂರ್ವ ಕಾಲದಲ್ಲಿ ಮುಂದಿಟ್ಟಿದ್ದಲ್ಲಿ, ಅವನ್ನು ಅರ್ಥಶೂನ್ಯವೆಂಬುದಾಗಿ ತಳ್ಳಿಹಾಕಲಾಗುತ್ತಿತ್ತು.

**ಎರಡು ಮಾರ್ಮಿಕ ಉದಾಹರಣೆಗಳು**

ಇದೆಲ್ಲವೂ ತೋರಿಸುವುದೇನೆಂದರೆ – ಯಾವ ಕಾಲಘಟ್ಟದ ಅಂಗವಾಗಿರುವ ಚಿತ್ತಭಂಗಿ ಇರುವುದೋ, ಅದನ್ನೇ ವಿಜ್ಞಾನವು ಅದೆಷ್ಟೊಂದು ಅವಲಂಬಿಸಿರುವುದೆಂದು. ಯಾವಾಗ ನಾವೇ ಒಂದು ಸಾಧಾರಣ ಸಂದರ್ಭದ ಮಧ್ಯದಲ್ಲಿ ಇರುವವರಾಗಿರುವೆವೋ, ಆಗ ಯಾವುದೇ ಸಾಧಾರಣ ಸಾಮ್ಯಗಳನ್ನು ಕಾಣಲು ನಮಗೇ ಕಷ್ಟವಾಗುವುದು. ತೀರ ಸಾಮೀಪ್ಯದಿಂದಾಗಿ ನಾವು ಸ್ಫುಟ ಭೇದಗಳನ್ನು ಮಾತ್ರವೇ ಕಂಡೇವು, ಸಾಮ್ಯಗಳನ್ನೂ ಗುರುತಿಸಲಾರೆವು. ಇದು ಹೇಗೆಂದರೆ – ಒಂದೇ ಕುಟುಂಬದ ಹಲವು ಸದಸ್ಯರನ್ನು ಒಬ್ಬರಾದ ಮೇಲೊಬ್ಬರನ್ನು ನಾವು ಮೊಟ್ಟಮೊದಲು ನೋಡಿದಾಗ ಒಡನೆಯೇ ಸಾಮ್ಯಗಳನ್ನು ಗುರುತಿಸುವೆವು, ಸರಿಯೇ; ಆದರೆ ಆ ಕುಟುಂಬವನ್ನೇ ಸನಿಹದಿಂದ ನಾವು ಅರಿಯುವಂತಾದಾಗ, ಕೇವಲ ಭೇದಗಳನ್ನೇ ನೋಡುವೆವು. ಸಾಂಸ್ಕೃತಿಕಾವಧಿಯೊಂದರೊಳಗೆ ನಾವಿರುವಾಗಲೂ ಹಾಗೆಯೇ: ಆ ಕಾಲಮಿತಿಯೊಳಗಣ ಮಾನವಕ್ರಿಯೆಗಳ ನಾನಾ ಶಾಖೆಗಳಿಗೆ ಸಂಬಂಧವಾದ ಲಕ್ಷಣಗಳನ್ನು ಗುರುತಿಸುವುದೂ ಕಷ್ಟವಾಗುವುದು. ಇದಕ್ಕೆ ನಿದರ್ಶನವಾಗಿ ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ತನ್ನ ಹತ್ತು ವರ್ಷದ ಮಗನು ಬರೆದಿರುವ ಚಿತ್ರಗಳನ್ನು ನೋಡುತ್ತಿರುವ ಜರ್ಮನ್ ದೇಶದ ತಂದೆಯೊಬ್ಬನು, ಅವುಗಳಲ್ಲಿಯ ತತ್ತದ್ ಗುಣವಿಶೇಷಗಳನ್ನಷ್ಟೇ ಗುರುತಿಸುವವನೇ ವಿನಾ, ಒಂದು ಸಾಧಾರಣವಾದ ಐರೋಪ್ಯ ಪ್ರಕಾರದ ಚಿತ್ರಣ-ವರ್ಣನಗಳ ಪ್ರಭಾವಗಳನ್ನು ಸುಲಭಕ್ಕೆ ಕಾಣಲೇ ಆರ. ಆದರೆ ಜಪಾನ್ ದೇಶದ ಸಣ್ಣ ಹುಡುಗನೊಬ್ಬನು ಬರೆದ ಚಿತ್ರಗಳನ್ನು ನೋಡಿದ ನಾದರೆ, ಒಟ್ಟಿನ ಜಪಾನೀಯ ಭಂಗಿಯೊಂದರ ಪ್ರಭಾವವನ್ನು ಆತನು ಒಡನೆಯೇ ಗುರುತಿಸುವನು. ಹೀಗೆ ಹುಡುಗನೊಬ್ಬನ ಬಾಲಿಶ ಯತ್ನವದಾದರೂ, ಪ್ರತಿಪ್ರಸಂಗದಲ್ಲೂ ತನ್ನ ಸೂಕ್ಷ್ಮತಮವಾದ ವಿವರಗಳಲ್ಲಿ ಸಹ ಆತನಿರುವ ಕಲಾತ್ಮಕ ಪರಂಪರೆಯಿಂದ ನಿಯಮಿತವೂ ರೂಪಿಸಲ್ಪಟ್ಟುದೂ ಆಗಿರುವುದು.

**ಅನುವಾದ : ಡಾ|| ಕೆ. ಎಸ್. ಕಣ್ಣನ್**
ಸಂಸ್ಕೃತ ಪ್ರಾಧ್ಯಾಪಕರು, ನ್ಯಾಷನಲ್ ಕಾಲೇಜು, ಜಯನಗರ, ಬೆಂಗಳೂರು - ೧೧






*ನವಕರ್ನಾಟಕ ಪ್ರಕಟಿಸಿರುವ ಹೊಸತು ವಾಚಿಕೆ ಮಾಲೆಯ ಹದಿನೆಂಟು ಸಂಪುಟಗಳ ಲೋಕಾರ್ಪಣೆ ಬೆಂಗಳೂರಿನ ಯವನಿಕಾ ಸಭಾಂಗಣದಲ್ಲಿ ದಿನಾಂಕ ೧.೧.೨೦೦೬ ರಂದು ಜರುಗಿತು. ಡಾ|| ಚೆನ್ನವೀರ ಕಣವಿ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಡಾ|| ಬರಗೂರು ರಾಮಚಂದ್ರಪ್ಪ ಪುಸ್ತಕ ಅನಾವರಣಗೊಳಿಸಿದರು. ಡಾ|| ಜಿ. ರಾಮಕೃಷ್ಣ ಪ್ರಾಸ್ತಾವಿಕ ಭಾಷಣ ಮಾಡಿದರು. ಸಂಪುಟಗಳ ಸಂಪಾದಕರುಗಳು, ಸಾಹಿತ್ಯಾಸಕ್ತರು ಭಾಗವಹಿಸಿದ್ದರು. ಅದೇ ಸಂದರ್ಭದಲ್ಲಿ ಹೊಸತು ವಿಶೇಷ ಸಂಚಿಕೆ ೨೦೦೬ ಮತ್ತು ಶ್ರೀ ಚಂದ್ರಶೇಖರ ನಂಗಲಿಯವರ 'ಆಲಿಸಯ್ಯ ಮಲೆಯ ಕವಿ' ಪುಸ್ತಕವನ್ನು ಡಾ|| ಚೆನ್ನವೀರ ಕಣವಿಯವರು ಅನಾವರಣಗೊಳಿಸಿದರು.*



# ಲೊಂಡಿಗುಡಾದ ವಿಶಿಷ್ಟ ಆದಿವಾಸಿಗಳ ಸಂತೆ

ಲೊಂಡಿಗುಡ, ಖಂಡಿತವಾಗಿಯೂ ಒಂದು ''ಹೊಸ ಪ್ರಪಂಚ' ಎನ್ನಿಸುವ ಗತಕಾಲದ ಕಾಲ್ಪನಿಕ ಲೋಕಕ್ಕೆ ನಿಮ್ಮನ್ನು ಕೊಂಡೊಯ್ಯುತ್ತದೆ. ಬಾಗಿದ ಬೆನ್ನು ಹೊತ್ತ , ಕುಬ್ಜ ದೇಹದ ಮುಖಗಳಲ್ಲಿ ನಲಿಯುವ ಸಂತೃಪ್ತ ಭಾವನೆ, ಇಲ್ಲಿನ ಮುಗ್ಧ, ಸರಳ ಜನರ ಜೀವನ ಸೌಂದರ್ಯ, ನೋವು–ನಲಿವು, ಸುಖ–ದುಃಖ ಎಲ್ಲವನ್ನೂ ಸಾರಿಹೇಳುತ್ತಿದೆ. ಚಿತ್ರಕೂಟಕ್ಕೆ ಹೋದರೆ, ಒಮ್ಮೆ ಈ ಸ್ಥಳಕ್ಕೆ ಮರೆಯದೇ ಭೇಟಿನೀಡಿ – ಶುಕ್ರವಾರದಂದು ಮಾತ್ರ ! ನೆನಪಿರಲಿ.

ರಾಜೇಶ್ ಎನ್. ನಾಯಕ್

ಛತ್ತೀಸ್‌ಘರ್‌ನ ಚಿತ್ರಕೂಟ ಜಲಪಾತ ನೋಡಲು ಹೋಗುವುದಿದ್ದರೆ, ಲೊಂಡಿಗುಡವನ್ನು ಒಮ್ಮೆ ಸಂದರ್ಶಿಸಲು ಮಾತ್ರ ಮರೆಯದಿರಿ. ಜಿಲ್ಲಾಕೇಂದ್ರಸ್ಥಳವಾದ ಜಗದಾಲ್‌ಪುರದಿಂದ ಚಿತ್ರಕೂಟದ ಹಾದಿಯಲ್ಲೇ ಸುಮಾರು ೪೦ ಕಿ.ಮೀ. ಸಾಗಿದರೆ, ಮುಖ್ಯರಸ್ತೆಯಿಂದ ಒಂದು ಕಿ.ಮೀ. ಒಳಗೆ ಇರುವುದೇ ಲೊಂಡಿಗುಡ. ನಾನಿಲ್ಲಿಗೆ ತಲುಪಿದ್ದು ಅಚಾನಕ್ ಆಗಿ. ಚಿತ್ರಕೂಟದ ಬಸ್ ತಪ್ಪಿಹೋದ ಕಾರಣ ಇಲ್ಲಿ ಬಂದು ಇಳಿಯಬೇಕಾಯಿತು. ಅಂತಹ ವಿಶೇಷ ಇಲ್ಲೇನಿದೆ ? ಅಷ್ಟು ಕುತೂಹಲ ಇದ್ದರೆ ಒಮ್ಮೆ ಯಾವುದೇ ಶುಕ್ರವಾರದಂದು ಈ ಸ್ಥಳಕ್ಕೆ ಭೇಟಿ ಕೊಡಿ. ಮುಗ್ಧ, ಸರಳ ಜೀವನಕ್ರಮದ ಆದಿವಾಸಿ ವಾರದ ಸಂತೆ ವಿಶಿಷ್ಟ ಅನುಭವ ನೀಡುವ ಒಂದು ಹೊಸ ಪ್ರಪಂಚವನ್ನೇ ನಿಮ್ಮೆದುರು ತೆರೆದಿಡುವುದು ಖಂಡಿತ.

ಲೊಂಡಿಗುಡ, ಸುತ್ತಲಿನ ಹತ್ತಾರು ಹಾಡಿಗಳಿಗೆ ಒಂದು ರೀತಿಯಲ್ಲಿ ಕೇಂದ್ರಸ್ಥಳವಿದ್ದಂತೆ. ಪ್ರತಿ ಶುಕ್ರವಾರ ಸುಮಾರು ಒಂದೆರಡು ಸಾವಿರ ಜನ ಇಲ್ಲೆ ಬಂದುಸೇರುತ್ತಾರೆ. ಇಲ್ಲಿಯ ಆದಿವಾಸಿಗಳಿಗೆ ಇದು ಒಂದು ರೀತಿಯ ವಾರಾಂತ್ಯ ಇದ್ದಹಾಗೆ. ತಮ್ಮಲ್ಲಿ ಬೆಳೆದದ್ದನ್ನೆಲ್ಲಾ ಈ ಸಂತೆಗೆ ತಂದು, ಅದನ್ನು ಮಾರಿ ದೊರಕಿದ ಹಣದಿಂದಲೇ, ಮನೆಗೆ ಬೇಕಾದ ಇತರೆ ಸಾಮಾನುಗಳನ್ನು ಒಯ್ಯುವುದು ಇಲ್ಲಿನವರ ವಾಡಿಕೆ. ಬಟ್ಟೆ ಮತ್ತು ಕಿರಾಣಿ ಅಂಗಡಿಗಳ ಹೊರತಾಗಿ ಕೊಳ್ಳುವವರು – ಮಾರುವವರು ಎಲ್ಲಾ ಈ ಆದಿವಾಸಿಗಳೇ... ಎಲ್ಲವೂ ಆದಿಮಕಾಲದ ಆರ್ಥಿಕತೆಯ ಸಾದೃಶ್ಯ ರೂಪ.

ಇಲ್ಲಿನ ಜನ ಹೆಚ್ಚಾಗಿ ಮಾರಲು ತರುವುದು ಭತ್ತ, ಸೊಪ್ಪು, ಕೋಳಿ, ಬುಟ್ಟಿ, ದನ-ಕರುಗಳು ಮತ್ತು 'ಮಹುವಾ'. – ಇದೇನಿದು ಮಹುವಾ... ? ಒಂದು ರೀತಿಯ ಮತ್ತು ಬರುವ ಹಣ್ಣು, ಚಟ್ಟೆ ನಿಂತ ಖರ್ಜೂರದಂತೆ ಕಾಣುವ ಈ ಹಣ್ಣಿನಿಂದ ಒಂದು ಬಗೆಯ ಹೆಂಡವನ್ನು ತಯಾರಿಸಲಾಗುತ್ತದೆ. ಮಹುವಾದ ಬೀಜದಿಂದ ಬಹೂಪಯೋಗಿ 'ಖಡುವಾ' ಎಣ್ಣೆಯನ್ನು ಉತ್ಪಾದಿಸಲಾಗುತ್ತದೆ. ಆದರೆ ತಿನ್ನಲು ಮಾತ್ರ ನಿಷಿದ್ಧ. ಅಡುಗೆಗೆ ಉಪಯೋಗಿಸುವುದು 'ತೀಲ್' ಗಿಡದಿಂದ ತಯಾರಿಸುವ ಎಣ್ಣೆ ಮಾತ್ರ.

ಈ ಮಾರುಕಟ್ಟೆಯ ಮತ್ತೊಂದು ವಿಶೇಷವೆಂದರೆ, ಇಲ್ಲಿ ಎಲ್ಲೂ ತಕ್ಕಡಿಗಳಿಲ್ಲ – ಎಲ್ಲವೂ ಸಿದ್ಧ-ಸೇರಿನ ವ್ಯವಹಾರವೇ. ಎಲ್ಲದಕ್ಕೂ ಐದು ರೂಪಾಯಿ ಒಳಗಿನ ಮೌಲ್ಯ. ಒಂದು ದೊಡ್ಡ ಸೇರಿನ ಉಪ್ಪಿಗೆ ಐದು ರೂಪಾಯಿಯಾದರೆ, ಒಂದು ಚಿಕ್ಕ ಸೇರಿನ ಬೇಳೆಗೆ ಅಷ್ಟೇ ಕಕ್ಕಬೇಕು. ತರಕಾರಿಗಳಾದರೆ, ಒಂದು ರಾಶಿಗೆ ಇಂತಿಷ್ಟು ಅಂತ – ಏನಿದ್ದರೂ ಒಂದು-ಎರಡು ರೂಪಾಯಿಯ ವ್ಯವಹಾರ ಅಷ್ಟೆ. ಇಲ್ಲಿ ಸೋಪು -ಶ್ಯಾಂಪೂಗಳೂ ಲಭ್ಯ ! ಅವು ಕೂಡ ರಾಶಿಗೆ ಇಂತಿಷ್ಟು ಅಂತ. ಆದರೆ ಬೇರೆಲ್ಲಕ್ಕೂ ಹೋಲಿಸಿದರೆ ಕೊಂಚ ತುಟ್ಟಿ. ಇಡೀ ಮಾರುಕಟ್ಟೆಯಲ್ಲಿ ದೊರೆತ ಒಂದೇ ಒಂದು ಬ್ರಾಂಡೆಡ್ ಸಾಬೂನು ಎಂದರೆ ಲೈಫ್‌ಬಾಯ್ ! ಚಿತ್ರ-ವಿಚಿತ್ರ ಪ್ಯಾಕುಗಳಲ್ಲಿ ಬರುವ ಇತರ ಸೋಪುಗಳ ಹೆಸರು ಏನೆಂದು ಅರ್ಥವೇ ಆಗೊಲ್ಲ!! ಆದರೆ, ಡಿಮ್ಯಾಂಡ್ ಏನಿದ್ದರೂ ಯಾವ ಹೆಸರೂ ಇಲ್ಲದ ಬಟ್ಟೆಸೋಪುಗಳಿಗೇನೆ! ಒಂದು ಗುಪ್ಪೆ ಒಣಮೀನಿಗೆ ಒಂದು ರೂಪಾಯಿ. ಅದೇ ಅಣಬೆಯಾದರೆ, ನಾಲ್ಕರ ಒಂದು ಗುಪ್ಪೆಗೆ ಒಂದು ರೂಪಾಯಿ. ಚಗಳಿ ಇರುವೆಗಳೂ ಲಭ್ಯ. ಆಶ್ಚರ್ಯವೆಂದರೆ, ಇಲ್ಲಿ ಯಾವುದೇ ಕಾರಣಕ್ಕೂ ಮಾಂಸ ಮಾತ್ರ ದೊರೆಯುವುದಿಲ್ಲ. ಹೆಚ್ಚೆಂದರೆ ಜೀವಂತ ಕೋಳಿಗಳನ್ನು ಮಾತ್ರ ಕೊಂಡುಕೊಳ್ಳಬಹುದು !

ಇಡೀ ಮಾರುಕಟ್ಟೆಯ ಕೊಂಚ ತುಟ್ಟಿ ಪ್ರದೇಶ ವೆಂದರೆ ಬಟ್ಟೆ ಮಾರುವ ಓಣಿ. ಇಲ್ಲಿನವರ ಪಾರಂಪರಿಕ ವಸ್ತ್ರ ಎಂದರೆ ದಪ್ಪನೆಯ ಒರಟಾದ ಬಿಳಿಯ ಪಂಚೆ ಯಂತಿರುವ ವಸ್ತ್ರ; ಹೆಂಗಸರೂ ಗಂಡಸರೂ ಇಬ್ಬರೂ ಬಳಸಬಹುದು. ಆದರೆ ಈಗೀಗ ಬದಲಾವಣೆ ಆಗುತ್ತಿದೆ ಎನ್ನುತ್ತಾರೆ ಇಲ್ಲಿನ ವಸ್ತ್ರ ವ್ಯಾಪಾರಿ, ಭರತ ಖಾತ್ರಿ. ಮಹಿಳೆಯರು ಬಣ್ಣದ ಸೀರೆಗಳನ್ನು ಇಷ್ಟಪಟ್ಟರೆ, ಪುರುಷರು, ಬಣ್ಣದ ಅಂಗಿ – ಕಚ್ಚೆ ಪಂಚೆ, ತೊಡಲು ಪ್ರಾರಂಭಿಸಿದ್ದಾರೆ.



## ಚಿತ್ರಕೂಟ ಜಲಪಾತ

| | |
|---|---|
| ಎತ್ತರ | : ೧೦೦ ಅಡಿಗಳು (ಸುಮಾರು) |
| ನದಿ | : ಇಂದ್ರಾವತಿ (ಗೋದಾವರಿಯ ಉಪನದಿ) |
| ಜಿಲ್ಲೆ | : ಜಗದಾಲ್‌ಪುರ |
| ರಾಜ್ಯ | : ಛತ್ತಿಸ್‌ಘರ್ |
| ಹೋಗುವ ದಾರಿ | : ಜಿಲ್ಲಾ ಕೇಂದ್ರಸ್ಥಳವಾದ ಜಗದಾಲ್‌ಪುರದಿಂದ, ೪೫ ಕಿ.ಮೀ. ದೂರ. ಹೋಗಲು ವಾಹನ ಸೌಕರ್ಯವಿದೆ. ಜಗದಾಲ್‌ಪುರಕ್ಕೆ ವಿಶಾಖ ಪಟ್ಟಣದಿಂದ, ರಾಯಗಡ್-ಕೊರಾಪುಟ್ ಮಾರ್ಗವಾಗಿ ರೈಲಿನ ಸಂಪರ್ಕವಿದೆ. ಬಸ್ಸಿನಲ್ಲೂ ಹೋಗಬಹುದು. |
| ವಿಶೇಷತೆ | : ಅಗಾಧ ಪ್ರಮಾಣದ ನೀರಿನಿಂದುಂಟಾದ ಚಿತ್ರಕೂಟ ಹೋಲಿಕೆಯಲ್ಲಿ ನಯಾಗಾರ ಜಲಪಾತವನ್ನು ಅಕ್ಷರಶಃ ನೆನಪಿಸುತ್ತದೆ. ಇದೂ ಕೂಡ ನಯಾಗಾರದಂತೆ 'ಹಾರ್ಸ್ ಷೂ' ಮಾದರಿಯಲ್ಲಿದೆ. ಜುಲೈನಿಂದ-ಡಿಸೆಂಬರ್, ನೋಡಲು ಪ್ರಶಸ್ತವಾದ ಸಮಯ. |

ಮಧ್ಯ ವಯಸ್ಸನ್ನು ಮೀರಿದ ಹೆಂಗಸರು ಈಗಲೂ ರವಿಕೆ ತೊಡುವುದಿಲ್ಲ. ಸೀರೆಯ ಸೆರಗನ್ನೇ ಎದೆಯಗಲ ಬಳಸುತ್ತಾರೆ. ಆದರೆ, ಯುವತಿಯರು ರವಿಕೆ ತೊಡುವುದು ಸಾಮಾನ್ಯ ದೃಶ್ಯ. ಈ ಜನರಿಗೆ ವಸ್ತ್ರಗಳು ಒಂದು ರೀತಿಯಲ್ಲಿ ಐಷಾರಾಮಿ ವಸ್ತು. ಆದ್ದರಿಂದಲೇ, ಬಟ್ಟೆ ಮಾರುವವರಿಗೆ ಕಿಮ್ಮತ್ತು ಜಾಸ್ತಿ. ಪ್ರತಿ ಸಂತೆಯಲ್ಲೂ ಸುಮಾರು ಮೂರ್‍ನಾಲ್ಕು ಸಾವಿರಕ್ಕೆ ತುಟ್ಟಿ ಇಲ್ಲದ ವ್ಯಾಪಾರ ಎನ್ನುತ್ತಾರೆ ಖಾತ್ರಿ. ಬೇಸಗೆಯ ದಿನಗಳಲ್ಲಿ ಮಾತ್ರ ವ್ಯಾಪಾರ ಕಡಿಮೆ. ಸುಮಾರು ನಾಲ್ಕೈದು ವರ್ಷಗಳಿಂದ ಇಲ್ಲೇ ಕಿರಾಣಿ ಅಂಗಡಿ ನಡೆಸುತ್ತಿರುವ ರಮೇಶ್ ಮೇಶ್ರಾಮ್‌ರದೂ ಇದೇ ಅನಿಸಿಕೆ.

ಈ ಸಂತೆಯಲ್ಲಿ ಹಸಿದವರಿಗೆ ತಿಂಡಿ-ತಿನಿಸುಗಳೂ ಲಭ್ಯ. ತುಂಬಾ ಸಾಮಾನ್ಯ ಅಂದರೆ ಈರುಳ್ಳಿ ಪಕೋಡ; ಕೊಂಚ ಐಷಾರಾಮಿ ಎಂದರೆ ಜಿಲೇಬಿ. ಬೇರೆ ಯಾವುದೇ ವಿಶೇಷ ತಿನಿಸುಗಳಿಲ್ಲ. ಬಾಯಾರಿಕೆ ನೀಗಿಸುವ ತಂಪು ಪಾನೀಯವೆಂದರೆ ಹುಳಿಮಜ್ಜಿಗೆ – ಸ್ವಲ್ಪ ಬಿಸಿ ಬೇಕೆಂದರೆ, ಲಿಂಬು ಮಿಶ್ರಿತ ಕಪ್ಪು ಚಹಾ.

ಇಡೀ ಮಾರುಕಟ್ಟೆಯಲ್ಲಿ ಹೆಂಗಸರ ಕಾರೋಬಾರೇ ಜಾಸ್ತಿ. ಕಟ್ಟಿಗೆ ಮತ್ತು ಕೃಷಿ ಸಲಕರಣೆ ಮಾರುವ ಜಾಗ ಬಿಟ್ಟು ಉಳಿದೆಲ್ಲೆಡೆ ಅವರದೇ ಸಾಮ್ರಾಜ್ಯ. ಖಡುವಾ ಎಣ್ಣೆ ಸವರಿದ ಘಾಟು ವಾಸನೆಯ ದೇಹ, ಕುತ್ತಿಗೆಯಲ್ಲೊಂದು ದಪ್ಪ ಸರ, ಮೂಗಿನ ಹೊಳ್ಳೆಗಳ ನಡುವೆ ತೂಗು ಬಿಟ್ಟ ಮೂಗುತಿ, ದಟ್ಟ ಕಪ್ಪು ಕೂದಲು ಮತ್ತು ಕಂಕುಳಲ್ಲೊಂದು ಮಗುವನ್ನು ಹೊತ್ತ ಹೆಂಗಸರ ದೃಶ್ಯ ಸರ್ವೇಸಾಮಾನ್ಯ. ಕಾಲಲ್ಲಿ ತೊಟ್ಟ ಬೆಳ್ಳಿ ಬಳೆ, ಬಂಗಾರದ ಬಣ್ಣದ ಒಂದಿಷ್ಟು ಒಡವೆ, ಇವಿಷ್ಟೇ ಅವರ ಆಭರಣ. ಸಂತೆಯ ತುಂಬೆಲ್ಲಾ, ಬಣ್ಣಬಣ್ಣದ ಸೀರೆಗಳ ವರ್ಣಮಯ ಲೋಕ. ಎಲ್ಲ ಬಣ್ಣದ ವಸ್ತ್ರಧಾರಿಗಳು ಲಭ್ಯ – ಕಪ್ಪು ಬಣ್ಣದ ಹೊರತಾಗಿ ! ಊಹೂಂ... ಭೂತಗನ್ನಡಿ ಇಟ್ಟು ಹುಡುಕಿದರೂ ನಿಮಗೆ ಕಪ್ಪು ವಸ್ತ್ರಧಾರಿಗಳು ಸಿಗಲಾರರು!! ಕಪ್ಪು ಇಲ್ಲಿನವರಿಗೆ ಅಶುಭದ ಸೂಚನೆ, ಅದಕ್ಕೇನೆ ಸಂತೆಯ ದಿನ ನಿಷಿದ್ಧ.

ಗಂಡಸರಲ್ಲಿ ಹೆಚ್ಚಿನವರು ಶ್ವೇತವಸ್ತ್ರಧಾರಿಗಳು. ಕಾಲಿಗೆ ತೊಟ್ಟ ಬಳೆ ಬಿಟ್ಟರೆ, ವಿಶೇಷವಾಗಿ ಯಾವುದೇ ರೀತಿಯ ಶೃಂಗಾರವಿಲ್ಲ. ದನಕರುಗಳು ಹಾಗೂ ಕೃಷಿ ಸಲಕರಣೆಗಳನ್ನು ಮಾರುವ ಜಾಗದಲ್ಲಷ್ಟೇ ಇವರ ರಾಜ್ಯಭಾರ. ಗಂಡಸರ ದಾದಾಗಿರಿಗೆ ಇಲ್ಲಿ ಬೆಲೆಯಿಲ್ಲ. ದೊಡ್ಡ ದನಿಯಲ್ಲಿ ಅರಚುವ ಗಂಡಸರನ್ನು ನೀವು ಅಪ್ಪಿತಪ್ಪಿಯೂ ಕಾಣಲಾರಿರಿ. ವಿಶೇಷವೆಂದರೆ, ಮಹುವಾದ ಹೆಂಡ ಮಾರುವ ಜಾಗದಲ್ಲೂ ಕೂಡ ಹೆಂಗಸರದ್ದೇ ಬಹುಮತ !

ನಮ್ಮ ನಗರಗಳಲ್ಲಿನ ಮಾಲ್‌ಗಳಂತೆ ಇಲ್ಲಿ ಎಲ್ಲೂ ಕಣ್ಣು ಕೋರೈಸುವ ವಸ್ತುಗಳಿಲ್ಲ. ಅಂಗಡಿ ಬಾಗಿಲಲ್ಲಿ ನಿಂತು ''ಬನ್ನಿ, ಒಳಗೆ ಬನ್ನಿ, ಖರೀದಿಸಿ'' ಎಂದು ಕೂಗುವ ಹುಡುಗರಿಲ್ಲ; ಬಲವಂತಪಡಿಸುವ ಮಾಲಿಕರೂ ಇಲ್ಲ; ಕೊಳ್ಳದಿದ್ದರೆ ಯಾರಿಂದಲೂ ಕೋಪ ಮುಖ ಮುದ್ರೆಯ ಪ್ರದರ್ಶನವೂ ಇಲ್ಲ; ಯಾರಿಗೂ ಅತಿ ಲಾಭದ ಲೋಭವಿಲ್ಲ; ಎಲ್ಲರೂ ಇದ್ದುದರಲ್ಲೇ ತೃಪ್ತಿ ಪಡುವವರು. ಇಲ್ಲಿ ಕೇಳಿ ಬಂದಂತೆ, ತಂದ ಹಣ ಉಳಿಸಿಕೊಂಡು ಹೋಗುವ ಪರಿಪಾಠ ಯಾರಿಗೂ ಇಲ್ಲ. ಜೇಬು ಖಾಲಿಯಾಗುವ ತನಕ ಸಂತೆ. ಸಂಜೆಯಾಗುತ್ತಿದ್ದಂತೆ ಮಹುವಾದ ನಶೆ, ಸ್ತ್ರೀ ಪುರುಷರಾದಿಯಾಗಿ ಎಲ್ಲರನ್ನೂ ಆವರಿಸುತ್ತದೆ; ಹಾಡಿಗೆ ಮರಳುವ ಹಾದಿಯಲ್ಲಿ ಸಣ್ಣಪುಟ್ಟ ಜಗಳಗಳೂ ಸಾಮಾನ್ಯ.

ಲೊಂಡಿಗುಡಾದ ಸಂತೆ, ಕೇವಲ ಕೊಳ್ಳುವ ಮಾರುವ ಸ್ಥಳವಲ್ಲ. ಬದಲಾಗಿ, ಹೊರಜಗತ್ತಿನೊಡನೆ ಇಲ್ಲಿನವರನ್ನು ಬೆಸೆಯುವ ಕೊಂಡಿ; ಹೊಸ ಮಾಹಿತಿ, ಹೊಸ ವಿಷಯ ಗ್ರಹಿಸುವ ಸ್ಥಳ; ಹಾಡಿಯ ಇತರ ಜನರೊಂದಿಗೆ ಸಂಬಂಧ ಬೆಸೆಯುವ ಜಾಗ. ನಾನು ಇಲ್ಲಿ ಇದ್ದಾಗ, ಸ್ಥಳೀಯ ಸಂಸ್ಥೆಯೊಂದು ಟಾಟಾ ಕಂಪನಿಯ ಇಸ್ಪಾಟ್ ಕಾರ್ಖಾನೆಯ ಕುರಿತು ಜನರಲ್ಲಿ ಜಾಗೃತಿ ಮೂಡಿಸುವುದರಲ್ಲಿ ನಿರತವಾಗಿತ್ತು. ಅಲ್ಲಲ್ಲಿ ಗುಂಪುಗುಂಪಾಗಿ ನಿಂತು, ಜನ ತಮ್ಮ ತಮ್ಮಲ್ಲೇ ಚರ್ಚಿಸುತ್ತಿದ್ದುದೂ ಕಂಡುಬಂದಿತು.

ಲೊಂಡಿಗುಡ, ಖಂಡಿತವಾಗಿಯೂ ಒಂದು 'ಹೊಸ ಪ್ರಪಂಚ' ಎನ್ನಿಸುವ ಗತಕಾಲದ ಕಾಲ್ಪನಿಕ ಲೋಕಕ್ಕೆ ನಿಮ್ಮನ್ನು ಕೊಂಡೊಯ್ಯುತ್ತದೆ. ಬಾಗಿದ ಬೆನ್ನು ಹೊತ್ತ, ಕುಬ್ಜ ದೇಹದ ಮುಖಗಳಲ್ಲಿ ನಲಿಯುವ ಸಂತೃಪ್ತ ಭಾವನೆ, ಇಲ್ಲಿನ ಮುಗ್ಧ, ಸರಳ ಜನರ ಜೀವನ ಸೌಂದರ್ಯ, ನೋವು-ನಲಿವು, ಸುಖ-ದುಃಖ ಎಲ್ಲವನ್ನೂ ಸಾರಿಹೇಳುತ್ತದೆ. ಚಿತ್ರಕೂಟಕ್ಕೆ ಹೋದರೆ, ಒಮ್ಮೆ ಈ ಸ್ಥಳಕ್ಕೆ ಮರೆಯದೇ ಭೇಟಿನೀಡಿ – ಶುಕ್ರವಾರದಂದು ಮಾತ್ರ ! ನೆನಪಿರಲಿ.

ರಾಜೇಶ್ ಎನ್. ನಾಯಕ್
ಇಂದಿರಾನಗರ, ಸಿದ್ದಾಪುರ (ಉತ್ತರ ಕನ್ನಡ)- ೫೮೧ ೩೫೫

ಇತ್ತೀಚೆಗೆ ಬಿಡುಗಡೆಯಾದ ಪುಸ್ತಕಗಳು



ಪುಟ : ೬೪ ಬೆಲೆ : ರೂ. ೨೨



ಪುಟ : ೧೨೮ ಬೆಲೆ : ರೂ. ೪೫



ಪುಟ : ೧೨೪ ಬೆಲೆ : ರೂ. ೫೦



ಪುಟ : ೭೬ ಬೆಲೆ : ರೂ. ೩೦




ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೫, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೨೦೩೫೮೦, ೩೦೫೭೮೦೨೨ ಫ್ಯಾಕ್ಸ್ : ೩೦೫೭೮೦೨೩ e-mail : nkp@bgl.vsnl.net.in

# ಜಾಗತೀಕರಣ ಮತ್ತು ಭಾರತೀಯ ಮಹಿಳೆ

*ಜಾಗತೀಕರಣದ ನೀತಿಗಳು ಮಹಿಳೆಯರಿಗೆ ನೀಡುವ ಭರವಸೆಗಳೆಂದರೆ ಮಾಡೆಲಿಂಗ್, ಫ್ಯಾಷನ್ ಡಿಸೈನಿಂಗ್ ಮುಂತಾದವು ಮಾತ್ರ. ಇವುಗಳಿಂದ ನಗರವಾಸಿಗಳಾದ ಶೇಕಡಾ ೧೦ ಜನರಿಗೆ ಲಾಭವಾಗಬಹುದೇ ಹೊರತು ಹೆಚ್ಚಿನ ಮಂದಿಗೆ ಏನೂ ಪ್ರಯೋಜನವಾಗದು. ಆದರೆ ಇಂತಹ ಆಕರ್ಷಣೆಗಳ ಹಿಂದೆ ಹಾರಿ ರೆಕ್ಕೆ ಸುಟ್ಟುಕೊಳ್ಳಲು ಬೇಕಾದಷ್ಟು ಪತಂಗಗಳಿವೆಯೆನ್ನುವುದೇ ದುಃಖದ ಸಂಗತಿ.*



**ಮಲಯಾಳಂ ಮೂಲ : ಡಾ|| ಮಿನಿ ಪ್ರಸಾದ್**

**ಜಾ**ಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಗಳು ವಸಾಹತುಶಾಹಿಯ ಹೊಸ ಮುಖಗಳು. ವೈಸ್‌ರಾಯ್ ಮತ್ತು ಗವರ್ನರ್‌ಗಳ ಕೈಯೊಳಗಿದ್ದ ಅಧಿಕಾರಕ್ಕೆ ಬದಲಾಗಿ ಬಹುರಾಷ್ಟ್ರೀಯ ಒಪ್ಪಂದಗಳು, ಅಂತರರಾಷ್ಟ್ರೀಯ ಹಣಕಾಸುನಿಧಿ, ಜಾಗತಿಕ ವಾಣಿಜ್ಯಸಂಘಟನೆಗಳು ಇತ್ಯಾದಿ ಬಂದಿವೆ ಅಷ್ಟೆ. ವಸಾಹತುಶಾಹಿಯ ಕಾಲದಲ್ಲಿದ್ದಂತೆ ಬಡ ರಾಷ್ಟ್ರಗಳ ಪ್ರಾಕೃತಿಕ ಸಂಪತ್ತನ್ನು ದೊಡ್ಡ ಪ್ರಮಾಣದಲ್ಲಿ ಬಲಾಢ್ಯ ರಾಷ್ಟ್ರಗಳಿಗೆ ಕೊಂಡು ಹೋಗುವ ಸಾಮ್ರಾಜ್ಯಶಾಹಿ ಶಕ್ತಿಗಳು ಮತ್ತು ಬಹುರಾಷ್ಟ್ರೀಯ ಒಪ್ಪಂದಗಳು ತಪ್ಪು ತಿಳುವಳಿಕೆಗಳನ್ನು ನೀಡುವುದರ ಮೂಲಕ, ಪ್ರಲೋಭನೆ ಮತ್ತು ಬೆದರಿಕೆಗಳ ಮೂಲಕ ನಡೆಸುತ್ತಿರುವ ಈ ಸಾಗಾಟವು ಮುಂದುವರಿದ ಮತ್ತು ಹಿಂದುಳಿದ ರಾಷ್ಟ್ರಗಳ ನಡುವಿನ ಅಸಮತೋಲನವನ್ನು ಹೆಚ್ಚಿಸಿದೆ. ಜೊತೆಗೆ ಆಯಾ ರಾಷ್ಟ್ರದೊಳಗಿನ ಶ್ರೀಮಂತರು ಮತ್ತು ಬಡವರ ನಡುವಿನ ಕಂದಕವನ್ನೂ ಹೆಚ್ಚಿಸಿದೆ. ಈ ನೀತಿಯು ಭಾರತದಂತಹ ಒಂದು ತೃತೀಯ ಜಗತ್ತಿನ ರಾಷ್ಟ್ರದ ಮಹಿಳೆಯರ ಮೇಲೆ ಯಾವ ರೀತಿಯ ಪ್ರಭಾವ ಬೀರುತ್ತಿದೆ ಎಂಬುದು ಇಂದು ಅತ್ಯಂತ ಪ್ರಸ್ತುತವಾದ ವಿಚಾರವಾಗಿದೆ. ಮಹಿಳೆಯೇ ಯಾಕೆ ಎಂಬ ಪ್ರಶ್ನೆಯೂ ಸಂಗತವೇ ಆಗಿದೆ. ತೃತೀಯ ಜಗತ್ತಿನ ರಾಷ್ಟ್ರಗಳು ಸ್ತ್ರೀಯನ್ನು ಪ್ರಥಮ ದರ್ಜೆಯ ಪ್ರಜೆಯಾಗಿ ಕಾಣುವುದಿಲ್ಲ ಎಂಬುದರ ಜತೆಗೆ ಪಿತೃಪ್ರಧಾನ ಪದ್ಧತಿಯು ನೆಲೆಸಿರುವ ಭಾರತೀಯ ಸಾಮಾಜಿಕ ಬದುಕಿನಲ್ಲಿ ಸ್ತ್ರೀಯರ ಶೋಷಣೆಯಲ್ಲಿ ಸಂವಿಧಾನವನ್ನು ಬಲಪಡಿಸುವ ಅನೇಕ ಸಾಧ್ಯತೆಗಳು ಅಡಗಿರುವುದೂ ಇದಕ್ಕೆ ಕಾರಣವಾಗಿರಬಹುದು. ಗೃಹಕೃತ್ಯಗಳಿಗೆ ಬಂಧಿಸಲ್ಪಟ್ಟ ಸ್ತ್ರೀಯ ಶ್ರಮವನ್ನು ಪಿತೃಪ್ರಧಾನ ಸಮಾಜವು ಕೇವಲ ಒಂದು ಉಪಕಸುಬಾಗಿ ಪರಿಗಣಿಸುತ್ತದೆ. ಜಾಗತೀಕರಣವು ತೃತೀಯ ಜಗತ್ತಿನ ರಾಷ್ಟ್ರಗಳನ್ನು ಮತ್ತು ಸ್ತ್ರೀಯರ ಬದುಕನ್ನು ದುರಂತ ಸ್ಥಿತಿಯತ್ತ ಕೊಂಡೊಯ್ಯಲು ಮುಖ್ಯಕಾರಣ ಇದುವೇ ಆಗಿದೆ. ದೈನಂದಿನ ಖರ್ಚುವೆಚ್ಚಗಳು ಏರುವುದರೊಂದಿಗೆ ಖರ್ಚನ್ನು ಮಿತಗೊಳಿಸಿ ಉಳಿತಾಯ ಮಾಡಲು ಗೃಹಿಣಿಯು ಸ್ವತಃ ಹೆಣಗಾಡುವುದು ಇದಕ್ಕೆ ಉದಾಹರಣೆಯಾಗಿದೆ. ಜಾಗತೀಕರಣ-ಉದಾರೀಕರಣ-ಖಾಸಗೀಕರಣ ನೀತಿಗಳ ಭಾಗವಾಗಿ ಸರಕಾರವು ಮಾರುಕಟ್ಟೆಯನ್ನು ಸ್ವೇಚ್ಛಾವಿಹಾರವಾಗಿ ಮಾಡಿ ಸೇವಾವೇತನ ವ್ಯವಸ್ಥೆಗಳಿಂದ ಹಿಂದೆಗೆಯುತ್ತಿದೆ. ಅದರ ದುಷ್ಪರಿಣಾಮವಾಗಿ ವಿದ್ಯಾಭ್ಯಾಸ, ಆರೋಗ್ಯ, ಕುಡಿಯುವ ನೀರು, ಕೃಷಿ, ಕೈಗಾರಿಕೆ ಮುಂತಾದ ಕ್ಷೇತ್ರಗಳು ಯಾವ ರೀತಿಯ ತೊಂದರೆಗೊಳಗಾಗಿವೆ ಮತ್ತು ವಿಶೇಷವಾಗಿ ಸ್ತ್ರೀಯರು ಹೇಗೆ ಬಾಧಿಸಲ್ಪಟ್ಟಿದ್ದಾರೆ ಎಂಬುದನ್ನು ಚರ್ಚಿಸುವುದು ಈ ಲೇಖನದ ಉದ್ದೇಶ.



**ಶಿಕ್ಷಣ**

ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕವಾಗಿಸುವುದು ಪ್ರಜಾಪ್ರಭುತ್ವ ಸರಕಾರದ ಘೋಷಣೆಯಾಗಿತ್ತು. ಇದರಿಂದಾಗಿ ಸರಕಾರಿ ಶಾಲಾ ಕಾಲೇಜುಗಳು ಮತ್ತು ಅನುದಾನಿತ ಸಂಸ್ಥೆಗಳು ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಾಪಿಸಲ್ಪಟ್ಟವು. ಹೀಗೆ ಅದೇ ಪ್ರಮಾಣದಲ್ಲಿ ಖಾಸಗಿ ಸಂಸ್ಥೆಗಳೂ ಹುಟ್ಟಿಕೊಳ್ಳುವುದರೊಂದಿಗೆ ಶಿಕ್ಷಣವು ಹಣವಂತರ ಕ್ಷೇತ್ರವಾಗಿಬಿಟ್ಟಿತು. ಶಿಕ್ಷಣವು ದುಬಾರಿಯಾದ್ದರಿಂದ ಹೆಣ್ಣುಮಕ್ಕಳನ್ನು ಉನ್ನತ ವಿದ್ಯಾಭ್ಯಾಸಕ್ಕೆ ಕಳುಹಿಸಲು ಹೆತ್ತವರು ಹಿಂಜರಿಯತೊಡಗಿದರು. ಮದುವೆಗೆ ಮಾಡಬೇಕಾದ ಖರ್ಚನ್ನೂ ಲೆಕ್ಕಹಾಕಿದಾಗ ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ಅನಗತ್ಯ ಎಂಬ ವಿಚಾರ ಬಂದಿತು. ಅಲ್ಲದೆ ಆಯ್ಕೆ ಮಾಡಿಕೊಳ್ಳುವ ಭಾಷಾ ಮಾಧ್ಯಮಗಳ ವಿಚಾರದಲ್ಲೂ ಈ ತಾರತಮ್ಯವನ್ನು ತೋರಿಸಲಾಯಿತು. ಹೆಣ್ಣುಮಕ್ಕಳನ್ನು ಕನ್ನಡ ಮಾಧ್ಯಮದಲ್ಲೂ ಗಂಡುಮಕ್ಕಳನ್ನು ಆಂಗ್ಲ ಮಾಧ್ಯಮದಲ್ಲೂ ಓದಿಸುವ ಪ್ರವೃತ್ತಿ ಇವತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚಾಗಿರುವ ಹಿನ್ನೆಲೆ ಇದು. ಸರಕಾರಿ ಶಾಲೆಗಳು ಒಂದೊಂದಾಗಿ ಮುಚ್ಚಿಕೊಳ್ಳುತ್ತಿರುವುದು ಇಂದು ಶಿಕ್ಷಣದ ಭವಿಷ್ಯದ ಬಗ್ಗೆ ಭಯದ ವಾತಾವರಣವನ್ನು ನಿರ್ಮಿಸಿರುವುದೂ ಸತ್ಯ.

**ಆರೋಗ್ಯ**

ಮೆಡಿಕಲ್ ಕಾಲೇಜುಗಳು, ಜಿಲ್ಲಾ ಮತ್ತು ತಾಲೂಕು ಆಸ್ಪತ್ರೆಗಳು, ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳು ಜನರ ಆರೋಗ್ಯ ತಪಾಸಣೆ ನಡೆಸುವ ಆರೋಗ್ಯ ರಕ್ಷಣೆಯ ಒಂದು ವ್ಯವಸ್ಥೆ ಹಿಂದೆ ನಮ್ಮಲ್ಲಿತ್ತು. ಶಿಶು ಮರಣ ಮತ್ತು ಹೆರಿಗೆಯ ಕಾಲದಲ್ಲಾಗುವ ಮರಣಗಳನ್ನು ತಡೆಹಿಡಿಯುವಲ್ಲಿ ಈ ವ್ಯವಸ್ಥೆಯು ಮಹತ್ತರ ಪಾತ್ರವನ್ನು ವಹಿಸಿತ್ತು. ಆದರೆ ಆರೋಗ್ಯಕ್ಷೇತ್ರದ ಖಾಸಗೀಕರಣವಾಗುವುದರೊಂದಿಗೆ ಆರೋಗ್ಯ ತಪಾಸಣೆ ಎಂಬ ಕಲ್ಪನೆ ಬಿದ್ದುಹೋಯಿತು. ಮಕ್ಕಳ ರೋಗ ನಿರೋಧಕ ಚುಚ್ಚು ಮದ್ದುಗಳಿಗೂ ಜನರು 'ತಾರಾ ಆಸ್ಪತ್ರೆ'ಗಳನ್ನು ಆಶ್ರಯಿಸಬೇಕಾಯಿತು. ಈ ಕಾರಣದಿಂದಾಗಿ ನಮ್ಮ ಸಮಾಜದ ಪ್ರತಿಶತ ೮೦ ಸ್ತ್ರೀಯರು ಹೆರಿಗೆಗಾಗಿ ಹಳೆಯ ಪದ್ಧತಿಗಳಿಗೆ ಮೊರೆ ಹೋಗಬೇಕಾಗಿಬರಬಹುದು. ಆರೋಗ್ಯವನ್ನು ಕಳೆದುಕೊಂಡ ತಾಯಂದಿರು ಮತ್ತು ಮಕ್ಕಳು ಇರುವ ಒಂದು ಸಮಾಜವು ಇಲ್ಲಿ ಹುಟ್ಟಿಕೊಳ್ಳುವುದು ಬಹಳ ದೂರವಿಲ್ಲ.

### ಕುಡಿಯುವ ನೀರು

ಸ್ವಚ್ಛ ಬದುಕಿಗೆ ಅತ್ಯಗತ್ಯವಾಗಿ ಬೇಕಾಗಿರುವುದು ಶುದ್ಧನೀರು. ಜಾಗತೀಕರಣವು ಇದನ್ನು ಕೂಡ ಒಂದು ಮಾರಾಟದ ವಸ್ತುವನ್ನಾಗಿಸಿದೆ. ನದಿಯ ಮಾರಾಟ ಮತ್ತು ಬಾಟಲಿ ನೀರುಗಳು ಇದರ ಒಂದು ಭಾಗ. ಒಂದು ನದಿಯು ಕೇವಲ ನೀರು ಹರಿದುಹೋಗುವ ಸ್ಥಳವಲ್ಲ. ಅದು ಅಲ್ಲಿ ಬದುಕುವ ಜನರ ಜೀವನಾಡಿ, ಸಂಸ್ಕೃತಿಯ ಉಗಮಸ್ಥಾನ. ಇಂದು ನದಿಗಳಲ್ಲೂ, ಹಳ್ಳತೊರೆಗಳಲ್ಲೂ ನೀರು ವರ್ಷೇ ವರ್ಷೇ ಕಡಿಮೆಯಾಗುತ್ತ ಬರುತ್ತಿದೆ. ಇದರ ಜತೆಗೆ ಮತ್ಸ್ಯ ಸಂಪತ್ತಿನ ಪ್ರಮಾಣವೂ ಗಣನೀಯವಾಗಿ ಇಳಿದಿದೆ. ಇದು ನಮ್ಮ ಗ್ರಾಮೀಣ ಜನತೆಯ ಆಹಾರ ಕ್ರಮವನ್ನು ಬಹಳಷ್ಟು ಬಾಧಿಸಿದೆ. ನದಿಗಳು ಬತ್ತುವುದರೊಂದಿಗೆ, ಜಲಸಂಪತ್ತನ್ನು ಒಪ್ಪಂದದ ಮೇಲೆ ಕಂಪನಿಗಳಿಗೆ ಬರೆದುಕೊಡುವುದರೊಂದಿಗೆ, ನೀರಿನ ಮೂಲಗಳು ಮಲಿನಗೊಳ್ಳುವುದರೊಂದಿಗೆ ಮಹಿಳೆಯರ ಕಷ್ಟಗಳು ಹೆಚ್ಚಾಗಿವೆ. 'ಜಲನಿಧಿ' ಯಂತಹ ಕುಡಿಯುವ ನೀರಿನ ವ್ಯವಸ್ಥೆಗಳು ಅಸ್ತಿತ್ವಕ್ಕೆ ಬರುವುದರೊಂದಿಗೆ ನೀರು ಸರಬರಾಜಿನ ಸಾರ್ವಜನಿಕ ಜವಾಬ್ದಾರಿಯಿಂದ ಸರಕಾರ ಹಿಮ್ಮೆಟ್ಟುತ್ತಿದೆ. ನೀರಿಗಾಗಿ ಅಪಾರ ಹಣವನ್ನು ವೆಚ್ಚಮಾಡಬೇಕಾಗಿಬಂದಾಗ ಅದನ್ನು ಮಿತವಾಗಿ ಬಳಸುವ ಆತಂಕ ಹೆಚ್ಚಿದ್ದರಿಂದಾಗಿ ಶುಚಿತ್ವ ಮತ್ತು ಜನಾರೋಗ್ಯವನ್ನು ಪ್ರತಿಕೂಲವಾಗಿ ಬಾಧಿಸತೊಡಗಿವೆ. ಸ್ತ್ರೀಯರಿಗೆ ಹೆರಿಗೆ, ಮುಟ್ಟು ಎಂಬೀ ಜೈವಿಕ ಕಾರಣಗಳಿಂದಾಗಿ ನೀರಿನ ಆವಶ್ಯಕತೆ ಹೆಚ್ಚಾಗಿ ಇರುತ್ತದೆ. ಅಗತ್ಯಕ್ಕೆ ತಕ್ಕಷ್ಟು ನೀರು ಸಿಗದಿರುವುದು ಸ್ತ್ರೀಯರ ಆರೋಗ್ಯವನ್ನು ಹದಗೆಡಿಸುತ್ತಿದೆ.




### ಕೈಗಾರಿಕಾ ಕ್ಷೇತ್ರ

ಕೈಗಾರಿಕಾ ರಂಗವು ಖಾಸಗೀಕರಣಗೊಳ್ಳುವುದರೊಂದಿಗೆ ಮಹಿಳಾ ಕೆಲಸಗಾರರ ಸಂಖ್ಯೆ ಇಳಿಮುಖವಾಗಿದೆ. ಪರಂಪರಾಗತ ಕೈಗಾರಿಕೆಗಳು ನಶಿಸಿ ಅಂತಹ ರಂಗಗಳಲ್ಲಿ ದುಡಿಯುವ ಮಹಿಳೆಯರ ಕೆಲಸಗಳು ಕಳೆದುಹೋಗುತ್ತಿವೆ. ವಿಮೆ ಮತ್ತು ಬ್ಯಾಂಕುಗಳ ರಾಷ್ಟ್ರೀಕರಣವಾಗುವುದರಿಂದ ಕೆಳಮಟ್ಟದಲ್ಲಿ ಜೀವಿಸುವವರ ಉದ್ಯೋಗಾವಕಾಶಗಳು ಕಡಿಮೆಯಾಗಿ, ಒಪ್ಪಂದದ ಮೇರೆಗೆ ನೇಮಕಗಳಾಗುತ್ತವೆ. ಬ್ಯಾಂಕುಗಳು ರಾಷ್ಟ್ರೀಕರಣಗೊಂಡದ್ದರಿಂದ ಸ್ತ್ರೀಯರ ಸ್ವೋದ್ಯೋಗ ಪ್ರಯತ್ನಗಳಿಗೆ ಸಾಲ ಅಥವಾ ಇನ್ನಾವುದೇ ಸಹಾಯ ಸಿಗದೇ ಇರಬಹುದು. ಇದು ಗ್ರಾಮೀಣ ಜನತೆಯ ದೊಡ್ಡದೊಂದು ಭಾಗವನ್ನು ಬಡತನಕ್ಕೆ ತಳ್ಳಬಹುದು. ಇಂದು ಬೆಳವಣಿಗೆ ಸಾಧಿಸುತ್ತಿರುವ ಯಾವುದೇ ಖಾಸಗಿ ಸಂಸ್ಥೆಗಳಲ್ಲಿ ಸೇವಾವೇತನ ವ್ಯವಸ್ಥೆಗಳಿಲ್ಲ. ಹತ್ತರಿಂದ ಹನ್ನೆರಡು ಗಂಟೆಗಳವರೆಗೆ ಕೆಲಸದ ಅವಧಿಯನ್ನು ವಿಸ್ತರಿಸುವ ಈ ಸಂಸ್ಥೆಗಳಲ್ಲಿ ಹೆರಿಗೆ ರಜೆಯಂತಹ ಅನುಕೂಲಗಳಿಲ್ಲ. ಕೈಗಾರಿಕಾರಂಗದಲ್ಲಿ ಈಗ ಹೆಚ್ಚು ಮಂದಿ ಸ್ತ್ರೀಯರು ಕೆಲಸ ಮಾಡುತ್ತಾರೆಂಬುದು ಸುಳ್ಳು. ಸಾಂದರ್ಭಿಕ ನೇಮಕಾತಿಯ ವಿಚಾರದಲ್ಲಿ ಇದು ಸತ್ಯ. ಯಾವುದೇ ರೀತಿಯ ಕ್ಷೇಮನಿಧಿಯಾಗಲಿ, ಅನುಕೂಲಗಳಾಗಲಿ ಇಂತಹ ನೇಮಕಾತಿ ಗಳಿಗೆ ಅನ್ವಯಿಸುವುದಿಲ್ಲ. ವಿವಾಹಿತ ಮಹಿಳೆಯರು ಅರ್ಜಿ ಹಾಕಬೇಕೆಂದಿಲ್ಲ ಎಂಬ ಸೂಚನೆಗಳೊಂದಿಗೆ ಇವರ ಜಾಹಿರಾತುಗಳು ಬರುತ್ತವೆ. ಬಹುರಾಷ್ಟ್ರೀಯ ಕಂಪನಿಗಳ ಆಸಕ್ತಿಯನ್ನು ಸಂರಕ್ಷಿಸುವ ಮತ್ತು ಗೌರವಿಸುವ ಇಂತಹ ಸಂಸ್ಥೆಗಳು ನಮ್ಮನ್ನು ಮತ್ತೆ ಹಳೆಯ ಯಾಜಮಾನ್ಯ-ಗುಲಾಮಿ ಪದ್ಧತಿಯತ್ತ ಕೊಂಡೊಯ್ಯಬಹುದು.

ತೋಟಗಾರಿಕಾ ವಿಷಯದಲ್ಲಿ ಆಮದು ನಿಯಂತ್ರಣಗಳು ಇಲ್ಲದಿರುವುದರಿಂದ ಉಂಟಾದ ತೊಂದರೆಗಳು ಮಹಿಳಾ ಕೆಲಸಗಾರರನ್ನು ಅಕ್ಷರಶಃ ದಾರಿತಪ್ಪಿಸಿವೆ. ಇಡುಕ್ಕಿ ಜಿಲ್ಲೆಯಲ್ಲಿ ಇವರು ತಮಿಳರಾದ ಬ್ಲೇಡುಕಾರರಿಗೆ ಬಲಿಯಾಗಿ ಕೊನೆಗೆ ಆತ್ಮಹತ್ಯೆಗೆ ಮೊರೆ ಹೋಗಿದ್ದಾರೆ. ಇಡುಕ್ಕಿ ಜಿಲ್ಲೆಯಿಂದ ಈಗ ಕೊಟ್ಟಾಯಂ, ತ್ರಿಶ್ಶೂರು ಮತ್ತು ಎರ್ನಾಕುಲಂ ಜಿಲ್ಲೆಗಳಲ್ಲಿ ಕೆಲಸ ಮಾಡುತ್ತಿರುವ ಖಾಸಗಿ ಹೋಂ ನರ್ಸಿಂಗ್ ಸಂಸ್ಥೆಗಳತ್ತ ಹೆಣ್ಣುಮಕ್ಕಳು ಧಾವಿಸುತ್ತಿರುವುದು ಅದು ಜೀವಿಸಲಿಕ್ಕಿರುವ ಕೊನೆಯ ದಾರಿಯೆಂದು ತೋರಿದ್ದರಿಂದ. ಯಾವುದೇ ನೀತಿ-ನಿಯಮಗಳಿಲ್ಲದ, ಜೀವರಕ್ಷಣೆಯ ಖಚಿತತೆಯಿಲ್ಲದ, ಯಾವುದೇ ಕ್ಷೇಮನಿಧಿಪದ್ಧತಿಗಳಿಲ್ಲದ ಒಂದು ಕೆಲಸದ ಕ್ಷೇತ್ರವದು. ಸಮಾಜವು ಕೂಡ ಇವರನ್ನು ತಿರಸ್ಕಾರದ ನೋಟದಿಂದ ಪ್ರತ್ಯೇಕವಾಗಿ ಇಟ್ಟಿತು. ಇವರು ಜಾಗತೀಕರಣದ ನಿಜವಾದ ಬಲಿಪಶುಗಳು.

### ಕೃಷಿರಂಗ

ಆಹಾರ ಬೆಳೆಗಳಿಗೆ ಮಹತ್ವ ಕೊಡುವುದನ್ನು ಬಿಟ್ಟು ವಾಣಿಜ್ಯ ಬೆಳೆಗಳನ್ನು ಪ್ರಾರಂಭಿಸಿದ್ದು ಕಾರ್ಮಿಕರ ಅವಕಾಶಗಳನ್ನು ಕಸಿದುಕೊಂಡಂತಾಗಿದೆ. ಅಲ್ಲದೆ ಆಹಾರದ ಸುರಕ್ಷತೆಯ ಮೇಲೆ ಕೂಡ ಅದು ಪರಿಣಾಮ ಬೀರಿದೆ. ಭತ್ತದ ಕೃಷಿಯಲ್ಲಿ ಇಳಿಮುಖವಾಗಿದೆ ಎಂಬ ಕಾರಣಕ್ಕೆ ಕೃಷಿಕರು ಇತರ ಕೃಷಿಗಳಿಗೆ ಮೊರೆಹೋದುದು ಮಹಿಳಾ ಕೃಷಿಕಾರ್ಮಿಕರ ಸಂಕಷ್ಟಗಳನ್ನು ಇಮ್ಮಡಿಸಿತು. ಇದೊಂದು ಲಘುವಾಗಿ ತೆಗೆದುಕೊಳ್ಳಬೇಕಾದ ವಿಷಯವಲ್ಲವೆಂಬುದು ಎರಡು ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ತಂಜಾವೂರಿನ ಭತ್ತದ ಕೃಷಿಕರು ಬಹುರಾಷ್ಟ್ರೀಯ ಕಂಪನಿಗಾಗಿ ಜರ್ಕಿನ್ ಸನ್ಸ್ ಎಂಬ ಒಂದು ಜಾತಿಯ ಬಿಳಿ ಅಕ್ಕಿಯನ್ನು ಬೆಳೆಸಲು ಪ್ರಾರಂಭಿಸಿದರು. ಆಗ ಆ ಕ್ಷೇತ್ರದಲ್ಲಿ ದುಡಿಯುತ್ತಿದ್ದ ಸ್ತ್ರೀ ಕಾರ್ಮಿಕರ ಕೆಲಸವು ಬಿಳಿ ಅಕ್ಕಿಯನ್ನು ತಿನ್ನಲು ಬರುವ ಇಲಿಗಳನ್ನು ಹಿಡಿಯುವುದಕ್ಕೆ ಮಾತ್ರ ಸೀಮಿತವಾಯಿತು. ಒಂದು ಇಲಿಯನ್ನು ಹಿಡಿದರೆ ೫೦ಪೈಸೆ ಕೂಲಿ. ಭತ್ತದ ಕೃಷಿಗೆ ಬದಲಾಗಿ ಪ್ರಾರಂಭಿಸಿದ ಇನ್ನೊಂದು ಕೃಷಿಯೆಂದರೆ ಸಿಗಡಿಯದು. ಇದರಲ್ಲಿ ಮಹಿಳೆಯರಿಗೆ ಸಿಗುವ ಕೆಲಸವೆಂದರೆ ಕೊಳಗಳಲ್ಲಿರುವ ಕಸ-ಕೊಳೆಗಳನ್ನು ತೆಗೆದು ಶುದ್ಧಮಾಡಿ ಸಿದ್ಧಗೊಳಿಸುವುದು. ಈ ಕೆಲಸ ಸಿಗುವುದೂ ಬಹಳ ಕಡಿಮೆ ದಿನಗಳಲ್ಲಿ. ಅದಕ್ಕೆ ಸಿಗುವ ಕೂಲಿಯೂ ತುಂಬಾ ಕಡಿಮೆ. ಆಯಾಸ ಹತ್ತುಪಟ್ಟು ಹೆಚ್ಚು. ಈ ಕೆಲಸ ಸಿಗಬೇಕಾದರೂ ಸ್ತ್ರೀಯರು ದಲ್ಲಾಳಿಗಳನ್ನು ಆಶ್ರಯಿಸಬೇಕಾಗುತ್ತದೆ. ಎಷ್ಟೋ ಬಾರಿ ಅದು ಲೈಂಗಿಕ ಶೋಷಣೆಯತ್ತ ಅವರನ್ನು ಒಯ್ಯುವುದೂ ಇದೆ.

ಆಹಾರಬೆಳೆಗಳ ಸುರಕ್ಷತೆಯ ಅಭಾವದಲ್ಲಿ ಬರುವ ದಾರಿದ್ರ್ಯದ ಅನುಭವವು ಹೆಚ್ಚಾಗಿ ಬರುವುದು ಸ್ತ್ರೀಯರಿಗೇ ಆಗಿದೆ. ಭಾರತೀಯ ಕುಟುಂಬಗಳಲ್ಲಿ ಆಹಾರವನ್ನು ಪಾಲುಮಾಡಿಕೊಳ್ಳುವುದರಲ್ಲಿ ಅತಿ ಹೆಚ್ಚಿನ ಅಸಮತೋಲನ ಕಾಣಿಸುತ್ತದೆ. ಒಳ್ಳೆಯ ಆಹಾರವು ಗಂಡಸರಿಗೆ ಎಂಬ ಸಾಂಪ್ರದಾಯಿಕ ನಂಬಿಕೆಯು ಪುರುಷಪ್ರಧಾನ ಸಮಾಜದ ಹಠದ ಪರಿಣಾಮವಲ್ಲದೆ ಬೇರೇನೂ ಅಲ್ಲ.

ಜಾಗತೀಕರಣವು ಬಡವನಿಗೆ ಆಹಾರ ಸಿಗದಂತೆ ಮಾಡಿ ಶ್ರೀಮಂತನಿಗೆ ಹೊಸರುಚಿಗಳ ಸಂಭ್ರಮವನ್ನೇ ಉಂಟುಮಾಡುತ್ತದೆ. ದುಬಾರಿ ಬೆಲೆಗೆ ಸಿಗುವ ವಿದೇಶೀ ತಿಂಡಿತಿನಿಸುಗಳು ನಮ್ಮಲ್ಲಿ ಇಂದು ಹೆಚ್ಚಾಗುತ್ತಿವೆ. ಪ್ರತಿಯೊಂದು ಪ್ರದೇಶಕ್ಕೂ ಅದರ ಹವಾಮಾನಕ್ಕೆ ಅನುಗುಣವಾದ ಆಹಾರಕ್ರಮವಿರುತ್ತದೆ. ಅದನ್ನು ಅಡಿಮೇಲು ಮಾಡುವ ಹೊಸ ಆಹಾರಗಳು ಆರೋಗ್ಯವನ್ನು ಹಾಳುಮಾಡಿ ಹೊಸ ರೋಗಗಳನ್ನು ಸೃಷ್ಟಿಸುತ್ತಿವೆ.

ಪರಂಪರಾಗತ ವ್ಯಾಪಾರಪದ್ಧತಿಗಳನ್ನು ಕಿತ್ತೊಗೆಯುವ ಈ ರೀತಿಯ ಹೊಸನೀತಿಗಳು ವಿನೋದಪ್ರವಾಸ ಮುಂತಾದ ಮನೋರಂಜನೆಯ ಅಂಶಗಳಿಗೆ ಪ್ರಾಮುಖ್ಯ ನೀಡುತ್ತದೆ. ಪರಿಸರದ ಸಮತೋಲನವನ್ನು ಪೂರ್ತಿಯಾಗಿ ಮಲಿನಗೊಳಿಸುವ ಇವು ವೇಶ್ಯಾವೃತ್ತಿ ಮತ್ತು ಅದಕ್ಕಂಟಿಕೊಂಡ ರೋಗಗಳನ್ನು ಹಬ್ಬಿಸುತ್ತವೆ. ಕೋವಳಂ ಸಮುದ್ರತೀರವು ಇದಕ್ಕೊಂದು ಒಳ್ಳೆಯ ಉದಾಹರಣೆ. ಬಾಲ ವೇಶ್ಯಾವೃತ್ತಿಯ ಬಗ್ಗೆ ಹೆಚ್ಚು ವರದಿಯಾದದ್ದು ಕೋವಳಂನಲ್ಲೇ.

ಜಾಗತೀಕರಣದ ನೀತಿಗಳು ಮಹಿಳೆಯರಿಗೆ ನೀಡುವ ಭರವಸೆಗಳೆಂದರೆ ಮಾಡೆಲಿಂಗ್, ಫ್ಯಾಷನ್ ಡಿಸೈನಿಂಗ್ ಮುಂತಾದವು ಮಾತ್ರ. ಇವುಗಳಿಂದ ನಗರವಾಸಿಗಳಾದ ಶೇಕಡಾ ೧೦ ಜನರಿಗೆ ಲಾಭವಾಗಬಹುದೇ ಹೊರತು ಹೆಚ್ಚಿನ ಮಂದಿಗೆ ಏನೂ ಪ್ರಯೋಜನವಾಗದು. ಆದರೆ ಇಂತಹ ಆಕರ್ಷಣೆಗಳ ಹಿಂದೆ ಹಾರಿ ರೆಕ್ಕೆ ಸುಟ್ಟುಕೊಳ್ಳಲು ಬೇಕಾದಷ್ಟು ಪತಂಗಗಳಿವೆಯೆನ್ನುವುದೇ ದುಃಖದ ಸಂಗತಿ.

ಕನ್ನಡಕ್ಕೆ : ಪಾರ್ವತಿ ಐತಾಳ್
ಸುರಗಂಗಾ, ಬಸರೂರು ಕ್ರಾಸ್ ರೋಡ್, ಕುಂದಾಪುರ - ೫೭೬ ೨೦೧




ಲ್ಯಾಟಿನ್ ಅಮೆರಿಕದ ಚಿಲಿ ರಾಷ್ಟ್ರದಲ್ಲಿ ನಡೆದ ಅಧ್ಯಕ್ಷೀಯ ಚುನಾವಣೆಗಳಲ್ಲಿ ಬಹುಮತ ಗಳಿಸಿ ಸೋಷಿಯಲಿಸ್ಟ್ ಪಾರ್ಟಿಯ ನಾಯಕಿ ಮಿಷೆಲ್ ಬ್ಯಾಷಿಲೆ ಆಯ್ಕೆಗೊಂಡಿದ್ದಾರೆ. ದಕ್ಷಿಣ ಅಮೆರಿಕಾ ಖಂಡದ ಇತಿಹಾಸದಲ್ಲಿ ರಾಷ್ಟ್ರವೊಂದರ ಅತ್ಯುನ್ನತ ಪದವಿಗೇರಿರುವ ಎರಡನೇ ಮಹಿಳೆ ಈಕೆ. ಪರಮ ನೀಚ ಸರ್ವಾಧಿಕಾರಿ ಪಿನೋಶೆ ಆಡಳಿತೆಯಲ್ಲಿ ನಡೆದ ದೌರ್ಜನ್ಯದಲ್ಲಿ ತಂದೆಯನ್ನೂ, ಪ್ರಿಯತಮನನ್ನೂ ಕಳೆದುಕೊಂಡು, ತಾಯಿಯೊಂದಿಗೆ ಸೆರೆಯಲ್ಲಿದ್ದು ಚಿತ್ರಹಿಂಸೆ ಅನುಭವಿಸಿ ದೇಶದಿಂದ ಹೊರಹಾಕಲ್ಪಟ್ಟಿದ್ದ ಈಕೆ ವೃತ್ತಿಯಲ್ಲಿ ವೈದ್ಯೆ. ಎರಡು ಬಾರಿ ಸಚಿವೆಯೂ ಆಗಿದ್ದ ಮಿಷೆಲ್ ಬ್ಯಾಷಿಲೆ ಈ ಭೂಭಾಗದ ಇತರ ಪುರೋಗಾಮಿ ಆಡಳಿತಗಳೊಂದಿಗೆ ಕೈಜೋಡಿಸುವರೇ ಎಂಬುದನ್ನು ಕಾದು ನೋಡಬೇಕಿದೆ. ದೀರ್ಘಕಾಲ ಸರ್ವಾಧಿಕಾರ ಆಡಳಿತೆ, ಆನಂತರ ಕನ್ಸರ್‌ವೇಟಿವ್ ಆಡಳಿತವನ್ನು ಹೊಂದಿದ್ದ ಚಿಲಿಯಲ್ಲಿ ಈಗ ಬದಲಾವಣೆಯ ಕಾಲ ಸನ್ನಿಹಿತವಾಗಿದೆ. ಅಧಿಕಾರದ ಚುಕ್ಕಾಣಿ ಹಿಡಿದಿರುವ ಈಕೆ ಜನಪರ ನೀತಿಗಳನ್ನು ಪಾಲಿಸುವರೆಂದು ಆಶಿಸೋಣ. ಚಿಲಿಯ ಈ ಬೆಳವಣಿಗೆ ಲ್ಯಾಟಿನ್ ಅಮೆರಿಕಾದಲ್ಲಿ ಪ್ರಗತಿಪರ ಒಲವಿನ ಇನ್ನೊಂದು ಸೂಚನೆ ಆಗಿದೆ.

ಚಿಲಿಯ ಉತ್ತರದ ಗಡಿಯಲ್ಲಿರುವ ಬೊಲಿವಿಯದಲ್ಲಿ ಸಮಾಜವಾದಿ ಚಳವಳಿಯ ನಾಯಕ ಇವೊ ಮೊರಾಲ್ಸ್ ಚುನಾವಣೆಯಲ್ಲಿ ಬಹುಮತ ಗಳಿಸಿ ರಾಷ್ಟ್ರಾಧ್ಯಕ್ಷ ಪದಕ್ಕೇರಿದ್ದಾರೆ. ಈತ ಈ ಭೂಭಾಗದಲ್ಲಿ ಆಡಳಿತ ಸೂತ್ರ ಹಿಡಿದಿರುವ ಮೊದಲ ದೇಸಿ. ಸ್ವತಃ ಕೋಕ ಬೆಳೆಗಾರನಾಗಿರುವ ಇವೊ, ಈ ಬೆಳೆಗಾರರನ್ನು ಸಂಘಟಿಸಿ ಅಮೆರಿಕಾದ ನೀತಿಯನ್ನು ವಿರೋಧಿಸಿ ಹೋರಾಟ ನಡೆಸುತ್ತಿದ್ದಾರೆ. ಈತ ಜಾರ್ಜ್ ಬುಷ್ ಕಂಪೆನಿಯವರ ದೃಷ್ಟಿಯಲ್ಲಿ ಮಾದಕ ದ್ರವ್ಯಗಳ ಸಾಗಣೆಗಾರ. ಶತಮಾನಗಳ ಕಾಲದಿಂದ ನಾಟಿ ವೈದ್ಯದಲ್ಲಿ, ಧಾರ್ಮಿಕ ಆಚರಣೆಗಳಲ್ಲಿ ಉಪಯೋಗಿಸುತ್ತಿರುವ ಕೋಕ ಬೆಳೆ ಅಮೆರಿಕಾದ


ಇವೊ ಮೊರಾಲ್ಸ್

# ದಕ್ಷಿಣ ಅಮೆರಿಕಾದಲ್ಲಿ ಸಮಾಜವಾದದತ್ತ ಜನತೆಯ ಒಲವು

ನಿರೀಕ್ಷೆಯಂತೆ ನಿಲ್ಲದು, ಆದರೆ ಕೊಕೇನ್ ಮಾದಕ ವಸ್ತುವಿನ ಉತ್ಪಾದನೆ ಇರದು ಎಂದು ಇವೊ ಮೊರಾಲ್ಸ್ ಸ್ಪಷ್ಟವಾಗಿ ಹೇಳಿದ್ದಾರೆ. ದೇಶದ ಇಂಧನಾನಿಲ ಉದ್ಯಮವನ್ನು ರಾಷ್ಟ್ರೀಕರಣ ಮಾಡುವ ಯೋಜನೆಯನ್ನು ಪ್ರಕಟಿಸಿರುವ ಇವೊ ಕ್ಯೂಬಾದ ನಾಯಕ ಫೀಡೆಲ್ ಕ್ಯಾಸ್ಟ್ರೋ ಮತ್ತು ವೆನೆಜುವೇಲದ ಅಧ್ಯಕ್ಷ ಹ್ಯೂಗೋ ಚಾವೇಜ್ ಜೊತೆ ಕೈಜೋಡಿಸಿದ್ದಾರೆ. ಚುನಾವಣೆಯಲ್ಲಿ ಜಯ ಗಳಿಸಿದ ನಂತರ ತಡಮಾಡದೆ ಈ ಇಬ್ಬರು ನಾಯಕರನ್ನೂ ಭೇಟಿಯಾಗಿ ಸಹಮತ ವ್ಯಕ್ತಗೊಳಿಸಿದ್ದಾರೆ. ವಸಾಹತುಶೋಷಣೆ, ಸರ್ವಾಧಿಕಾರಿ ಆಡಳಿತಗಳನ್ನು ಶತಮಾನಗಳ ಕಾಲ ಅನುಭವಿಸಿರುವ ಪರ್ವತಗಳ ನಾಡು ಬೊಲಿವಿಯ, ಎಲ್ಲ ಕ್ರಾಂತಿಕಾರಿ ಯುವ ಜನರಿಗೂ ಸ್ಫೂರ್ತಿಯ ಸೆಲೆಯಾಗಿರುವ ಚೆ ಗುವೇರ ಹೋರಾಡಿದ ನಾಡು. ಈ ಮಹಾನ್ ಕ್ರಾಂತಿಕಾರಿಯ ಕನಸನ್ನು ಇವೊ ಮೊರಾಲ್ಸ್ ನನಸಾಗಿಸುವ ದಿಶೆಯಲ್ಲಿ ಅಡಿಯಿರಿಸುವ ಸೂಚನೆಗಳಿವೆ: ಇನ್ನೂರು ವರ್ಷಗಳ ನಂತರ ಅಧಿಕಾರಕ್ಕೇರಿರುವ ಮೊದಲ ದೇಸಿ ರಾಷ್ಟ್ರಾಧ್ಯಕ್ಷರು ಜನಹಿತಕ್ಕಾಗಿ ಕೈಗೊಳ್ಳುವ ಎಲ್ಲ ಕ್ರಮಗಳಿಗೂ ಜಗತ್ತಿನ ಪುರೋಗಾಮಿಗಳೆಲ್ಲರ ಬೆಂಬಲ ಖಚಿತ.


ಮಿಷೆಲ್ ಬ್ಯಾಷಿಲೆ

ಇಪ್ಪತ್ತೊಂದನೆಯ ಶತಮಾನದ ಪ್ರಾರಂಭದಲ್ಲಿಯೇ ದಕ್ಷಿಣ ಅಮೆರಿಕಾದಲ್ಲಿ ಬದಲಾವಣೆಯ ಸುಂಟರಗಾಳಿ ಎದ್ದಿದೆ. ಉತ್ತರ ಅಮೆರಿಕಾದ ಹಿತ್ತಲು ಎಂದು ಪರಿಗಣಿತವಾಗಿದ್ದು, ಅಮೆರಿಕಾದ ಬಹುರಾಷ್ಟ್ರೀಯ ಕಂಪೆನಿಗಳಿಂದ ತೀವ್ರವಾದ ಶೋಷಣೆಗೆ, ಚಿತಾವಣೆಗಳಿಗೆ ಬಲಿಯಾಗಿರುವ ಇಲ್ಲಿನ ರಾಷ್ಟ್ರಗಳ ಜನಕ್ಕೆ ಈಗ ಮತ್ತೆ ಎಚ್ಚೆತ್ತಿರುವ ಸೂಚನೆಗಳು ಬಲವಾಗಿ ಕಾಣುತ್ತಿವೆ. ಮಧ್ಯ ಪ್ರಾಚ್ಯದಲ್ಲಿ ಇರಾಕಿನ ಮೇಲೆ ದುರಾಕ್ರಮಣ ನಡೆಸಿ, ಜೇನುಗೂಡಿಗೆ ಕೈ ಹಾಕಿದಂತಾಗಿ ರಾಡಿಯಲ್ಲಿ ಸಿಕ್ಕಿಬಿದ್ದಿರುವ ಅಧ್ಯಕ್ಷ ಜಾರ್ಜ್ ಬುಷ್‌ಗೆ ದಕ್ಷಿಣ ಅಮೆರಿಕಾ ಸವಾಲಾಗುವುದರಲ್ಲಿ ಸಂಶಯವಿಲ್ಲ. ಕೆರಿಬಿಯನ್‌ನ ಕ್ಯೂಬಾ, ಸಮಾಜವಾದಿ ಪಥದಲ್ಲಿ ಮುನ್ನಡಿ ಇರಿಸಿ ಅಮೆರಿಕಾದ ಸಾಮ್ರಾಜ್ಯಶಾಹಿಗಳನ್ನು ಎದುರಿಸುತ್ತಿರುವ ಏಕೈಕ ರಾಷ್ಟ್ರವಾಗಿತ್ತು ಈ ಭೂಭಾಗದಲ್ಲಿ. ಆದರೆ ಈಗ ಅದು ಏಕಾಂಗಿಯಾಗಿಲ್ಲ. ವೆನೆಜುವೇಲ, ಬೊಲಿವಿಯಗಳು ಅದರ ಜೊತೆಗೂಡಿವೆ. ಬ್ರೆಜಿಲ್, ಪರಗ್ವೆ, ಅರ್ಜೆಂಟೈನಾಗಳಲ್ಲಿಯೂ ಜನಪರ ಆಡಳಿತಗಳು ಅಸ್ತಿತ್ವದಲ್ಲಿವೆ. ಆದರೆ ನಿರೀಕ್ಷಿತ ಸುಧಾರಣೆಗಳು ಕಾರ್ಯರೂಪದಲ್ಲಿ ಬಂದಿಲ್ಲ. ಸಮಾಜವಾದಿ ಪರ ಒಲವುಳ್ಳ ಸರಕಾರಗಳು ಅಸ್ತಿತ್ವದಲ್ಲಿವೆಯಾದರೂ ಜನರ ನಿರೀಕ್ಷೆಗಳಿಗೆ ಅವು ಸ್ಪಂದಿಸಿಲ್ಲ. ಹಾಗಿದ್ದರೂ ದಕ್ಷಿಣ ಅಮೆರಿಕಾದ ಜನತೆ ಬದಲಾವಣೆಯನ್ನು ನಿರೀಕ್ಷಿಸುತ್ತಿದ್ದಾರೆ. ಸಮಾಜವಾದದ ಪರ ಒಲವು ತೋರುತ್ತಿದ್ದಾರೆ ಎಂಬುದು ಸುಸ್ಪಷ್ಟ.

ಜನತೆಯ ಅಪೇಕ್ಷೆ ಗಳಿಗೆ ಸ್ಪಂದಿಸಿ ಮುನ್ನಡೆಯುವುದರಿಂದ ಮಾತ್ರವೇ ಈ ಬದಲಾವಣೆಯನ್ನು ನಿರಂತರವಾಗಿಸಲು ಸಾಧ್ಯ. ಸ್ವಹಿತ ಸಾಧನೆಯನ್ನೇ ಪ್ರಧಾನ ಗುರಿಯಾಗಿರಿಸಿಕೊಂಡಿರುವ ಅಮೆರಿಕಾ ಹಾಗೂ ಅದರ ಬಹುರಾಷ್ಟ್ರೀಯ ಕಾರ್ಪೋರೇಷನ್‌ಗಳು ಹೊಸ ಅಲೆಯನ್ನು ತಡೆಯಲು, ಹಿಮ್ಮೆಟ್ಟಿಸಲು ಎಲ್ಲ ಬಗೆಯ ಕುತಂತ್ರಗಳನ್ನು ಮಾಡುವುವು. ಅದನ್ನು ಎದುರಿಸಿ ನಿಲ್ಲುವ ಸಾಮರ್ಥ್ಯವನ್ನು ಈ ದೇಶಗಳು ಬೆಳೆಸಿಕೊಳ್ಳಬೇಕಾಗಿದೆ. ಪರಸ್ಪರ ಸಹಕಾರ, ಸಹಯೋಗಗಳಿಂದ ಮಾತ್ರವೇ ಇದು ಸಾಧ್ಯ. ಇಲ್ಲದಿದ್ದಲ್ಲಿ ಅಮೆರಿಕಾ ಆಡಳಿತೆ ನುಂಗಿಹಾಕಿಬಿಡುತ್ತದೆ. ಕಳೆದ ಶತಮಾನದ ಕೊನೆಯ ಭಾಗದಲ್ಲಿ ಚಿಲಿಯಲ್ಲಿ ಅಲೆಂಡೆ ಸರಕಾರದ ಗತಿ, ನಿಕರಾಗುವದಲ್ಲಿ ನಡೆಸಿದ ನರಮೇಧ ಅದಕ್ಕೆ ಉದಾಹರಣೆ. ಈ ಪಾಠವನ್ನು ಎಂದಿಗೂ ಮರೆಯಲಾಗದು.

೫೫ನೇ ಪುಟಕ್ಕೆ



# ರಶಿಯಾದ ರಾಜ್ಯ ಕ್ರಾಂತಿ

ಪಿ. ವೆಂಕಟರಮಣಾಚಾರ್

**ಪ್ರಜೆಗಳೂ ಪಕ್ಷಗಳೂ**

೧೯ನೆಯ ಶತಮಾನದಲ್ಲಿ ರಶಿಯಾದೊಳಗೆ ಬಂಡವಲವಾದ ಪ್ರವೇಶಿಸಿದ್ದರಿಂದಾದ ಅವಸ್ಥಾಂತರಗಳನ್ನು ಹಿಂದಿನ ಪ್ರಕರಣದಲ್ಲಿ ನೋಡಿದುದಾಯಿತು. ಬಂಡವಲದಿಂದುಂಟಾದ ನೂತನ ಬಹು ಜನ ವರ್ಗವನ್ನು ನಾವು ಕೆಲಸಗಾರರೆಂಬ ವಿಶಾಲ ಸಂಕೇತದಿಂದ ಕರೆದರೂ ಅದರಲ್ಲಿ ಪೂರ್ಣವಾದ ಆಂತರಿಕ ಸಮಭಾವವಿತ್ತೆಂದು ಬಗೆಯಬಾರದು. ಕಾರಖಾನೆ ಕೂಲಿಗಾರ, ಚಿಲ್ಲರೆ ಉದ್ಯೋಗಗಳ ಕೂಲಿಕಾರ, ಕುಶಲ, ಅರ್ಧಕುಶಲ, ಅಕುಶಲ ಕೆಲಸಗಾರ; ನಗರಗಳಲ್ಲಷ್ಟು ಹಳ್ಳಿಗಳಲ್ಲಷ್ಟು ದುಡಿಯುವ ಅರ್ಧ ಕೂಲಿಗಾರ, ಹಂಗಾಮಿ ಕೂಲಿಗಾರ, ಇದಕ್ಕೆ ಜನಾಂಗಗಳ ಭಿನ್ನತೆ ಸೇರಿ ಕೆಲಸಗಾರರ ವರ್ಗದಲ್ಲಿಯೇ ಅನೇಕ ಅಭಿಪ್ರಾಯ ಭೇದಗಳೂ ಅಂತಃಕಲಹಗಳೂ ಸಂಭವಿಸಿದ್ದುಂಟು. ಆದರೂ ಕಷ್ಟದಲ್ಲಿ, ಆಸಕ್ತಿಯಲ್ಲಿ ಸಮಾನರಾಗಿದ್ದ ಇವರಲ್ಲಿ ಕೊನೆಗೆ ಐಕಮತ್ಯವುಂಟಾಯಿತು.

ಜೀತಗಾರರ ವಿಮೋಚನೆಯೊಡನೆ ಒಕ್ಕಲಿಗವರ್ಗದಲ್ಲಿಯೂ ಅನೇಕ ಪ್ರಭೇದಗಳಾದುವು. ಜಮೀನುದಾರರಲ್ಲದೆ, ಧನಿಕ ಒಕ್ಕಲಿಗರಾದ 'ಕುಲಕರು' ('ಕುಲಕ' ಎಂದರೆ ರಶಿಯನ್ ಭಾಷೆಯಲ್ಲಿ ಮುಷ್ಟಿ, ಸಿಕ್ಕಿದ್ದನ್ನೆಲ್ಲ ಆತುಕೊಳ್ಳುವ ಜಡಿದ ಮುಷ್ಟಿಯೆಂದರ್ಥ), ಮಧ್ಯ ತರಗತಿಯ ಒಕ್ಕಲಿಗರು ಮತ್ತು ಬಡರೈತರು. ಇವರಲ್ಲದೆ ಅಸಂಖ್ಯ ಭೂಮಿಹೀನ ರೈತರು ಹಾಗೂ ಅರೆ-ರೈತರು.

ಇದಲ್ಲದೆ ಬಹುರೂಪವಾದ ಮತ್ತು ಬಹುಸಂಖ್ಯಾಕವಾದ ಚಿಲ್ಲರೆ ಮಧ್ಯಮವರ್ಗ (ಇದರಲ್ಲಿ ಚಿಲ್ಲರೆ ರೈತರೂ ಸೇರಿದರು)ವೊಂದಿತ್ತು ಮತ್ತು ಧನಿಕಮಧ್ಯಮ ವರ್ಗವೊಂದಿತ್ತು.

ಹೀಗೆ ಕೊನೆಗೆ ಝಾರ್ ಎರಡನೆಯ ನಿಕಲಸ್ ಪಟ್ಟಕ್ಕೆ ಬಂದು ಏಕಾಧಿಪತ್ಯವನ್ನು ಅಪರಿವರ್ತನೀಯವೆಂದು ಸಾರಿದಾಗ ಆ ಏಕಾಧಿಪತ್ಯದ ಮೂಲಾಧಾರವಾದ ಉಂಬಳಿ ಜಮೀನುದಾರಿಕೆ ರಶಿಯಾದಲ್ಲಿ ಅಸ್ತಿತ್ವದಲ್ಲಿದ್ದಿಲ್ಲವೆಂದರಿಯದೆ ಕೆಟ್ಟನು.

* * *

ಕೂಲಿಗಾರ-ಒಕ್ಕಲಿಗ-ಮಧ್ಯಮವರ್ಗಗಳಿಂದ ಕೂಡಿದ ಈ ವಿಶಿಷ್ಟ ಜನ ಸಮುದಾಯದತ್ತ ಬೇರೆ ಬೇರೆ ಪಕ್ಷಗಳ ಒಲವು ಬೇರೆ ಬೇರೆ ತೆರನಾಗಿತ್ತು.

ಪ್ರಥಮತಃ, ಒಕ್ಕಲಿಗನನ್ನೇ ರಶಿಯಾದ ಭಾಗ್ಯವಿಧಾತನೆಂದು ಭಾವಿಸಿ ಆಂದೋಲನ ಮಾಡುತ್ತಿದ್ದ ಕೃಷಕ ಸಾಮ್ಯವಾದಿಗಳ 'ನರೊಡ್ನಿಕಿ' (ನರೋಡ್=ಪ್ರಜೆ) ಪಕ್ಷವೊಂದಿತ್ತು. ಅದಕ್ಕೆ ರಶಿಯಾ ಬಂಡವಲವಾದಿಯಾಗಬಲ್ಲದೆಂದು ವಿಶ್ವಾಸವೇ ಆಗಲೊಲ್ಲದು. ಚಿಲ್ಲರೆ ಮಧ್ಯಮ ವರ್ಗದವರಾದ ಒಕ್ಕಲಿಗರ ಪ್ರಜಾತಂತ್ರವನ್ನೇ ನರೋಡ್ನಿಕರು ಸಾಮ್ಯವಾದವೆಂದು ಭ್ರಮಿಸುತ್ತಿದ್ದರು. ಪುಗಶೇಫ್ ದಂಗೆಯ ಸೋಲು ಅವರಿಗೇನೂ ಪಾಠ ಕಲಿಸಿರಲಿಲ್ಲ. ನಗರಗಳಲ್ಲಿ ಔದ್ಯೋಗಿಕ ಮಧ್ಯಮ ವರ್ಗದ ಬೆಂಬಲವಿಲ್ಲದೆ ಹಳ್ಳಿಗಳಲ್ಲಿ ಕ್ರಾಂತಿಗಳು ಸಫಲವಾಗುವುದಿಲ್ಲೆಂದೂ ರಶಿಯಾದ ಮಧ್ಯಮವರ್ಗಕ್ಕೆ ರಾಜಕೀಯ ಕ್ರಿಯಾಶಕ್ತಿಯಿದ್ದಿಲ್ಲವೆಂದೂ ಅವರಿಗೆ ಇನ್ನೂ ಮನವರಿಕೆಯಾಗಿದ್ದಿಲ್ಲ. ನರೋಡ್ನಿಕಿಯ ಆದಿಮ ದಿನಗಳಲ್ಲಿ ಅದು ತನ್ನ ಧ್ಯೇಯಸಾಧನೆಗಾಗಿ ಭಯೋತ್ಪಾದಕ ಕಾರ್ಯಗಳನ್ನು ಉಪಯೋಗಿಸುತ್ತಿತ್ತು. ದುಷ್ಟ ಅಧಿಕಾರಿಗಳನ್ನು, ಪೊಲೀಸರನ್ನು, ಶ್ರೀಮಂತ ಜಮೀನುದಾರರನ್ನು ಬಾಂಬಿನಿಂದಲೋ ಗುಂಡಿನಿಂದಲೋ ಹೊಡೆದುಹಾಕುವುದೋ, ಅವರನ್ನು ಸುಲಿಗೆ ಮಾಡುವುದೋ, ಇಂಥ ಪ್ರಯೋಗಗಳಿಂದ ಜನಹಿತ ಸಾಧನೆಯಾಗಬಹುದೆಂಬ ಭ್ರಾಂತಿ ಅವರಿಗೆ. ಈ ಕೃತಿಗಳಲ್ಲಿ ಅವರಿಗೆ ಎಷ್ಟೋ ಬಾರಿ ಗೆಲವು ದೊರೆತರೂ ಒಟ್ಟಿನ ಮೇಲೆ ಅದು ಅಧಿಕಾರಿಶಾಹಿಯ ಮುಷ್ಟಿಯನ್ನು ಇನ್ನಷ್ಟು ಬಿಗಿ ಮಾಡುವುದರಲ್ಲಿ ಪರಿಣಮಿಸುತ್ತಿತ್ತು. ಈ ಪಕ್ಷವೇ ಸಾಮ್ಯಕ್ರಾಂತಿವಾದಿ ಪಕ್ಷದ ತಾತ. ಈ ಹೊಸ ಪಕ್ಷವೂ ತನ್ನ ಸಾಧನಗಳಲ್ಲಿ ಭಯೋತ್ಪಾದನೆಯನ್ನು ಸೇರಿಸಿಕೊಂಡಿತ್ತು. ನರೋಡ್ನಿಕಿಯಂತೆ ಇದಕ್ಕಾದರೂ ಚಿಲ್ಲರೆ-ಮಧ್ಯಮವರ್ಗದ ಕ್ರಾಂತಿಯೇ ಆದರ್ಶ.

ಇನ್ನು 'ಉದಾರ' ಮತದ ಜಮೀನ್ದಾರರೂ ಅವರ ಬಂಧುಗಳಾದ ಧನಿಕ ಮಧ್ಯಮ ವರ್ಗದವರೂ ಪಶ್ಚಿಮ ಯೂರೋಪಿನ ಮಾದರಿಯ ಘಟನಾತ್ಮಕ ರಾಜ ಸತ್ತೆಯನ್ನು ಬೇಡುತ್ತಿದ್ದರು. ಅವರಿಗೆ ರಾಜಸತ್ತೆಯ ಮೇಲೆ ಯಾವ ವೈರವೂ ಇದ್ದಿಲ್ಲ. ಅವರ ಎಣಿಕೆಯಲ್ಲಿ ಹಟಮಾರಿ ನಿಕಲಸ್‌ನೇ ಕಾಲ್ತೊಡಕು. ಮೊದಮೊದಲು ಅವರು ನರೋಡ್ನಿಕಿಯ ಕ್ರಾಂತಿವಾದಿ ಭಯೋತ್ಪಾದಕರಿಗೆ ಧನಸಹಾಯ ಮಾಡುತ್ತಿದ್ದರು. ಅವರ ಸಿಡಿಮದ್ದುಗಳಿಗೆ ಹೆದರಿ ರಾಜಸತ್ತೆ ತಮಗೆ ಶರಣಾಗತವಾದೀತೆಂಬ ಆಸೆಯೇ ಇದಕ್ಕೆ ಪ್ರಚೋದಕವಾಗಿತ್ತಲ್ಲದೆ ನರೋಡ್ನಿಕ ತತ್ವಜ್ಞಾನದ ಮೇಲಿನ ವಿಶ್ವಾಸವಲ್ಲ. ಅವರ ಪಕ್ಷಕ್ಕೆ ಕ್ಯಾಡೆಟ್ ಪಕ್ಷವೆಂದು ಸಂಕೇತ. ('ಕ್ಯಾಡೆಟ್' ಎಂಬುದು ಕನ್‌ಸ್ಟಿಟ್ಯೂಶನಲ್ ಡೆಮೊಕ್ರಾಟಿಕ್ ಎಂಬುದರ ಹ್ರಸ್ವ ರೂಪ). ಅಕ್ಟೋಬ್ರಿಸ್ಟ ಎಂಬ ಇನ್ನೊಂದು ಪಕ್ಷವೂ ಕ್ಯಾಡೆಟ್ ಪಕ್ಷದಂತೆ ಬಂಡವಲಗಾರರದೇ. ಆದರೆ ಇದು ಇನ್ನೂ ಮಂದಗಾಮಿ ಅಥವಾ 'ಬಲ' ಪಕ್ಷ ಅಷ್ಟೆ.

ಕೊನೆಯದಾಗಿ, ಕೂಲಿಗಾರ ರಾಜ್ಯಸ್ಥಾಪನೆಗಾಗಿ ಹೆಣಗಾಡುತ್ತಿದ್ದ ಸಾಮ್ಯ-ಪ್ರಜಾತಂತ್ರವಾದಿಗಳು ಬರುತ್ತಾರೆ. ರಶಿಯಾದ ಭಾಗ್ಯವಿಧಾತ ಕೂಲಿಗಾರನೆ ಸರಿ ಎಂಬ ಸಿದ್ಧಾಂತಕ್ಕೆ ಬಂದು ಅವರು ಕೂಲಿಗಾರರ ಸಂಘಟನೆಯಲ್ಲಿ ನಿರತರಾಗಿದ್ದರು. ಕಾರ್ಲ್ ಮಾರ್ಕ್ಸ್‌ನ ಅನುಯಾಯಿಗಳಾಗಿ ಅವರು ಜಗತ್ತಿನಲ್ಲಿ ಸಾಮ್ಯವಾದಿ ಸಮಾಜವನ್ನು ಸ್ಥಾಪಿಸಲು ಟೊಂಕ ಕಟ್ಟಿದವರು. ಮೊತ್ತಮೊದಲು ಅವರು ಕೂಲಿಗಾರರಲ್ಲಿ ವರ್ಗಕಲಹದ ತತ್ವಗಳನ್ನು ಪ್ರಚಾರ ಮಾಡಿ ಅವರಲ್ಲಿ ವರ್ಗಾನುಭವವನ್ನು ಕಲಕುತ್ತಾರೆ; ಬಳಿಕ ಪ್ರಚಾರದಿಂದ ಆಂದೋಲನಕ್ಕೆ ನೆಗೆಯುತ್ತಾರೆ. ೧೮೯೫-೯೬ರಲ್ಲಿಯೇ ಕೂಲಿಗಾರವರ್ಗದ ಮೇಲೆ ಇವರ ಪ್ರಭಾವ ನಿಚ್ಚಳವಾಗಿ ಬಿದ್ದಿತ್ತು. ಆ ವರ್ಷಗಳಲ್ಲಿ ನಡೆದ ಮಹಾಮುಷ್ಕರಗಳಲ್ಲಿಯೇ ರಶಿಯನ್ ಕೂಲಿಗಾರನಲ್ಲಿದ್ದ ಗುಪ್ತಕ್ರಾಂತಿಸತ್ವದ ಪ್ರತಿಬಿಂಬವನ್ನು ಕಾಣಬಹುದು. ಆಗಲೆ ಕೆಲಸಗಾರರ ಆಂದೋಲನಕ್ಕೂ ಸಾಮ್ಯವಾದಕ್ಕೂ ಹರಿಯದ ನಂಟು ಗಂಟುಬಿದ್ದಾಗಿತ್ತು.

ಸಾಮ್ಯವಾದಿಗಳ ನೇತೃತ್ವದ ಫಲವಾಗಿ ರಶಿಯನ್ ಕೂಲಿಗಾರ ಚಳವಳಿ ಬರಿ ಆರ್ಥಿಕ ಹೋರಾಟದ ಸೀಮೆಯನ್ನು ದಾಟಿ ರಾಜಕೀಯ ಅಧಿಕಾರಕ್ಕೆ ಕೈಚಾಚಿತ್ತು. ಅದಕ್ಕೆ ಪ್ರಾಚೀನ ಅಧಿಕಾರಿವರ್ಗವನ್ನು ಕಿತ್ತು ಹಾಕಿದ್ದರಿಂದ ಮಾತ್ರ ತೃಪ್ತಿಯಾಗುವಂತಿದ್ದಿಲ್ಲ. ಮಧ್ಯಮ ವರ್ಗದ

ಅಧಿಕಾರದಿಂದ ತನ್ನ ಉದ್ದೇಶಗಳು ಸಫಲವಾಗುವಂತೆ ಅದಕ್ಕೆ ಕಾಣಲಿಲ್ಲ. ಆದರೂ ನರೋಡ್ನಿಕಿಯ ಭಯೋತ್ಪಾದಕ ಚಳವಳಿಯನ್ನು ಅದು ವಿರೋಧಿಸುತ್ತಿತ್ತು. 'ವರ್ಗಾನುಭವ', ಸಂಘಟನೆಗಳ ಮೇಲೆ ದುಡಿದಷ್ಟು ಸಾಲದೆಂದು ಅವರ ಅಭಿಮತ. ಸರಿಯಾದ ಸಂಘಟನೆಯಿಂದ ಕೆಲಸಗಾರರಲ್ಲಿ ನಿಷ್ಠೆಯನ್ನುಂಟುಮಾಡಿ ಯೋಗ್ಯ ಕಾಲ ಬಂದಾಗ ನಿರಂಕುಶ ಪ್ರಭುತ್ವವನ್ನೂ ಬಂಡವಲವಾದವನ್ನೂ ಸೇರಿಯೇ ಕೆಡವಿಬಿಡಬೇಕೆಂದು ಅದು ಹೊಂಚುಹಾಕುತ್ತಿತ್ತು. ಅದಕ್ಕೆ ಈ ಝಾರ, ಆ ಝಾರ; ಒಬ್ಬ ಬಂಡವಲಗಾರ, ಇನ್ನೊಬ್ಬ ಅಧಿಕಾರಿ; ಇವರ ಮೇಲೆ ವಿಶಿಷ್ಟ ವೈರವಿದ್ದಿಲ್ಲ. 'ಮೂಲೇ ಕುಠಾರ'ದ ಹವಣು, ಹೊಸ ಸಾಮಾಜಿಕ ವ್ಯವಸ್ಥೆಯನ್ನು ಸ್ಥಾಪಿಸುವ ಹಂಬಲು ಅದರ ಪ್ರತಿಕಾರ್ಯವನ್ನು ಪ್ರಚೋದಿಸುತ್ತಿತ್ತು.

ಈ ಕವಲುಸಮಾಜದ ಕವಲು ಗುರಿಗಳ ಸೆಳೆದಾಟದ ನಡುವೆ ನಿಂತಿತ್ತು – 'ಪರಿವರ್ತನೆಯಿಲ್ಲ!' ಎಂಬ ಒಂದೇ ರಾಗ ಹಾಡುವ ಝಾರ್ ಎರಡನೆಯ ನಿಕಲಸನ ಏಕಸತ್ತೆ, ಸ್ವೇಚ್ಛಾಸತ್ತೆ. ಒಬ್ಬನಿಗೆ ಅನ್ನ ಬೇಕಾಗಿತ್ತು, ಒಬ್ಬನಿಗೆ ಮನೆ ಬೇಕಾಗಿತ್ತು, ಒಬ್ಬನಿಗೆ ಅಧಿಕಾರ ಬೇಕಾಗಿತ್ತು; ಆದರೆ ಝಾರಶಾಹಿ ಎಲ್ಲರಿಗೂ ತೋರಿಸುತ್ತಿದ್ದುದು ಒಂದೇ – ಗದೆ !

**ಅಂತಃಪ್ರವಾಹಗಳ ಗಮನ-ಪ್ರತಿಗಮನ**

**ಲೆನಿನ್ ಬರುತ್ತಾನೆ**

ದೂರ ಬಹು ದೂರ. ಎರಡು ರಣಭೂಮಿಗಳಾಚೆಗೆ, ಸ್ವಿಝರ್ಲಂಡಿನಲ್ಲಿ ಕುಳಿತು ಬಾಲ್ಶೆವಿಕ್ ಪಕ್ಷದ 'ಗಿರಿಗರುಡ' ಲೆನಿನ್ ರಶಿಯಾದಲ್ಲಿ ಬೀಸುತ್ತಿದ್ದ ಬಿರುಗಾಳಿಯನ್ನು ಆತುರದಿಂದ, ಆವೇಗದಿಂದ, ಸಹರ್ಷನಾಗಿ ನೋಡುತ್ತಿದ್ದನು. ಅರ್ಧ ಪ್ರಜ್ಞೆಯ, ನಿಶ್ಶಂಕ ವಿಶ್ವಾಸದಿಂದ, ತನ್ನ ನೆತ್ತರ ನೈವೇದ್ಯವಿತ್ತು ಸಂಪಾದಿಸಿದ ಕ್ರಾಂತಿಯನ್ನು ತನ್ನ ಬದ್ಧ ವೈರಿಗಳ ಕೈಗೆ ಜಾರಗೊಟ್ಟಿದ್ದ ಜನತೆಯನ್ನು ನೋಡಿ ಆತ ಪರಿತಪಿಸುತ್ತಿದ್ದನು. ಶುದ್ಧದೃಷ್ಟಿಯ ಬರಗಾಲ ಹಿಡಿದಿದ್ದ ಮುಂದಾಳುಗಳು ಅಶುದ್ಧ ತರ್ಕದ ಬಲೆಯಲ್ಲಿ ಬಿದ್ದು ಜನತೆಯ ವಿಶ್ವಾಸವನ್ನು ದುರುಪಯೋಗಿಸುತ್ತಿದ್ದುದು ಅವನಿಗೆ ದುಃಸಹವಾಗಿತ್ತು. ಕೆರೆನ್‌ಸ್ಕಿಯಂಥ ಸಾಮ್ಯವಾದಿಯ ಸೋಗಿನ ಸಂದರ್ಭಸಾಧಕರ ಉದ್ವಿಗ್ನ ಭಾಷಣಗಳಿಗೆ ಜನತೆಯಷ್ಟೇ ಅಲ್ಲ, ಸೋವಿಯತ್ ಕೂಡ ತನ್ನ ವಿವೇಕವನ್ನು ಮಾರಿದ್ದು ನೋಡಿ ಅವನಿಗಾದ ಸಂಕಟಕ್ಕೆ ಆಳತೆಯಿಲ್ಲ.

ಝಾರನ ಪತನವಾದಂದಿನಿಂದ ಕೆಲ ತಿಂಗಳು ರಶಿಯಾದಷ್ಟು ಸ್ವತಂತ್ರ ರಾಜ್ಯ ಬೇರೊಂದಿದ್ದಿಲ್ಲ. ದೂರ ಪೂರ್ವದ ಸೈಬೇರಿಯಾದಿಂದ, ಉತ್ತರ ಧ್ರುವದಿಂದ, ಆಲ್ಟಾಯಿ ಪರ್ವತಗಳ ಆಚೆಯಿಂದ ರಾಜಕೀಯ ಕೈದಿಗಳು, ಮೆನ್ಶೆವಿಕರು, ಸಾಮ್ಯಕ್ರಾಂತಿಕಾರರು, ಬಾಲ್ಶೆವಿಕರು ಮತ್ತಿತರರು ಬಂದು ಕ್ರಾಂತಿಯ ಕೇಂದ್ರದಲ್ಲಿ ನೆರೆದರು. ಆದರೆ ಅಲ್ಲಿ ಸ್ವಿಝರ್ಲಂಡಿನಲ್ಲಿ, ಸೈಬೇರಿಯಾಕ್ಕಿಂತ ಸಮೀಪದಲ್ಲಿದ್ದ ಲೆನಿನನಿಗೆ ತನ್ನ ಮಾತೃಭೂಮಿಗೆ ಮರಳುವುದು ಸುಲಭವಾಗಿರಲಿಲ್ಲ. ಸುತ್ತಲೂ ಯುದ್ಧನಿರತ ರಾಷ್ಟ್ರಗಳು. ಬಾಲ್ಶೆವಿಕರ ಪುಂಡ ಗುರುವಿನ ಯುದ್ಧವಿರೋಧಕಪ್ರಚಾರ ಅವರಿಗರಿಯದ್ದಲ್ಲ. ಅವನನ್ನು ರಶಿಯಾಕ್ಕೆ ಹೋಗಗೊಟ್ಟರೆ ಮಿತ್ರರಾಷ್ಟ್ರಗಳಿಗೆ ಖಂಡಿತ ಕೇಡು ಬರುವುದೆಂದು ಅವರಿಗೆ ಗೊತ್ತು. ಯುದ್ಧ ಪಕ್ಷಪಾತಿ ತಾತ್ಪೂರ್ತಿಕ ಸರಕಾರಕ್ಕೆ ಕೀಟಲೆ ಕೊಡಬಹುದಾದ ಈ ಪುಂಡನನ್ನು ಮತ್ತು ಅವನ ಶಿಷ್ಯರನ್ನು ತಮ್ಮ ದೇಶಕ್ಕೆ ಹೋಗದಂತೆ ತಡೆಯಲು ಸಾಧ್ಯವಾದ ಎಲ್ಲ ಉಪಾಯಗಳನ್ನು ಅವರು ಮಾಡಿಯೇ ಇದ್ದರು. ಅದೇ ಕಾರಣಕ್ಕಾಗಿ ಜರ್ಮನ್ ಸರಕಾರ ಅವನನ್ನು ಫಿನ್ಲೆಂಡಿನವರೆಗೆ ಜರ್ಮನಿಯ ಮೂಲಕ 'ಮುಚ್ಚಿದ ಬಂಡಿ'ಯಲ್ಲಿ ತಲುಪಿಸಲು ಒಡಂಬಟ್ಟಿತು. ಲೆನಿನ್ ರಶಿಯಾವನ್ನು ಮುಟ್ಟಿದರೆ ಅದರ ಸ್ವಾರ್ಥಕ್ಕೆ ಪ್ರಯೋಜನವೇ ತಾನೆ ?

'ಮುಚ್ಚಿದ ಬಂಡಿ'ಯಲ್ಲಿ ಲೆನಿನ್ ಏಪ್ರಿಲ್ ೩ರಂದು ಫಿನ್ಲಂಡನ್ನು ಸೇರಿದನು. ಜರ್ಮನರು ಸ್ವಾರ್ಥಮಯ ಔದಾರ್ಯವನ್ನು ಸ್ವೀಕರಿಸಿದ್ದರಿಂದ ತನ್ನ ಹೆಸರಿಗೆ ಕಳಂಕ ಹಚ್ಚುವ ಪ್ರಯತ್ನ ನಡೆಯುವದೆಂದು ಅವನಿಗೆ ಮೊದಲೇ ಗೊತ್ತಿತ್ತು. ಆ ಊಹೆ ತಪ್ಪಾಗಲಿಲ್ಲ. ಆದರೆ ಜನತೆಯ ತ್ಯಾಗದ ಫಲ ಅವರ ವೈರಿಗಳ ಕೈಗೆ ಸಿಕ್ಕುವುದನ್ನು ತಪ್ಪಿಸಲಾರದಿದ್ದರೆ ಅವನ ಹೆಸರಿಂದೇನು ? ಲೆನಿನನ ಹೆಸರು ಆಗಲೇ ಮನೆಮಾತಾಗಿತ್ತು. ಅವನನ್ನು ದೇಶ ಸಂಭ್ರಮದಿಂದ ಎದುರುಗೊಂಡಿತು. ಬಾಲ್ಶೆವಿಕರೂ ಮೆನ್ಶೆವಿಕರೂ ಸೇರಿಯೇ ಅಲ್ಲಿ ನೆರೆದಿದ್ದರು. ಮಾರ್ಚ್ ಆದಿಯಲ್ಲಿ ಸೈಬೇರಿಯಾದಿಂದ ಮರಳಿದ್ದ ಸ್ಟಾಲಿನ್, ಕಾಮನೇಫ್ ಮತ್ತು ಡ್ಯೂಮಾದ ಹಳೆ ಬಾಲ್ಶೆವಿಕ್ ಸದಸ್ಯರು ಪ್ರಾವ್ದಾ ಪತ್ರಿಕೆಯ ಮೂಲಕ ವಹಿಸಿದ ಧೋರಣೆಯನ್ನು ನೋಡಿ, ಮೆನ್ಶೆವಿಕರಿಗೆ ಬಾಲ್ಶೆವಿಕರೊಡನೆ ಐಕ್ಯವಾಗುವ ಆಸೆ ಮೂಡಿತ್ತು. ಈ ಪ್ರಮುಖ ಬಾಲ್ಶೆವಿಕರು ಮೆನ್ಶೆವಿಕರಂತೆ 'ತಾತ್ಪೂರ್ತಿಕ ಸರಕಾರದವರು ಜನಹಿತದ ಧೋರಣೆ ವಹಿಸಿದಷ್ಟು ದಿನ ಅಷ್ಟುಮಟ್ಟಿಗೆ ಅವರಿಗೆ ಬೆಂಬಲವೀಯಬೇಕೆಂದೂ ಕ್ರಾಂತಿಯ ವಿಜಯದಿಂದಾಗಿ ಮೊದಲು ಅವಶ್ಯವಾಗಿ ಸಾಮ್ರಾಜ್ಯವಾದಿ ಯುದ್ಧವಾಗಿದ್ದುದು ಈಗ ಆತ್ಮರಕ್ಷಣೆಯ ಅರ್ಥಾತ್ ಪ್ರಜೆಗಳ ಯುದ್ಧವಾಗಿದೆಯೆಂದೂ, ಅನ್ನತೊಡಗಿದ್ದರು.

ಲೆನಿನ್ ಬಂದ ದಿನವೇ ಎಲ್ಲರನ್ನೂ ದಂಗುಬಡಿಸಿದನು. ಯುದ್ಧ ವಿಷಯಕ್ಕೆ ಅವನ ವಿರೋಧ ಧೋರಣೆ ಹಾಗೆಯೇ ಇದ್ದಿಲ್ಲವಾದರೆ ಇನ್ನಷ್ಟು ದೃಢವಾಗಿತ್ತು. ತಾತ್ಪೂರ್ತಿಕ ಸರಕಾರ ಬಂಡವಲವಾದಿಯಾಗಿದೆ, ಅದನ್ನು ಮಗುಚಿಹಾಕಿ **ಕೂಲಿಗಾರರ ಮತ್ತು ಬಡರೈತರ ಸರ್ವಾಧಿಕಾರವನ್ನು** ಸ್ಥಾಪಿಸುವುದು ಕ್ರಾಂತಿಕಾರರ ಆದ್ಯಕರ್ತವ್ಯ ಎಂದು ಅವನ ವಾದ. ಮರುದಿನವೇ 'ಏಪ್ರಿಲ್ ಮೀಮಾಂಸೆ'ಗಳೆಂದು ಮುಂದೆ ಪ್ರಸಿದ್ಧವಾದ ಕೆಲವು ವಿಚಾರಗಳನ್ನು ಪ್ರಕಟಿಸಿದನು. ಅದು ಮೆನ್ಶೆವಿಕರ ಆಶೆಗೆ ತಣ್ಣೀರೆರಚಿತು. ಬಾಲ್ಶೆವಿಕರನ್ನು ವಿಮೂಢರಾಗಿ ಮಾಡಿತು. ಶತ್ರುಗಳೂ ಮಿತ್ರರೂ ಸೇರಿಯೆ ಕೆಲಕಾಲ ಅವನ ಬುದ್ಧಿ ಮಂಕಾಗಿದೆಯೆಂದು ಭಾವಿಸಿದರು. ಕೆಲವರು ಅವನನ್ನು ಜರ್ಮನ್ ಗುಪ್ತಚರನೆಂದು ತೆಗಳಿದರು. ಮಾರ್ಕ್ಸ್‌ವಾದಿಗಳು ಮಧ್ಯಮವರ್ಗದ ಕ್ರಾಂತಿಯನ್ನು ಕೂಲಿಗಾರ (ಮತ್ತು ಬಡ ರೈತ!)ರ ಸರ್ವಾಧಿಕಾರಕ್ಕೆ ಎಳೆಯೋಣವೆನ್ನುವ ಅವನ ತರ್ಕಶಕ್ತಿಗೆ ರಶಿಯಾದ ನೈಜಪರಿಸ್ಥಿತಿಯ ಅಜ್ಞಾನವೇ ಕಾರಣವೆಂದರು.

ಮೊದಮೊದಲು ಬಾಲ್ಶೆವಿಕರು ಕೂಡ 'ಏಪ್ರಿಲ್ ಮೀಮಾಂಸೆ'ಯನ್ನು ತಮ್ಮ ಪಕ್ಷದ ಕಾರ್ಯಕ್ರಮವಾಗಿ ಒಪ್ಪಲಿಲ್ಲ. ಅದು ತಾತ್ಕಾಲಿಕವಾಗಿ ಲೆನಿನನ ವೈಯಕ್ತಿಕ ಅಭಿಪ್ರಾಯವಾಗಿತ್ತು. ಆದರೆ ಸಮಯ ಸಂದಂತೆ, ಅವನ ವಿಚಾರದೃಷ್ಟಿಗೆ ಗೋಚರವಾದ ಆ ಸತ್ಯ ಪಕ್ಷದ ಸದಸ್ಯರ ಅನುಭವಕ್ಕೆ ಗೋಚರವಾಗತೊಡಗಿತು. ಕೆಲವೇ ವಾರಗಳಲ್ಲಿ ಪಕ್ಷವೆಲ್ಲ ಲೆನಿನ್‌ನ ಹೊಸ ಕಾರ್ಯಕ್ರಮದ ಬೆಂಬಲಕ್ಕೆ ನಿಂತಿತು.

**ಏಪ್ರಿಲ್ ಮೀಮಾಂಸೆ**

ಲೆನಿನ್‌ನ ಏಪ್ರಿಲ್ ಮೀಮಾಂಸೆಯ ಸಾರ ಕೆಳಗಿನಂತಿದೆ :

೧. ಯುದ್ಧವಿಚಾರದಲ್ಲಿ ಕ್ರಾಂತಿಕಾರಿ ಆತ್ಮರಕ್ಷಣೆಯ ವಾದಕ್ಕೆ ನಾವು ರವಷ್ಟು ಎಡೆ ಕೊಡಬಾರದು. ಏಕೆಂದರೆ (ತಾತ್ಕಾಲಿಕ) ಸರಕಾರ ಇನ್ನೂ ಬಂಡವಲವಾದಿ ಸ್ವರೂಪದ್ದಿದೆ. ಆದರಿಂದ 'ಲವಾಫ್ ಮತ್ತು ಕಂಪನಿ'ಯ ಈ ಹೊಸ ಸರಕಾರದ ಕೈಕೆಳಗೆ ಕೂಡ ಇದು ನಿಸ್ಸಂದೇಹವಾಗಿ ಸಾಮ್ರಾಜ್ಯವಾದಿ ಯುದ್ಧವೇ ಸರಿ.

ವರ್ಗ ಪ್ರಜ್ಞೆಯುಳ್ಳ ಕೂಲಿಗಾರವರ್ಗಕ್ಕೆ ಯಾವುದೇ ಯುದ್ಧ ಒಪ್ಪಿಗೆಯಾಗಬೇಕಾದರೆ ಅದು ಕ್ರಾಂತಿಕಾರಕವಿರಬೇಕು. ಅಂದರೆ (ಅ) ಅಧಿಕಾರವೆಲ್ಲ ಕೂಲಿಗಾರರಿಗೂ

---

೧೯೪೦ರಷ್ಟು ಹಿಂದೆಯೇ ಬಿ. ಜಿ. ಅವಧಾನಿಯವರ ನೇತೃತ್ವದಲ್ಲಿ ಧಾರವಾಡದ **ಮಿಂಚಿನ ಬಳ್ಳಿಯ ಚಾವಡಿ** ಪ್ರಕಾಶನ ಸಂಸ್ಥೆಯು ನಾಡಿನ ಸಾಂಸ್ಕೃತಿಕ ಮತ್ತು ಸಾಮಾಜಿಕ ಬೆಳವಣಿಗೆಗಳನ್ನು ಕುರಿತಂತೆ ಹಲವಾರು ಕೃತಿಗಳನ್ನು ಹೊರತರುತ್ತಿತ್ತು ಎಂಬುದು ಅನೇಕರಿಗೆ ತಿಳಿದಿರಲಾರದು. ಅವುಗಳಲ್ಲಿ ರಶಿಯಾದ ಸ್ಟಾಲಿನ್‌ರನ್ನು ಪರಿಚಯಿಸುವ ಎಂ. ಹರಿದಾಸರ **ಉಕ್ಕಿನ ಮನುಷ್ಯ** ಮತ್ತು ಪಿ. ವೆಂಕಟರಮಣಾಚಾರ್ ಅವರ **ರಶಿಯಾದ ರಾಜ್ಯಕ್ರಾಂತಿ**ಯಂತಹ ಪ್ರಕಟಣೆಗಳೂ ಇವೆ. ಅಂದಿನ ದಿನಗಳಲ್ಲಿ ರಶಿಯಾದ ಬೆಳವಣಿಗೆಗಳು ಭಾರತದ ಹಲವಾರು ಕಡೆ ಜನತೆಯಲ್ಲಿ ಹುಟ್ಟಿಹಾಕುತ್ತಿದ್ದ ಕುತೂಹಲಕ್ಕೂ ಈ ಹೊತ್ತಿಗೆಗಳು ಸಾಕ್ಷಿ ಎಂಬಂತಿವೆ. ಇಲ್ಲಿ ರಶಿಯಾದ ರಾಜ್ಯಕ್ರಾಂತಿಯ ಆಯ್ದ ಭಾಗಗಳನ್ನು ನೀಡಲಾಗಿದೆ. ಅದರ ಕರ್ತೃ ಪಿ. ವೆಂಕಟರಮಣಾಚಾರ್ ಅವರೇ ಮುನ್ನುಡಿಯಲ್ಲಿ ಹೇಳಿಕೊಂಡಿರುವಂತೆ, ''ರೋಮಾಂಚಕ ಘಟನೆ, ಉಸಿರು ತರುಬುವ ಸನ್ನಿವೇಶಗಳು ಮತ್ತು ಐತಿಹಾಸಿಕ ವಿಪ್ಲವಗಳಿಂದ ತುಂಬಿರುವ'' ರಶಿಯಾದ ಕ್ರಾಂತಿಯನ್ನು ಸಾಮ್ಯವಾದಿ ದೃಷ್ಟಿಯಿಂದ ನೋಡುವ ಪ್ರಯತ್ನಗಳನ್ನು ೧೯೪೩ ರಲ್ಲಿ ಪ್ರಕಟವಾದ ಈ ಕೃತಿಯಲ್ಲಿ ಕಾಣಬಹುದಾಗಿದೆ.

ಅವರಂತೆ ಬಡವರಾಗಿರುವ ರೈತರಿಗೂ ಸೇರಬೇಕು; (ಆ) ಮಾತಿನಲ್ಲಿಯೂ ಕೃತಿಯಲ್ಲಿಯೂ ರಾಜ್ಯ ವಿಸ್ತರಣೆ ಯನ್ನು ತ್ಯಜಿಸಬೇಕು; (ಇ) ಎಲ್ಲ ಬಂಡವಲವಾದಿ ಹಿತ ಸಂಬಂಧಗಳ ಕೂಡೆ ಸಂಪೂರ್ಣವಾಗಿ ಮತ್ತು ನಿಜವಾಗಿ ಸಂಬಂಧ ಕಡಿದುಕೊಳ್ಳಬೇಕು.

ಕ್ರಾಂತಿಕಾರಿ ಆತ್ಮರಕ್ಷಣೆಯ ಸುಳ್ಳು ವಾದವನ್ನು ಬಂಡವಲಗಾರರಿಂದ ವಂಚಿತವಾದ ಜನಸಾಮಾನ್ಯರು ನಂಬುತ್ತಿರುವುದರಿಂದ ಮತ್ತು ಈ ಯುದ್ಧ ನಿರ್ವಾಹವಿಲ್ಲದ್ದಕ್ಕೆ ಮಾತ್ರ ನಡೆಯುತ್ತಿದೆ, ರಾಜ್ಯವಿಸ್ತರಣೆಗಲ್ಲ ಎಂದು ತಿಳಿದುಕೊಂಡಿರುವುದರಿಂದ, ಅವರ ತಪ್ಪು ತಿಳಿವಳಿಕೆಯನ್ನು ಶಾಂತವಾಗಿ ಅವರಿಗೆ ತಿಳಿಯಹೇಳಿ, ಬಂಡವಲಗಾರಿಕೆಗೂ ಸಾಮ್ರಾಜ್ಯ ವಾದಿ ಯುದ್ಧಕ್ಕೂ ಇರುವ ಅಚ್ಛೇದ್ಯ ಸಂಬಂಧವನ್ನೂ, ಬಂಡವಲಗಾರಿಕೆಯನ್ನೂ ಕಿತ್ತು ಹಾಕದೆ ನಿಜವಾಗಿ ಪ್ರಜಾಹಿತವೆನಿಸುವ, ಸೋತವರನ್ನು ಕಂಗೆಡಿಸದ ಶಾಂತಿಯನ್ನು ಸ್ಥಾಪಿಸುವುದು ಅಸಾಧ್ಯ ಎಂಬುದನ್ನು ವಿವರಿಸಬೇಕು.

ರಣರಂಗದಲ್ಲಿ ಯುದ್ಧನಿರತರಾಗಿರುವ ಸೈನಿಕರಲ್ಲಿ ಇದನ್ನು ಚೆನ್ನಾಗಿ ಪ್ರಚಾರ ಮಾಡಬೇಕು.

**೨. ರಶಿಯಾದಲ್ಲಿ ಸದ್ಯ ಒದಗಿರುವ ಸ್ಥಿತಿಯ ವಿಶೇಷತೆಯಿದು :** ಕೂಲಿಗಾರರ ಸಂಘಟನೆಯಲ್ಲಿ ಸಾಕಷ್ಟು ವರ್ಗಪ್ರಜ್ಞೆಯಿಲ್ಲದ್ದರ ಪರಿಣಾಮವಾಗಿ ಮಧ್ಯಮವರ್ಗಕ್ಕೆ ಅಧಿಕಾರ ಕೊಟ್ಟಿರುವ ಪ್ರಥಮ ಪರ್ಯಾಯದಿಂದ ದ್ವಿತೀಯ ಪರ್ಯಾಯವಾದ ಕೂಲಿಗಾರರ ಮತ್ತು ಬಡರೈತರ ಸರ್ವಾಧಿಕಾರಕ್ಕೆ ಸಾಗುವ ಅಂತರ್ಮಧ್ಯಸ್ಥಿತಿಯಲ್ಲಿ ಕ್ರಾಂತಿ ನಿಂತಿದೆ.

ಈ ಮಧ್ಯಸ್ಥಿತಿಯ ಲಕ್ಷಣಗಳಿವು : ರಶಿಯಾದಲ್ಲಿಂದು ಸ್ವಾತಂತ್ರ್ಯದ ಪರಮಾವಧಿಯಿದೆ; ಜನಸಾಮಾನ್ಯರ ಮೇಲೆ ಹಿಂಸೆಯಿಲ್ಲ; ಮತ್ತು ಕೊನೆಯದಾಗಿ ಶಾಂತಿ ಮತ್ತು ಸಾಮ್ಯವಾದ ಇವೆರಡರ ಪರಮ ವೈರಿಗಳಾದ ಬಂಡವಲಗಾರರ ಮೇಲೆ ಜನತೆಯ ಸರಳ ವಿಶ್ವಾಸವಿದೆ.

ಹೊಸತಾಗಿ ರಾಜಕೀಯ ಜಾಗೃತಿ ಹೊಂದಿರುವ ಅಭೂತಪೂರ್ವ ಪ್ರಮಾಣದ ಕೂಲಿಕಾರ ಜನತೆಯ ಮಧ್ಯದಲ್ಲಿ ನಮ್ಮ ಪಕ್ಷದ ಚಳುವಳಿ ಮಾಡುವ ವಿಶಿಷ್ಟ ಆವಶ್ಯಕತೆಗಳಿಗೆ ತಕ್ಕಂತೆ ನಾವು ಆಚರಿಸಬೇಕಾಗಿದೆ.

೩. ತಾತ್ಪೂರ್ತಿಕ ಸರಕಾರಕ್ಕೆ ಸ್ವಲ್ಪವೂ ಬೆಂಬಲ ಕೊಡಕೂಡದು. ಅದರ ವಾಗ್ದಾನಗಳೆಲ್ಲದರ, ಮುಖ್ಯವಾಗಿ ರಾಜ್ಯವಿಸ್ತರಣವನ್ನು ತ್ಯಾಗಮಾಡುವ ಮಾತುಗಳ ಟೊಳ್ಳುತನವನ್ನು ಅಖಂಡವಾಗಿ ಬಯಲಿಗೆಳೆಯಬೇಕು. ಅದನ್ನು ಬಿಟ್ಟು ಈ ಬಂಡವಲಗಾರರ ಸರಕಾರಕ್ಕೆ ಸಾಮ್ರಾಜ್ಯವಾದವನ್ನು ತ್ಯಜಿಸಬೇಕು ಎಂಬ 'ಬೇಡಿಕೆ'ಗಳನ್ನು ಮುಂದೊಡ್ಡಿದರೆ ಜನರಲ್ಲಿ ಭ್ರಾಂತಿಯಷ್ಟೇ ಹಬ್ಬುವುದು.

೪. ಎಲ್ಲ ಸೋವಿಯೆಟ್‌ಗಳಲ್ಲಿಯೂ ನಮ್ಮ ಪಕ್ಷ ಕೇವಲ ಅಲ್ಪಸಂಖ್ಯಾಕವಾಗಿದೆ; ಧನಿಕ ವರ್ಗದ ಪ್ರಭಾವಕ್ಕೆ ತಾವು ಮಾತ್ರ ಒಳಗಾದದ್ದಲ್ಲದೆ ಕೂಲಿಗಾರರನ್ನೂ ಒಳಗು ಮಾಡುತ್ತಿರುವ, ಸಾಮ್ಯಕ್ರಾಂತಿವಾದಿಗಳಿಂದ ಹಿಡಿದು ಕಾರ್ಯಕಾರಿ ಸಮಿತಿಯವರೆಗಿನ ಎಲ್ಲ ಚಿಲ್ಲರೆ ಮಧ್ಯಮ ವರ್ಗದ ಪಕ್ಷಪಾತಿಗಳು ನಮ್ಮ ವಿರುದ್ಧವಾಗಿವೆಯೆಂಬುದನ್ನು ಸ್ಪಷ್ಟವಾಗಿ ಮನಗಾಣಬೇಕು.

ಕೂಲಿಗಾರರ ಸೋವಿಯೆಟ್ಟು ಮಾತ್ರ ನಿಜವಾದ ಕ್ರಾಂತಿಕಾರಿ ಸರಕಾರವಾಗಬಲ್ಲುದು. ಎಷ್ಟರವರೆಗೆ ಸೋವಿಯೆಟ್ಟು ಧನಿಕರ ಪ್ರಭಾವಕ್ಕೊಳಗಾಗಿರುವುದೋ ಆವರೆಗೆ ಸಹನೆಯಿಂದ, ಕ್ರಮವಾಗಿ, ಹಠಹಿಡಿದು ಅದರ ತಪ್ಪು ತಿಳಿವಳಿಕೆಯನ್ನು ತಿಳಿಹೇಳುವುದು ನಮ್ಮ ಮೊದಲ ಕರ್ತವ್ಯವೆಂದು ಜನತೆಗೆ ಒತ್ತಿಹೇಳಬೇಕು.

ತಪ್ಪುಗಳನ್ನು ವಿಮರ್ಶಿಸುತ್ತ, ಬಯಲಿಗೆಳೆಯುತ್ತ ಇರುವಾಗಲೇ, ನಾವು ಸೋವಿಯೆಟ್ಟಿನಲ್ಲಿ ಅಲ್ಪಸಂಖ್ಯಾಕರಿದ್ದರೂ ಎಲ್ಲ ಅಧಿಕಾರ ಸೋವಿಯೆಟ್ಟಿಗೆ ಸೇರಬೇಕೆಂದು ಪ್ರಚಾರ ಮಾಡಬೇಕು. ಇದರಿಂದ ಜನತೆಗೆ ಅನುಭವ ಬಂದು ತಪ್ಪುಗಳನ್ನು ತಿದ್ದಿಕೊಳ್ಳಲಾಗುವುದು.

೫. ಪಾರ್ಲಿಮೆಂಟ್ ಪದ್ಧತಿಯ ಪ್ರಜಾಸ್ವಾಮ್ಯ ಬೇಡ – ಸೋವಿಯೆಟ್ಟಿನಿಂದ ಅದಕ್ಕಿಳಿಯುವುದೆಂದರೆ ಹಿನ್ನಡೆಯಾಗುವುದು ಹೊರತು ಮುನ್ನಡೆಯಲ್ಲ – ಬುಡದಿಂದ ತುದಿಯವರೆಗೆ ಕೂಲಿಗಾರರ, ಕೃಷಿ ಕೂಲಿಗಾರರ ಮತ್ತು ಒಕ್ಕಲಿಗರ ಪ್ರತಿನಿಧಿಗಳಿಂದೊಡಗೂಡಿದ ಸೋವಿಯೆಟ್ಟುಗಳ ಪ್ರಜಾಸ್ವಾಮ್ಯ ನಮಗೆ ಬೇಕು.

ಪೊಲೀಸ್, ಸೈನ್ಯ ಮತ್ತು ಅಧಿಕಾರಿ ವರ್ಗವನ್ನು ಕಿತ್ತುಹಾಕಬೇಕು. (ಶಾಶ್ವತ ಸೈನ್ಯದ ಬದಲು ಸಾರ್ವತ್ರಿಕ ಶಸ್ತ್ರಧಾರಿಗಳಾದ ಪ್ರಜೆಗಳೇ ಇರುವರು.)

ಎಲ್ಲ ಅಧಿಕಾರಿಗಳೂ ಆರಿಸಿ ಬಂದವರಾಗಿರಬೇಕಲ್ಲದೆ ಅವರ ಸಂಬಳ ಸಾಮಾನ್ಯ ಕುಶಲ ಕೆಲಸಗಾರನದಕ್ಕೆ ಮಿಕ್ಕಿರಬಾರದು.

೬. ಗ್ರಾಮ ಕಾರ್ಯಕ್ರಮವನ್ನು ಕೃಷಿಕೂಲಿಗಾರರ ಸೋವಿಯೆಟ್ಟಿಗೆ ಒಪ್ಪಿಸಬೇಕು.

ಎಲ್ಲ ಭೂಮಿ ಆಸ್ತಿಗಳನ್ನು ಮುಟ್ಟುಗೋಲು ಹಾಕಬೇಕು.

ದೇಶದ ಎಲ್ಲ ಭೂಮಿ ರಾಷ್ಟ್ರದ ಸೊತ್ತಾಗಬೇಕು. ಗ್ರಾಮ ಸೋವಿಯೆಟ್ಟುಗಳ ಅಭಿಪ್ರಾಯದಂತೆ ಅದನ್ನು ಹಂಚಬೇಕು. ಬಡರೈತರ ಬೇರೆಯೇ ಸೋವಿಯೆಟ್ ಹುಟ್ಟಬೇಕು.

೭. ದೇಶದ ಎಲ್ಲ ಬ್ಯಾಂಕುಗಳನ್ನು ಏಕೀಕರಿಸಿ ಒಂದೇ ರಾಷ್ಟ್ರೀಯ ಬ್ಯಾಂಕಾಗಿ ಮಾರ್ಪಡಿಸಬೇಕು. ಅದು ಕೂಲಿಕಾರ ಸೋವಿಯೆಟ್ಟುಗಳ ಅಂಕೆಯಲ್ಲಿರಬೇಕು.

೮. ನಮ್ಮ ಅವಸರದ ಕರ್ತವ್ಯ 'ಸಾಮ್ಯವಾದವನ್ನು ಕಾರ್ಯಕ್ಕೆ ತರುವುದು' ಅಲ್ಲ. ಎಲ್ಲ ಉತ್ಪಾದನೆ ವಿತರಣೆಗಳನ್ನು ಸೋವಿಯೆಟ್ಟಿನ ಅಂಕೆಯೊಳಗೆ ತರುವುದು.

೯. ಪಕ್ಷದ ಕರ್ತವ್ಯಗಳು :

(ಅ) ಕೂಡಲೆ ಪಕ್ಷಸಮ್ಮೇಲನ ಕರೆಯುವುದು.

(ಆ) ಪಕ್ಷ ಕಾರ್ಯಕ್ರಮವನ್ನು, ಮುಖ್ಯವಾಗಿ ಕೆಳಗೆ ಕಾಣಿಸಿದ ವಿಷಯಗಳನ್ನು ಕುರಿತು, ಬದಲಿಸುವುದು.

೧. ಸಾಮ್ರಾಜ್ಯವಾದ ಮತ್ತು ಸಾಮ್ರಾಜ್ಯವಾದಿ ಯುದ್ಧ

೨. ಸರಕಾರ ಮತ್ತು ಕಮ್ಯೂನ್-ಸರಕಾರದ ವಿಷಯ ನಮ್ಮ ಅಭಿಮತ.

೩. ಪುರಾತನವಾಗಿರುವ ನಮ್ಮ ಕನಿಷ್ಠ ಕಾರ್ಯಕ್ರಮವನ್ನು ತಿದ್ದುವುದು.

(ಇ) ಪಕ್ಷಕ್ಕೆ ಹೊಸ ಹೆಸರು ಕೊಡುವುದು. (ದ್ವಿತೀಯ ಅಂತರರಾಷ್ಟ್ರೀಯದ ಸದಸ್ಯರಾದ ಎಲ್ಲ ದೇಶದ ಸಾಮ್ಯ-ಪ್ರಜಾತಂತ್ರ ಪಕ್ಷಗಳು ದ್ರೋಹ ಮಾಡಿರುವುದರಿಂದ ನಮ್ಮ ಪಕ್ಷವನ್ನು 'ಕಮ್ಯುನಿಸ್ಟ್' (ಸಂಘಸ್ವಾಮ್ಯ) ಪಕ್ಷವೆಂದು ಕರೆಯಬೇಕು.)

೧೦. ಒಂದು ಹೊಸ ಅಂತರರಾಷ್ಟ್ರೀಯ ಸಂಸ್ಥೆ.

ದ್ವಿತೀಯ ಅಂತರರಾಷ್ಟ್ರೀಯದ ಅನುಕೂಲವಾದಿಗಳ ವಿರುದ್ಧ ಬೇರೊಂದು ನಿಜವಾದ ಕ್ರಾಂತಿಕಾರಿ ಅಂತರರಾಷ್ಟ್ರೀಯವನ್ನು ಸ್ಥಾಪಿಸಬೇಕು.

**ಪಿ. ವೆಂಕಟರಮಣಾಚಾರ್**
(ಪಾ. ವೆಂ. ಆಚಾರ್ಯ)

---

*೫೨ನೇ ಪುಟದಿಂದ ವಿಶ್ವವೀಕ್ಷಣೆ...*

ಲ್ಯಾಟಿನ್ ಅಮೆರಿಕಾದ ದೇಶಗಳಲ್ಲಿನ ಆರ್ಥಿಕ ಕ್ಷೇತ್ರದಲ್ಲಿ ಬಹುರಾಷ್ಟ್ರೀಯ ಕಾರ್ಪೊರೇಷನ್ನುಗಳು ಬಲವಾಗಿ ಬೇರೂರಿವೆ. ಪ್ರಮುಖ ಆರ್ಥಿಕ ವಲಯಗಳೆಲ್ಲ ಅವುಗಳ ಹಿಡಿತದಲ್ಲಿವೆ. ಮತ್ತೆ ಸೇನಾಧಿಕಾರಿಗಳು ಮತ್ತು ಸೇನೆಯ ತರಬೇತಿಯೆಲ್ಲ ಬಹುಪಾಲು ಅಮೆರಿಕಾದಲ್ಲೇ ನಡೆದಿದೆ. ಹಾಗಾಗಿ, ಹೊಸದಾಗಿ ಚುನಾಯಿತಗೊಂಡಿರುವ ಅಧ್ಯಕ್ಷರುಗಳು ಮೊದಲು ಸೇನೆಯ ಕಡೆಗೆ ಗಮನ ಕೊಡಬೇಕಾಗಿದೆ. ಅದು ಕೈಮೀರಿ ಹೋಗದಂತೆ ನೋಡಿಕೊಳ್ಳಬೇಕಾಗಿದೆ. ಜನತೆಯ ಪೂರ್ಣ ಬೆಂಬಲದಿಂದ ಆರ್ಥಿಕ ಕ್ಷೇತ್ರವನ್ನು ಸ್ವಾಧೀನಪಡಿಸಿಕೊಳ್ಳುವುದು ಅಗತ್ಯ. ಶತಮಾನಗಳ ಕಾಲದಿಂದ ಅಮೆರಿಕಾದ ಮೇಲೆ ಅವಲಂಬಿತವಾಗಿರುವ ಈ ದೇಶಗಳು ಅದರಿಂದ ಹೊರಬರುವುದು ಸುಲಭವೇನಲ್ಲ. ಅಮೆರಿಕಾ ಈ ದೇಶಗಳಿಗಾಗಿ ಮುಕ್ತ ಮಾರುಕಟ್ಟೆ ಜಾಲದ ಯೋಜನೆಯೊಂದನ್ನು ರೂಪಿಸಿದೆ. ಅದನ್ನು ವೆನೆಜುವೇಲ, ಬೊಲಿವಿಯ ಅಧ್ಯಕ್ಷರುಗಳು ತೀವ್ರವಾಗಿ ವಿರೋಧಿಸಿದ್ದಾರೆ. ಅದಕ್ಕೆ ಪರ್ಯಾಯವನ್ನು ರೂಪಿಸಲು ಪ್ರಯತ್ನ ನಡೆಸಿದ್ದಾರೆ. ಅದು ಯಶಸ್ವಿಯಾಗಬೇಕಾದರೆ ಪರಸ್ಪರ ಸಹಕಾರ, ಸಹಮತ ಮುಖ್ಯವಾಗುತ್ತದೆ. ಅವರ ಈ ಪ್ರಯತ್ನ ಯಶಸ್ವಿಯಾಗಲಿ ಎಂದು ಹಾರೈಸೋಣ.

ಪ್ರಪಂಚದ ಎಲ್ಲ ಪುರೋಗಾಮಿಗಳು ದಕ್ಷಿಣ ಅಮೆರಿಕಾದ ದೇಶಗಳಲ್ಲಿನ ಬೆಳವಣಿಗೆಗಳನ್ನು ಕುತೂಹಲ, ನಿರೀಕ್ಷೆಗಳಿಂದ ಗಮನಿಸುತ್ತಿದ್ದಾರೆ. ಈಗ ಕಾಣಬರುತ್ತಿರುವ ಹೊಸತಿರುವು ಯಶಸ್ವಿಯಾಗಲಿ ಎಂದು ಹಾರೈಸುತ್ತಾರೆ. ಅವರ ಯಶಸ್ಸು ಅನ್ಯ ದೇಶಗಳಿಗೂ ಮಾದರಿಯಾಗುವುದೆಂಬುದು ಖಚಿತ. ಸೋವಿಯೆತ್ ಒಕ್ಕೂಟದ ವಿಭಜನೆಯ ನಂತರ ಸಮಾಜವಾದದ ಸೊಲ್ಲು ಅಡಗಿತು ಎಂದು ಬೀಗಿದವರು ಬಹುಮಂದಿ. ಸಮಾಜವಾದಿ ವಿಚಾರಧಾರೆ ಎಂದಿಗೂ ಅಳಿಯದು. ಅದು ಜೀವಂತ ಮನುಷ್ಯನ ಸ್ವಾತಂತ್ರ್ಯಾಪೇಕ್ಷೆಯಂತೆ, ಸಮಾನತೆ, ಸಮಾನ ಅವಕಾಶ, ಶೋಷಣೆ ಮುಕ್ತ ಸಮಾಜ ಸ್ಥಾಪನೆಯ ಅಪೇಕ್ಷೆಯೂ ಶಾಶ್ವತ. ಲ್ಯಾಟಿನ್ ಅಮೆರಿಕಾದ ದೇಶಗಳಲ್ಲಿನ ಬೆಳವಣಿಗೆಗಳು ಅದಕ್ಕೆ ದ್ಯೋತಕ.

**ಸೀಯಾರ್ಕೆ**
'ಚೌಬೀನ', ೮೪೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ
ಬೆಂಗಳೂರು - ೫೬೦ ೦೮೫



# ಎಲ್ಲರಿಗೂ ಆಪ್ತವಾದ  ದಲ್ಲೇನಿದೆ ?



'ಆಪ್ತಮಿತ್ರ' ಕನ್ನಡದ ಒಂದು ಜನಪ್ರಿಯ ಚಲನಚಿತ್ರ. ಇದರ ಕಥೆ ಮಾನಸಿಕ ರೋಗಕ್ಕೆ ಸಂಬಂಧಿಸಿದ್ದು. ಈ ಚಿತ್ರದ ಕಥಾವಸ್ತುವನ್ನು ಮಾನಸಿಕ ವಿಜ್ಞಾನದ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ಸಮಂಜಸವೇ. ಇದರಲ್ಲಿ ಮಾನಸಿಕ ರೋಗವೆನಿಸಿರುವ ''ದೆವ್ವ ಮೈಮೇಲೆ ಬರುವುದು'' ಎಂಬುದರ ಚಿತ್ರಣವಿದೆ. ಈ ಸಮಸ್ಯೆ ಒಂದು ತೀರ ಸಾಮಾನ್ಯವಿರುವ ಮಾನಸಿಕ ಸಮಸ್ಯೆ. ಇದರ ಬಗ್ಗೆ ಇರುವ ತಪ್ಪು ನಂಬಿಕೆಗಳಿಗೆ ಲೆಕ್ಕವಿಲ್ಲ.

**ಮೈಮೇಲೆ ಬರುವುದು**

ಒಬ್ಬ ವ್ಯಕ್ತಿಯ ಮೇಲೆ ಆತ್ಮ (ಅದು ಇದೆಯೇ ?) ದೆವ್ವ, ಪ್ರೇತ, ಪಿಶಾಚಿ, ದೇವರು ಮತ್ತು ಪ್ರಾಣಿಗಳ ರೂಪತಳೆದು ಮೈಮೇಲೆ ಬರುತ್ತದೆಂಬ ನಂಬಿಕೆ ವ್ಯಾಪಕವಾಗಿದೆ. ಈ ಸಮಸ್ಯೆಯಿಂದ ಹಲವಾರು ವ್ಯಕ್ತಿಗಳು ಬಳಲುತ್ತಾರೆ; ಸಾಂಪ್ರದಾಯಿಕ ಚಿಕಿತ್ಸೆ ಪಡೆಯಲು ಮುಂದಾಗುತ್ತಾರೆ. ಸತ್ತವರ ಅತೃಪ್ತ ಆತ್ಮವು ಪ್ರೇತವಾಗಿ ಸ್ಮಶಾನಗಳಲ್ಲಿ, ನಿರ್ಜನ ಪ್ರದೇಶದಲ್ಲಿ, ಹಾಳುಬಿದ್ದ ಮನೆಗಳಲ್ಲಿ, ಹುಣಸೇಮರಗಳಲ್ಲಿ ಮತ್ತು ಅಮಾವಾಸ್ಯೆಯ ಕತ್ತಲಲ್ಲಿ ಇರುತ್ತದೆಂಬ ನಂಬಿಕೆ ಅದಕ್ಕೆ ಪುಷ್ಟಿ ನೀಡುತ್ತದೆ. ಈ ಸಮಸ್ಯೆ ವ್ಯಕ್ತಿಯ ಮೇಲೆ ಹಠಾತ್ತಾಗಿ ಬಂದು ಸ್ವಲ್ಪ ಸಮಯವಿದ್ದು ಆ ನಂತರ ಕ್ರಮೇಣ ಕಡಿಮೆಯಾಗುತ್ತದೆ. ಹೀಗೆ ಆಗಾಗ ಸಂಭವಿಸುತ್ತಿರುತ್ತದೆ. ಈ ಸಂದರ್ಭದಲ್ಲಿ ಮೈಮೇಲೆ ಬಂದ ವ್ಯಕ್ತಿಯ ವಿಚಿತ್ರ ನಡವಳಿಕೆ ಎಲ್ಲರ ಗಮನ ಸೆಳೆಯುತ್ತದೆ. ಆತ/ಆಕೆ ಕಾರಣವಿಲ್ಲದೆಯೇ ನಗುವುದು, ತಾನು ಬೇರೆ ಯಾವುದೋ ವ್ಯಕ್ತಿ, ದೇವರು, ದೆವ್ವ ಎಂದು ಹೇಳುವುದು ಸರ್ವೇಸಾಮಾನ್ಯ. ವ್ಯಕ್ತಿ ವಿಪರೀತ ಭಾರ ಎತ್ತುವುದು, ಅತಿಯಾಗಿ ತಿನ್ನುವುದು, ಅಪಾರ ಶಕ್ತಿ ಪ್ರದರ್ಶನ ಮಾಡುವುದು ಮುಂತಾದ ನಡವಳಿಕೆಗಳಿಂದ ಆ ವ್ಯಕ್ತಿಗೆ, ಅತಿಮಾನವ ಶಕ್ತಿ ಬಂದಿದೆಯೆಂಬ ಭ್ರಮೆ ಯುಂಟಾಗಲು ಸಾಧ್ಯ. ಇಂತಹ ಸಂದರ್ಭಗಳಲ್ಲಿ ವ್ಯಕ್ತಿ ತನಗೆ ಪೂಜೆಮಾಡಿ, ಆಹಾರ ಪದಾರ್ಥಗಳಾದ ಚಿಕನ್, ಸೇಬು ಕೊಡಿ ಎಂದು ಕೇಳುವುದೂ ಸಾಮಾನ್ಯವೇ. ಇಂತಹ ಸಮಸ್ಯೆಯಿರುವ ವ್ಯಕ್ತಿಗೆ ದೆವ್ವ ಹಿಡಿದಿದೆ, ದೇವರು ಬಂದಿದೆ ಎಂದು ಜನರು ವಿಧವಿಧವಾಗಿ ಅರ್ಥೈಸಿ ''ಆ ವ್ಯಕ್ತಿಯ ಅಗತ್ಯತೆಯನ್ನು ಪೂರೈಸಿದರೆ, ದೇವರು, ದೆವ್ವ ಈ ಯಾವ ಅಪಾಯವನ್ನೂ ಮಾಡದೆ ಬಿಟ್ಟುಹೋಗುವುದೆಂದು'' ನಂಬುತ್ತಾರೆ ಹಾಗೂ ಆ ವ್ಯಕ್ತಿಗಳ ಅಗತ್ಯತೆಗಳನ್ನು ಪೂರೈಸಲು ಯತ್ನಿಸುತ್ತಾರೆ. ಇನ್ನು ಕೆಲವರು ಮಂತ್ರವಾದಿಗಳ ಹತ್ತಿರ ಮಂತ್ರ ಹಾಕಿಸಲು ಕರೆದೊಯ್ಯುತ್ತಾರೆ. ಮಂತ್ರವಾದಿ ಅನೇಕ ಬಾರಿ ಈ ವ್ಯಕ್ತಿಗೆ ಹಿಂಸೆಕೊಟ್ಟು, ಒಳಗೆ ಹೊಕ್ಕಿರುವ ದೆವ್ವವನ್ನು ಹೊರಹಾಕಲು ಪ್ರಯತ್ನಮಾಡುತ್ತಾನೆ. ಮನೆಯವರೆಲ್ಲರೂ ಇದನ್ನು ಸಹಿಸಿಕೊಂಡು ಗುಣಹೊಂದುತ್ತಾನೆಂದು ಕಾದು ನೋಡುತ್ತಾರೆ. ಈ ಸಮಸ್ಯೆಗೆ ಇನ್ನು ಕೆಲವರು ದೇವಸ್ಥಾನಗಳಿಗೆ ಹೋಗಿ, ಕಾಣಿಕೆಕೊಟ್ಟು ಸರಿಪಡಿಸಿಕೊಳ್ಳುತ್ತಾರೆ. ನಮ್ಮಲ್ಲಿ ಅನೇಕ ದೇವಾಲಯಗಳು ಇಂತಹ ಸಮಸ್ಯೆಗಳ ಪರಿಹಾರಕ್ಕೇ ಮೀಸಲಾಗಿವೆ. ಇಂತಹವರು ವೈದ್ಯರನ್ನು ಸಂಪರ್ಕಿಸುವುದು ತೀರ ಕಡಿಮೆ. ಈ ಸಮಸ್ಯೆಯನ್ನು ಮನೋವೈದ್ಯಕೀಯ ಶಾಸ್ತ್ರದಲ್ಲಿ possession states ಎಂದು ಕರೆಯುವರು. ಇದೊಂದು ಮನೋರೋಗವಷ್ಟೆ. ಈ ಸಮಸ್ಯೆಗೆ ಕಾರಣ ಕುಟುಂಬದ ಒತ್ತಡ, ಪರಿಸರದಲ್ಲಿ ಹೊಂದಾಣಿಕೆ ಇಲ್ಲದಿರುವುದು, ಮಾನಸಿಕ ಆಘಾತ ಇತ್ಯಾದಿ. ಸಮಸ್ಯೆಯನ್ನು ಎದುರಿಸಲಾಗದೇ ವ್ಯಕ್ತಿ ಈ ತರಹದ ನಡವಳಿಕೆಯನ್ನು ತೋರಿಸುತ್ತಾನೆ. ತನ್ನ ನಡವಳಿಕೆಯ ಬಗ್ಗೆ ರೋಗಿಗೇ ಏನೂ ತಿಳಿದಿರುವುದಿಲ್ಲ. ಸುಪ್ತ ಮನಸ್ಸಿಗೆ ಉಂಟಾದ ಆಘಾತ ಈ ಸಮಸ್ಯೆಗೆ ಕಾರಣವಾಗಿರುವುದರಿಂದ ಜಾಗೃತ ಮನಸ್ಸಿಗೆ ಈ ವಿಷಯ ತಿಳಿದಿರಲು ಸಾಧ್ಯವಿಲ್ಲ. ಕೆಲವರು ತಮ್ಮ ನಡವಳಿಕೆಯಿಂದ ಪ್ರಯೋಜನ ಪಡೆದು ಹಾಗೆಯೇ ಮುಂದುವರಿಸಿಕೊಂಡು ಹೋಗುವುದುಂಟು. ಈ ಸಮಸ್ಯೆ ಗ್ರಾಮೀಣ ಪ್ರದೇಶಗಳಲ್ಲಿನ ಬಡಕುಟುಂಬದ ಅನಕ್ಷರಸ್ಥ ಜನರಲ್ಲಿ ಕಂಡುಬರುತ್ತದೆ. ಅಭಿವೃದ್ಧಿಹೊಂದದ ದೇಶಗಳಲ್ಲೇ (ಭಾರತವೂ ಸೇರಿ) ಈ ಪ್ರಕರಣಗಳು ಹೆಚ್ಚು. ಸಾಂಪ್ರದಾಯಿಕ ಚಿಕಿತ್ಸೆ ಜನರಿಗೆ ಹತ್ತಿರವಾಗಿರುವುದರಿಂದ ಮತ್ತು ಅವುಗಳಲ್ಲಿ ನಂಬಿಕೆ ಇರುವುದರಿಂದ, ಆ ಚಿಕಿತ್ಸೆಗಳಿಂದ ರೋಗಿ ಗುಣ ಹೊಂದಲು ಸಾಧ್ಯ. ಆದರೆ ಈ ಚಿಕಿತ್ಸೆ ಪಡೆದರೂ ಸಮಸ್ಯೆ ಮರುಕಳಿಸಬಹುದಾಗಿದೆ. ಇಂದು ಮನೋವೈದ್ಯಕೀಯ ಚಿಕಿತ್ಸೆಯಿಂದ ಈ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ಸರಿಪಡಿಸಬಹುದಾಗಿದೆ.

**ಮನೋವೈದ್ಯಕೀಯ ಚಿಕಿತ್ಸೆಯ ವಿಧಾನಗಳು**

ಮಾನಸಿಕ ತಜ್ಞ ಮೊದಲಿಗೆ ಆ ರೋಗಿಯ ಸಮಸ್ಯೆಯ

**ಡಾ|| ಪ್ರಕಾಶ್ ಸಿ. ರಾವ್**

ಸಿನಿಮಾದ ಉದ್ದೇಶ ಮನೋರಂಜನೆ ನೀಡುವುದೆಂದಾದರೆ 'ಆಪ್ತಮಿತ್ರ' ಯಶಸ್ವಿಯಾಗಿದೆ ಎಂದು ಹೇಳಬಹುದು. ಆದರೆ ಅದರ ಕಥಾವಸ್ತುವಿಗೆ ಸಂಪೂರ್ಣ ವೈಜ್ಞಾನಿಕ ಆಧಾರವಿದೆ ಎಂಬುದು ಕೇವಲ ಭ್ರಮೆ. ಈಗಿರುವ ಯಾವುದೇ ಚಿತ್ರಗಳು, ಧಾರಾವಾಹಿಗಳನ್ನು (ಮಾಯಿ -ಮಿತ್ರ) ದೆವ್ವ, ದೇವರು ಆಧಾರದ ಮೇಲೆ ತಯಾರಿಸುತ್ತಿರುವುದು ಸಮಾಜದ ದೃಷ್ಟಿಯಲ್ಲಿ ಅಪಾಯಕಾರಿಯೆನಿಸಿವೆ.

ವಿವರಗಳನ್ನು ಸಂಗ್ರಹಿಸುತ್ತಾನೆ. ಅವನ ಬಾಲ್ಯ, ಪ್ರೌಢಾವಸ್ಥೆ, ವಿದ್ಯಾಭ್ಯಾಸ, ಇತರರೊಂದಿಗಿನ ಅವನ ವರ್ತನೆ, ಸ್ವಭಾವ, ದೈಹಿಕ-ಮಾನಸಿಕ-ಸಾಮಾಜಿಕ-ಲೈಂಗಿಕ ಸಮಸ್ಯೆಗಳು, ಅನುಭವಿಸಿದ ಕಾಯಿಲೆಗಳು ಮುಂತಾದ ವಿವರಗಳನ್ನು ಅವನಿಂದ ಹಾಗೂ ಅವರ ಹತ್ತಿರದ ಸಂಬಂಧಿಕರಿಂದ ಪಡೆಯುತ್ತಾನೆ. ಅನೇಕ ಬಾರಿ ಈ ಎಲ್ಲ ವಿವರಗಳನ್ನು ಪಡೆದರೂ ಆ ಸಮಸ್ಯೆಗೆ ಕಾರಣ ಕಂಡುಹಿಡಿಯಲು ಆಗದೇ ಇರಬಹುದು. ಆ ಸನ್ನಿವೇಶದಲ್ಲಿ ಸುಪ್ತ ಮನಸ್ಸಿನಲ್ಲಿ ಹುದುಗಿದ್ದ ವ್ಯಥೆಯನ್ನು ತಿಳಿಯಲು ಸಂಮೋಹನ ಕ್ರಿಯೆಗೆ ಗುರಿಪಡಿಸಲಾಗುತ್ತದೆ. ಸಮಸ್ಯೆ ತಿಳಿದ ಕೂಡಲೇ ಅದನ್ನು ಪರಿಹರಿಸಲು ಸಲಹೆ ನೀಡಲಾಗುತ್ತದೆ. ನಂತರ ಆ ರೋಗಿಗೆ ಕ್ರಿಯಾತ್ಮಕ ಜೀವನಶೈಲಿ ರೂಪಿಸಿಕೊಂಡು ಇಂತಹ ಸಮಸ್ಯೆಗಳನ್ನು ಎದುರಿಸಲು, ಮನೋಧೈರ್ಯವನ್ನು ಉತ್ತಮಪಡಿಸಿಕೊಳ್ಳಲು ತರಬೇತಿ ನೀಡಲಾಗುವುದು. ಆತನಿಗಿರುವ ನಕಾರಾತ್ಮಕ ನಂಬಿಕೆ ಹಾಗೂ ವರ್ತನೆಗಳನ್ನು ಗುರುತಿಸಿ ಸಕಾರಾತ್ಮಕ ಜೀವನಶೈಲಿಯನ್ನು ಅನುಸರಿಸಲು ಸಲಹೆ ನೀಡಲಾಗುವುದು. ಅನೇಕ ಬಾರಿ ಮನೋಚಿಕಿತ್ಸೆಯೊಂದಿಗೆ ಔಷಧಿಗಳನ್ನೂ ಕೊಡಲಾಗುತ್ತದೆ.

'ಮೈಮೇಲೆ' ಬರುವ ರೋಗಕ್ಕೆ ತಲೆಗೆ ಪೆಟ್ಟು, ಮೆದುಳಿನ ರೋಗಗಳು ಹಾಗೂ ಮತ್ತುಬರಿಸುವ ಔಷಧಿ ಚಟವೂ ಕಾರಣವಾಗಬಹುದು. ಸುಪ್ತಮನಸ್ಸಿನಲ್ಲಿದ್ದ ತೊಂದರೆಯಿಂದ ಬಂದ ಮೈಮೇಲೆ ಬರುವ ರೋಗಕ್ಕೆ ಚಿಕಿತ್ಸೆಯಾಗದಿದ್ದರೆ, ಆ ವ್ಯಕ್ತಿಗೆ ಜೀವನದ ಸಮಸ್ಯೆಗಳನ್ನು ಎದುರಿಸಲು ಕಷ್ಟವಾಗಬಹುದು. ಇಂತಹ ವ್ಯಕ್ತಿಗಳಲ್ಲಿ ಆತ್ಮಹತ್ಯೆ, ಲೈಂಗಿಕ ಸಮಸ್ಯೆ, ಕುಡಿತ, ಖಿನ್ನತೆ, ನಿದ್ರಾಹೀನತೆ, ಆತಂಕ ಹಾಗೂ ತಲೆನೋವು ಇತ್ಯಾದಿ ಸಮಸ್ಯೆ ಉಂಟಾಗಬಹುದು.

**'ಆಪ್ತಮಿತ್ರ' ಚಿತ್ರದಲ್ಲೇನಿದೆ ?**

ಗಂಗಾ ಇಂಜಿನಿಯರ್ ರಮೇಶನ ಹೆಂಡತಿ. ರಮೇಶ್ ಕೆಲಸದ ಮೇಲೆ ಹಳ್ಳಿಯಲ್ಲಿದ್ದ ಮಾವನ ಮನೆಗೆ ಬರುತ್ತಾನೆ, ತಾನು ಆ ಹಳ್ಳಿಯಲ್ಲಿ ಸ್ವಲ್ಪ ದಿನಗಳ ಮಟ್ಟಿಗೆ ಉಳಿದುಕೊಳ್ಳಬೇಕಾಗಿರುವುದರಿಂದ ಅಲ್ಲೇ ಒಂದು ಪುರಾತನ ಬಂಗಲೆಯನ್ನು ಕೊಂಡುಕೊಳ್ಳಲು ತೀರ್ಮಾನಿಸಿರುವುದನ್ನು ಮಾವನಿಗೆ ತಿಳಿಸುತ್ತಾನೆ. ಆ ಬಂಗಲೆ ಒಂದು ದೆವ್ವದ ಮನೆಯೆಂದೂ, ಅದನ್ನು ಕೊಂಡುಕೊಳ್ಳಬಾರದೆಂದೂ ಕೇಳಿಕೊಳ್ಳುತ್ತಾನೆ. ಆದರೆ ಮಗಳು ಅಳಿಯ ಇಬ್ಬರೂ ಮಾವನ ಮಾತನ್ನು ತಿರಸ್ಕರಿಸಿ ಬಂಗಲೆಯನ್ನು ಕೊಂಡು ಅದರಲ್ಲಿ ಎಲ್ಲರೂ ವಾಸಿಸಲು ತೀರ್ಮಾನಿಸುತ್ತಾರೆ. ೧೫೦ ವರ್ಷಗಳ ಹಿಂದೆ ಆ ಬಂಗಲೆಯಲ್ಲಿದ್ದ ಅರಸನು ನಾಗವಲ್ಲಿಯೆಂಬ ತೆಲುಗು ನರ್ತಕಿಯನ್ನು ತಂದು ತನ್ನ ಆಸ್ಥಾನದ ನರ್ತಕಿಯನ್ನಾಗಿ ಇಟ್ಟುಕೊಳ್ಳುತ್ತಾನೆ. ಆ ನಂತರ ಅವಳನ್ನು ಮದುವೆಯಾಗುತ್ತಾನೆ. ಆ ನರ್ತಕಿಗೆ ಸಂಗೀತಗಾರನಾದ ಒಬ್ಬ ಪ್ರಿಯತಮನಿದ್ದು ಅವನೂ ಅವಳ ಜೊತೆಗೆ ಬಂದು ಬಂಗಲೆಯ ಹತ್ತಿರದಲ್ಲೇ ವಾಸವಾಗಿರುವುದು, ಅವರಿಬ್ಬರು ಪರಸ್ಪರ ಸೇರುತ್ತಿರುವುದೂ ಅರಸನಿಗೆ ಗೊತ್ತಾಗುತ್ತದೆ. ಆ ವಿಷಯ ತಿಳಿದ ಅರಸ ಅವರಿಬ್ಬರಿದ್ದ ಆ ಮನೆಗೆ ಬೆಂಕಿಹಚ್ಚಿಸಿ ಇಬ್ಬರನ್ನೂ ಕೊಲ್ಲಿಸುತ್ತಾನೆ. ನಾಗವಲ್ಲಿಯ ಆತ್ಮ ಅರಸನ ಮೇಲೆ ಕೋಪಗೊಂಡು ಸೇಡು ತೀರಿಸಿಕೊಳ್ಳಲು ಸುತ್ತಾಡುತ್ತಿರುವುದು ಅರಸನಿಗೆ ತಿಳಿದಾಗ ಅವನು ನಾಗವಲ್ಲಿಯ ಆತ್ಮವನ್ನು ಅವಳ ಕೋಣೆಯೊಳಗೆ ದಿಗ್ಬಂಧನದಲ್ಲಿರಿಸುತ್ತಾನೆ. ಅಂದಿನಿಂದ ಆ ಕೋಣೆಯೊಳಗೆ ಯಾರೂ ಹೋಗುವುದಿಲ್ಲ.

ರಮೇಶ ಹಾಗೂ ಗಂಗಾ ಆ ಬಂಗಲೆಯನ್ನು ಕೊಂಡು ಅಲ್ಲಿ ವಾಸವಾಗಿದ್ದಾಗಿನಿಂದ ಸಂಭವಿಸಿದ ಕೆಲವು ಆತಂಕಕಾರಿ ಘಟನೆಗಳಿಗೆ ನಾಗವಲ್ಲಿಯ ಪ್ರೇತಾತ್ಮವೇ ಕಾರಣವೆಂದು ಎಲ್ಲರೂ ತೀರ್ಮಾನಿಸುತ್ತಾರೆ. ನಾಗವಲ್ಲಿಯ ಪ್ರೇತವನ್ನು ಉಚ್ಚಾಟನೆ ಮಾಡಿಸಲು ರಮೇಶನ ಮಾವ ಮಂತ್ರವಾದಿಗಳನ್ನು ಕರೆಸಿ ಪ್ರಯತ್ನಿಸುತ್ತಾನೆ. ಅದರಿಂದೇನೂ ಪ್ರಯೋಜನವಾಗುವುದಿಲ್ಲ. ಗಂಗಾ ಪ್ರೇತದ ಕೋಣೆಗೆ ಹೋಗಿ ಬಂದಾಗಿನಿಂದ ನಾಗವಲ್ಲಿ ಅವಳನ್ನು ಆವರಿಸುತ್ತಾಳೆ. ಆದರೆ ಗಂಗಾಳಿಗೆ ಅದು ಗೊತ್ತಾಗುವುದೇ ಇಲ್ಲ. ಪ್ರೇತ ಗಂಗಾಳನ್ನು ಆವರಿಸಲು ಬಾಲ್ಯಾವಸ್ಥೆಯಲ್ಲಿ ಅವಳು ಅನುಭವಿಸಿದ್ದ ಮನೋದೌರ್ಬಲ್ಯವೇ ಕಾರಣ. ನಾಗವಲ್ಲಿ ಶಾಶ್ವತವಾಗಿ ಗಂಗಾಳ ದೇಹದಲ್ಲಿ ನೆಲೆಸಲು ಇಚ್ಛಿಸುತ್ತಾಳೆ. ಆದರೆ ಗಂಗಾ ರಮೇಶನೊಂದಿಗೆ ಇರುವುದರಿಂದ ಅದು ಸಾಧ್ಯವಾಗದೆಂದು ರಮೇಶನನ್ನು ಸಾಯಿಸಲು ನಾಗವಲ್ಲಿಯ ಪ್ರೇತ ಪ್ರಯತ್ನಿಸುತ್ತದೆ. ಆದರೆ ರಮೇಶನ ಸ್ನೇಹಿತ ವಿಜಯ ಅವನನ್ನು ಕಾಪಾಡುತ್ತಾನೆ. ನಾಗವಲ್ಲಿಯ ಪ್ರೇತ, ಕಾಕತಾಳೀಯವೆಂಬಂತೆ ಸಂಗೀತದ ಪ್ರೊಫೆಸರ್ ಮಹದೇವನೇ ರಾಮನಾಥನೆಂದು ಭಾವಿಸಿ ಅವಳ ತಂಗಿ ವಾಣಿಯನ್ನು ಅವನು ಮದುವೆಯಾಗುವುದನ್ನು ಸಹಿಸದೆ ಸಾಯಿಸುವ ಪ್ರಯತ್ನದಲ್ಲಿ ಯಶಸ್ವಿಯಾಗುವುದಿಲ್ಲ. ಆಗ ಮಹದೇವನ ಮೇಲೆ ಆರೋಪ ಬರುವಂತೆ ಸಂಚು ಹೂಡುತ್ತಾಳೆ.

ಆ ವೇಳೆಗೆ ರಮೇಶನ ಮಾವ ಜಗತ್‌ಪ್ರಸಿದ್ಧ ಮಂತ್ರವಾದಿ ಆಚಾರ್ಯ ರಾಮಚಂದ್ರರನ್ನು ಕರೆಯಿಸಿ ವಿಷಯವನ್ನು ತಿಳಿಸುತ್ತಾನೆ. ಆಚಾರ್ಯ ನಾಗವಲ್ಲಿಯ ಪ್ರೇತವನ್ನು ಮಂತ್ರೋಚ್ಚಾಟನೆ ಮಾಡುವುದಾಗಿ ಹೇಳುತ್ತಾನೆ. ರಮೇಶನಿಗೆ ಮಾಟ-ಮಂತ್ರ, ಪ್ರೇತದಲ್ಲಿ ನಂಬಿಕೆ ಇಲ್ಲದ್ದರಿಂದ ಅವನ ಆಪ್ತಮಿತ್ರನಾದ ವಿಜಯನಿಗೆ ತನ್ನ ಸಮಸ್ಯೆಯನ್ನು ಪರಿಹರಿಸಲು ಕೇಳಿಕೊಳ್ಳುತ್ತಾನೆ. ವಿಜಯ ಸಮಸ್ಯೆಗೆ ನಾಗವಲ್ಲಿಯ ಪ್ರೇತವೇ ಕಾರಣ ಹಾಗೂ ಅದರಿಂದ ಗಂಗಾಳ ಜೀವಕ್ಕೆ ಅಪಾಯವಿದೆ ಎಂದು ಹೇಳುತ್ತಾನೆ, ಗಂಗಾಳ ಸಮಸ್ಯೆಗೆ ದ್ವಂದ್ವ ವ್ಯಕ್ತಿತ್ವ ಮುಂತಾದ ಮಾನಸಿಕ ಕಾಯಿಲೆಗಳೇ ಕಾರಣ ಎಂತಲೂ ಹೇಳುತ್ತಾನೆ ಮತ್ತು ಸೈಕಾಸಿಸ್ ಮಾಡಿ ಅದನ್ನು ಸರಿಪಡಿಸುವುದಾಗಿ ಹೇಳುತ್ತಾನೆ. ಆಚಾರ್ಯರ ಮಂತ್ರೋಚ್ಚಾಟನೆ ಹಾಗೂ ವಿಜಯನ ನಾಟಕೀಯ ಚಾತುರ್ಯದಿಂದ ಗಂಗಾಳ ಮೈಮನಸ್ಸಿನಲ್ಲಿ ಆವರಿಸಿದ್ದ ನಾಗವಲ್ಲಿಯ ಪ್ರೇತಾತ್ಮ ಹೊರಟುಹೋಗುತ್ತದೆ. ಆದರೆ ಸಂಮೋಹನ ಕ್ರಿಯೆಯಿಂದ ನಾಗವಲ್ಲಿಯ ಪ್ರೇತಾತ್ಮ ಗಂಗಾಳ ದೇಹದಿಂದ ಹೊರಹೋದದ್ದನ್ನು ಖಚಿತಪಡಿಸಿಕೊಳ್ಳುತ್ತಾರೆ.

**ದೆವ್ವ-ಪ್ರೇತಗಳಿವೆಯೇ ?**

'ಆಪ್ತಮಿತ್ರ' ಮೈಮೇಲೆ ಬರುವುದೆನ್ನಲಾದ 'ಪೊಸೆಷನ್ ಸ್ಟೇಟ್ಸ್' ಎಂಬ ಮನೋವೈದ್ಯಕೀಯ ಸಮಸ್ಯೆಯನ್ನು ಆಧರಿಸಿದ್ದರೂ, ಇಡೀ ಚಿತ್ರವನ್ನು ಕೇವಲ ದೆವ್ವ ಬಿಡಿಸುವ ಕ್ರಿಯೆಯೇ ಆವರಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಹಾಡು, ಹಾಸ್ಯ ಮತ್ತು ನಿಗೂಢ ವಿಷಯಗಳಿಂದ ಚಿತ್ರವು ಜನರ ಮನಸೆಳೆದರೂ, ಚಿತ್ರಕ್ಕೆ ಆಧಾರವಾಗಿರುವ ಕಥಾವಸ್ತು ಅವೈಜ್ಞಾನಿಕ ಮತ್ತು ಗೊಂದಲಮಯ ಹಾಗೂ ಸತ್ಯಕ್ಕೆ ದೂರವಾದದ್ದು. ಈ ಮೂಲಕ ದೆವ್ವದ ಕಥೆಗೆ ವೈಜ್ಞಾನಿಕ ಆಧಾರವಿದೆಯೆಂದೂ, ದೆವ್ವಗಳು ಕೇವಲ ದುರ್ಬಲ ಮನಸ್ಸಿನ ಮನುಷ್ಯನ ಮನೋಭಾವನೆಯೆಂದೂ ಹೇಳಲು ಹರಸಾಹಸ ಪಟ್ಟಂತಿದೆ.

ಮನೋವೈದ್ಯ ವಿವಿಧ ಬಗೆಯ ಮಾನಸಿಕ ಕಾಯಿಲೆಗಳು ಗಂಗಾಳನ್ನು ಕಾಡುತ್ತಿವೆ ಎಂದು ಅಭಿಪ್ರಾಯಪಡುತ್ತಾನೆ. ಆದರೆ ಚಿತ್ರದಲ್ಲಿ ನಾಗವಲ್ಲಿಯ ಪ್ರೇತಾತ್ಮ ಗಂಗಾಳ ಮೇಲೆ ಬಂದಿರುವುದನ್ನು ತೋರಿಸುತ್ತಾರೆ. ಆತ ಹೆಸರಿಸುವ ಒಂದೆರಡು ರೋಗಗಳಂತೂ ಅತಿ ವಿರಳ. ಆದರೆ ಚಿತ್ರದಲ್ಲಿ ನಾಗವಲ್ಲಿ ಪ್ರೇತಾತ್ಮ ಗಂಗಾಳ ಮೇಲೆ ಬಂದಿರುವುದನ್ನು ತೋರಿಸುತ್ತಾರೆ. ಅನೇಕ ರೋಗಗಳ ಹೆಸರುಗಳನ್ನು ಹೇಳಿ ಪ್ರೇಕ್ಷಕರಲ್ಲಿ ಗೊಂದಲ ಉಂಟುಮಾಡಲಾಗಿದೆ.

**ಗಂಗಾಳ ಸಮಸ್ಯೆಗೆ ಮನೋವೈದ್ಯ ಮಾಡಿದ್ದಾದರೂ ಏನು ?**

ಗಂಗಾಳ ಸಮಸ್ಯೆಯನ್ನು ಕಂಡುಹಿಡಿಯಲು ಅವಳೊಂದಿಗೆ ಚರ್ಚೆ ಮಾಡುವುದರ ಬದಲು ವೈದ್ಯನು ಒಬ್ಬ ಗುಪ್ತಚರ್ಯನಂತೆ ವರ್ತಿಸುತ್ತಾನೆ. ಅವಳಲ್ಲಿಲ್ಲದ ಕಾಯಿಲೆಗಳನ್ನು ಹೆಸರಿಸುತ್ತಾನೆ. ಆ ಸಮಸ್ಯೆಯಿಂದ ಅವಳ ಜೀವಕ್ಕೆ ಅಪಾಯವೆಂದು ಹೇಳುತ್ತಾನೆ; ಅದಕ್ಕೆ ನಾಗವಲ್ಲಿಯ ದೆವ್ವದ ಕಥೆಯೇ ಕಾರಣವೆಂದು ಹೇಳುತ್ತಾನೆ. ತಾನು ಹೊಸ ವಿಧಾನವಾದ 'ಸೈಕಾಸಿಸ್' ಮಾಡುವುದಾಗಿ ಹೇಳುತ್ತಾನೆ. ಆ ವಿಧಾನದ ಬಗ್ಗೆ ಯಾವ ಮನೋವಿಜ್ಞಾನದ ಪುಸ್ತಕದಲ್ಲೂ ಪ್ರಸ್ತಾಪವಿಲ್ಲ. ವಿಜಯ ತನ್ನ ಅಜ್ಞಾನವನ್ನು ಪ್ರದರ್ಶಿಸುತ್ತಾ "ಮನೋವೈದ್ಯರು ದೇವರು – ದೆವ್ವವನ್ನು ಬೇರೆಯವರಿಗಿಂತಲೂ ಹೆಚ್ಚು ನಂಬುತ್ತಾರೆ" ಎನ್ನುತ್ತಾನೆ. ಈ ತರಹದ ಅರ್ಥಹೀನ ಅನೇಕ ಸಂಭಾಷಣೆಗಳು, ಹೇಳಿಕೆಗಳು ಬೇಸರ ಮೂಡಿಸುತ್ತವೆ.

ಸಿನಿಮಾದ ಉದ್ದೇಶ ಮನೋರಂಜನೆ ನೀಡುವುದೆಂದಾದರೆ 'ಆಪ್ತಮಿತ್ರ' ಯಶಸ್ವಿಯಾಗಿದೆ ಎಂದು ಹೇಳಬಹುದು. ಆದರೆ ಅದರ ಕಥಾವಸ್ತುವಿಗೆ ಸಂಪೂರ್ಣ ವೈಜ್ಞಾನಿಕ ಆಧಾರವಿದೆ ಎಂಬುದು ಕೇವಲ ಭ್ರಮೆ. ಈಗಿರುವ ಯಾವುದೇ ಚಿತ್ರಗಳು ಧಾರಾವಾಹಿಗಳನ್ನು (ಮಾಯಿ-ಮಿತ್ರ) ದೆವ್ವ, ದೇವರು ಆಧಾರದ ಮೇಲೆ ತಯಾರಿಸುತ್ತಿರುವುದು ಸಮಾಜದ ದೃಷ್ಟಿಯಲ್ಲಿ ಅಪಾಯಕಾರಿಯೆನಿಸಿದೆ.



**ಡಾ|| ಪ್ರಕಾಶ್ ಸಿ. ರಾವ್**
'ಅಪರ್ಣ ಕ್ಲಿನಿಕ್' ನಂ. ೧೯೯೪, ೫ನೇ ಕ್ರಾಸ್
೬ನೇ ಮುಖ್ಯರಸ್ತೆ, ಕೆ. ಎನ್. ಎಕ್ಸ್‌ಟೆನ್ಷನ್, ಯಶವಂತಪುರ
ಬೆಂಗಳೂರು - ೫೬೦ ೦೨೨



# ಆಕಾಶಗಂಗೆಯ ಓರೆ ನೋಟ

**ಈ** ತಿಂಗಳ ಸಂಜೆಯ ಆಕಾಶ ಹಾಲುಹಾದಿ ಅಥವಾ ಆಕಾಶಗಂಗೆಯ ಭವ್ಯ ದೃಶ್ಯವನ್ನು ತೆರೆದಿಡುತ್ತದೆ. ಸಂಜೆಗೆಂಪು ಕರಗುತ್ತಿದ್ದ ಹಾಗೆಯೇ ನೆತ್ತಿಯ ಮೇಲೆ ಈ ನದಿಯ ಸುಂದರ ದೃಶ್ಯ ಮೂಡುತ್ತದೆ. ದಕ್ಷಿಣದ ಅಗಸ್ತ್ಯ (ಕನೋಪಸ್)ನಿಂದ ಆರಂಭಿಸಿ ನೆತ್ತಿಯತ್ತ ಹರಿಯುತ್ತದೆ. ಪ್ರಕಾಶಮಾನ (ಸಿರಿಯಸ್) ಲುಬ್ಧಕವನ್ನೊಳಗೊಂಡ ಮಹಾ ಶ್ವಾನ (ಕ್ಯಾನಿಸ್ ಮೇಜರ್) ಮುಂದೆ ಮಹಾ ವ್ಯಾಧ (ಒರೈಯನ್) ನೆತ್ತಿಗೆ ಬರುವಾಗ ವೃಷಭದಲ್ಲಿ ಮಂಗಳ, ರೋಹಿಣಿ ಮತ್ತು ಕೃತ್ತಿಕಾ ಇವುಗಳ ಸಂಗಮ ಈ ನದಿಯಲ್ಲಿ. ಮುಂದಕ್ಕೆ ಉತ್ತರಕ್ಕೆ ತಿರುಗುವ ನದಿ (ಪರ್ಸಿಯುಸ್) ಪಾರ್ಥ, ಕುಂತಿ (ಕ್ಯಾಸಿಯೋಪಿಯಾ) ಮೂಲಕ ಸಾಗುತ್ತದೆ. ಚಂದ್ರನಿಲ್ಲದ ರಾತ್ರಿಗಳಲ್ಲಿ ಈ ಭಾಗವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅಲ್ಲಿ ನಕ್ಷತ್ರಗಳ ದಟ್ಟಣೆ ಹೆಚ್ಚು ಎಂದು ಸ್ಪಷ್ಟವಾಗುತ್ತದೆ. ಈ ನದಿಗೆ ಸುಮಾರು ಲಂಬವಾದ ದಿಕ್ಕಿನಲ್ಲಿ ದೃಷ್ಟಿ ಹಾಯಿಸಿದರೆ ವ್ಯತ್ಯಾಸ ಇನ್ನೂ ಸ್ಫುಟವಾಗುತ್ತದೆ. ಉದಾಹರಣೆಗೆ ಪೂರ್ವದಿಂದ ಪಶ್ಚಿಮಕ್ಕೆ ಕಣ್ಣಾಡಿಸಿ. ಪೂರ್ವದ ಅಂಚಿನ ಸಿಂಹ, ಅದರ ಮೇಲಿನ ಕಟಕ (ಶನಿ ಇರುವುದರಿಂದ ಈ ರಾಶಿಯನ್ನು ಗುರ್ತಿಸಬಹುದು; ಇಲ್ಲದಿದ್ದರೆ ಗುರುತಿಸುವುದೇ ಕಷ್ಟ) – ಎರಡೂ ರಾಶಿಗಳಲ್ಲಿ ಅಷ್ಟೇನೂ ಪ್ರಕಾಶಮಾನ ನಕ್ಷತ್ರಗಳಿಲ್ಲ. ಮಿಥುನದ ಅರ್ಧ ನದಿಯಲ್ಲಿ ಮುಳುಗಿದೆ. ವೃಷಭವೂ ಅಷ್ಟೇ ಇನ್ನು ಪಶ್ಚಿಮದ ಮೀನ, ಅದರ ಮೇಲಿನ ಮೇಷ ಈ ರಾಶಿಗಳಲ್ಲೂ ನಕ್ಷತ್ರಗಳ ದಟ್ಟಣೆ ಕಡಿಮೆ ಎಂಬುದು ತಾನೇ ತಾನಾಗಿ ತಿಳಿಯುತ್ತದೆ.






ಫೆಬ್ರವರಿ ೫ರ ಸಂಜೆ ನೆತ್ತಿಯ ಮೇಲೆ ಚಂದ್ರ ಮಂಗಳ ಕೃತ್ತಿಕಾ ಇವುಗಳ ಸಂಗಮ

ತಿಂಗಳ ಆರಂಭದಲ್ಲಿ ಸಂಜೆಯ ಆಕಾಶದಲ್ಲಿ ಮಂಗಳ ಮತ್ತು ಶನಿ ಮಾತ್ರ ಕಾಣುವುದಾದರೂ ತಿಂಗಳ ಉತ್ತರಾರ್ಧಕ್ಕೆ ಬುಧಗ್ರಹವೂ ಸೇರುತ್ತದೆ. ಈ ನಕ್ಷೆ ೧೫ನೆಯ ತಾರೀಖಿನದು. ಪಶ್ಚಿಮದ ಅಂಚಿನಲ್ಲಿ ಬುಧ ಎಂಬ ಚುಕ್ಕೆಯ ಹೊರತಾಗಿ ತಿಂಗಳ ಮೊದಲಲ್ಲೂ ಅನ್ವಯವಾಗುವುದು. ೨೪ರಂದು ಬುಧವನ್ನು ಗುರುತಿಸಲು ಒಳ್ಳೆಯ ಅವಕಾಶವಿದೆ. ಪಶ್ಚಿಮದ ಸಂಜೆಗೆಂಪಿನಲ್ಲಿ ಹೊಳೆಯುವ ಏಕಾಂಗಿ ಚುಕ್ಕೆಯೇ ಬುಧ.

ನಮ್ಮ ಮಾರ್ಗದರ್ಶಿ ಬೇರೆ ಬೇರೆ ಗ್ರಹಗಳನ್ನು ಪರಿಚಯಿಸುತ್ತಾ ಹೋಗುವ ದಿನಾಂಕಗಳನ್ನು ದಿನಚರಿಯಲ್ಲಿ ಕೊಟ್ಟಿದೆ. ಈ ದಿನಗಳಲ್ಲಿ ಛಾಯಾ ಗ್ರಹಣಕ್ಕೂ ಒಳ್ಳೆಯ ಅವಕಾಶ. ತಿಂಗಳ ಮೊದಲ ವಾರದಲ್ಲಿ ಮಂಗಳ, ರೋಹಿಣಿ, ಕೃತ್ತಿಕಾ ಇವುಗಳನ್ನು ಸೆರೆಹಿಡಿಯಲು ಪ್ರಯತ್ನಿಸಿದರೆ ನಕ್ಷತ್ರವಲ್ಲದ ಎರಡು ಚುಕ್ಕೆಗಳೂ ಸಿಕ್ಕಿಬೀಳಬಹುದು. ಪಾರ್ಥೆನೋಪೆ ಮತ್ತು ಸೈಕೆ ಎಂಬ ಹೆಸರಿನ ಈ ಕ್ಷುದ್ರ ಗ್ರಹಗಳು ರೋಹಿಣಿಯಿಂದ ಸುಮಾರು ೨ ಡಿಗ್ರಿ ಅಂತರದಲ್ಲಿ ಹಾದು ಹೋಗುತ್ತವೆ. ಬರಿಗಣ್ಣಿಗೆ ಕಾಣುವುದಿಲ್ಲ; ದುರ್ಬೀನು, ಝೂಮ್ ಲೆನ್ಸ್‌ಗಳು ಬೇಕಾಗಬಹುದು. ೪ರ ನಂತರ ಚಂದ್ರನ ಬೆಳಕೇ ಅಡ್ಡಿಯಾಗಬಹುದು. ವಿದ್ಯುದ್ದೀಪದ ಕಾಟ ಇಲ್ಲದ ಸ್ಥಳಗಳಿಂದ ವೆಸ್ಟಾ ಎಂಬ ಕ್ಷುದ್ರಗ್ರಹ ಬರಿಗಣ್ಣಿಗೆ ಕಾಣಬಹುದು. ಅದು ಮಿಥುನ ರಾಶಿಯಲ್ಲಿದೆ. (ಎಪ್ಸಿಲಾನ್ ಜೆಮಿನೋರಂ ಎಂಬ ನಕ್ಷತ್ರದ ಸಮೀಪವಿದೆ).

ಮಾರ್ಗದರ್ಶಿ ಚಂದ್ರ ಚಿತ್ರಾ ಮತ್ತು ಜ್ಯೇಷ್ಠಾ ಈ ನಕ್ಷತ್ರಗಳನ್ನು ಮುಚ್ಚಿ ಹಾಕುತ್ತಾನೆ. ಆದರೆ ಆ ಘಟನೆಗಳ ನೇರನೋಟ ನಮಗಿಲ್ಲ. ಆಯಾ ನಕ್ಷತ್ರಗಳನ್ನು ಗುರುತಿಸಲು ಒಳ್ಳೆಯ ಅವಕಾಶ.

ಈ ತಿಂಗಳ ಹುಣ್ಣಿಮೆಯಂದು ಚಂದ್ರ ಮಘಾ ನಕ್ಷತ್ರದಿಂದ ಸಾಕಷ್ಟು ದೂರವೇ ಇರುತ್ತದೆ ಎಂಬುದನ್ನು ಗಮನಿಸಿ.

ಸಂಜೆಯ ಆಕಾಶದಿಂದ ಓಡಿಹೋಗಿದ್ದ ಶುಕ್ರ ಬೆಳಗಿನ ಜಾವ ಪೂರ್ವದಂಚಿನಲ್ಲಿ ಹಾಜರಾಗಿದೆ. ೧೭ರಂದು ಅದರ ಪ್ರಕಾಶ ಗರಿಷ್ಠ. ೨೭ರ ಅಮಾವಾಸ್ಯೆಯಂದು ಚಂದ್ರ-ಭೂಮಿ ನಡುವೆ ಕನಿಷ್ಠ ದೂರ. ಆದ್ದರಿಂದ ಆ ದಿನ ಉಬ್ಬರ-ಇಳಿತಗಳ ಆರ್ಭಟ ಪ್ರತಿ ಅಮಾವಾಸ್ಯೆಗಿಂತ ಸ್ವಲ್ಪ ಹೆಚ್ಚು ಎನ್ನಿಸಬಹುದು.

ಚಿಕ್ಕ ಧೂಮಕೇತುವೊಂದು ದೂರದರ್ಶಕಗಳ ಪಾಲಿಗಿದೆ. ಬಹುಶಃ ಬರಿಗಣ್ಣಿಗೆ ಕಾಣಸಿಗದು. ಮೆಕ್‌ನಾಟ್ ಎಂಬ ಹೆಸರಿನ ಇದು ಮೀನರಾಶಿಯಲ್ಲಿ ಓಡುತ್ತಿದೆ.

### ಖಗೋಳ ದಿನಚರಿ

೦೩ ಶುಕ್ರಗ್ರಹ ತಟಸ್ಥ; ಹಿಮ್ಮುಖ ಚಲನೆ ಮುಕ್ತಾಯ
೦೫ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
ಚಂದ್ರ-ಮಂಗಳ ನಡುವೆ ೨ ಡಿಗ್ರಿ ಕೋನ
೧೧ ಚಂದ್ರ-ಶನಿ ನಡುವೆ ೪ ಡಿಗ್ರಿ ಕೋನ



೧೧ರ ಸಂಜೆ ಪೂರ್ವ ದಿಕ್ಕಿನಲ್ಲಿ ಶನಿ ಮತ್ತು ಚಂದ್ರ

೧೩ ಹುಣ್ಣಿಮೆ ೧೦.೧೪ಕ್ಕೆ
೧೪ ಚಂದ್ರ-ಭೂಮಿ ನಡುವೆ ಗರಿಷ್ಠ ಅಂತರ (೦೬.೧೬ಕ್ಕೆ)
೧೭ ಶುಕ್ರಗ್ರಹದ ಗರಿಷ್ಠ ಪ್ರಕಾಶ
ಚಂದ್ರ-ಚಿತ್ತಾ ನಡುವೆ ಕನಿಷ್ಠ ಕೋನ
೨೦ ಚಂದ್ರ-ಗುರು ನಡುವೆ ೫ ಡಿಗ್ರಿ ಕೋನ
೨೧ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
ಚಂದ್ರ-ಜ್ಯೇಷ್ಠಾ ನಡುವೆ ಕನಿಷ್ಠ ಕೋನ
೨೩ ಬುಧಗ್ರಹವನ್ನು ನೋಡಲು ಉತ್ತಮ ಅವಕಾಶ
೨೪ ಚಂದ್ರ-ಶುಕ್ರ ನಡುವೆ ೪ ಡಿಗ್ರಿ ಕೋನ
೨೭ ಚಂದ್ರ-ಭೂಮಿ ನಡುವೆ ಕನಿಷ್ಠ ದೂರ (೦೧.೫೪ಕ್ಕೆ)
ಅಮಾವಾಸ್ಯೆ (೦೬.೦೧ಕ್ಕೆ)
೨೮ ಚಂದ್ರ-ಬುಧ ನಡುವೆ ೪ ಡಿಗ್ರಿ ಕೋನ

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ನೀನು ಜೀವಂತವಾಗಿದ್ದೀಯ ಎಂಬುದು ಬರಿಯ ಭ್ರಮೆ



ನೀನು ಜೀವಂತವಾಗಿದ್ದೀಯ ಎಂಬುದು
ಬರಿಯ ಭ್ರಮೆ
ಬಾ ಮರದ ಕೆಳಗೆ ಕಾಯುತ್ತಿರುವ
ನನ್ನ ಬಳಿಗೆ
ನಿನ್ನ ನೀಚತನ ಸೋಗು ಸೊಕ್ಕೆಲ್ಲ
ತಳ್ಳು ಆಚೆಗೆ
ತುದಿಗಾಲಲ್ಲಿ ನಿಂತು ಒಳಗೆ ಜಿಗಿ
ಮೋಡದಲ್ಲಿನ ಮೀನು
ನೀರಿಗೆ ಜಿಗಿದಂತೆ

ನಿನ್ನ ತೊಡರುವ ಜೀವ
ಶಾಂತಿ ಪಡೆಯಲಿ
ನವೆಂಬರಿನ ಛಳಿಯಲ್ಲಿ ಬಿಡಿ
ಮಾವಿನ ಹಣ್ಣಾಗಿ
ನನ್ನಮ್ಮನ ತೊಡೆಯ ಮೇಲೆ
ನಾನು ಬಿದ್ದಂತೆ
ಅನಾಮತ್ತಾಗಿ ಎಲ್ಲವೂ ಬೇಕೆಂಬಂತೆ
ಬೀಳು

ದೈವಾಧೀನವಾದ ಎಲ್ಲ ಜೀವ ಜಂತುಗಳು
ನನ್ನ ಮೇಲೆ ಓಡಾಡುವುದನ್ನು
ನೀನು ನೋಡಿಲ್ಲವೆ ?
ನಾನು ಎಲ್ಲವನ್ನೂ ಹೊತ್ತು ನಿಲ್ಲುತ್ತೇನೆ
ಆಕಾಶವನ್ನು ಹೊತ್ತು ನಿಂತ ಪಕ್ಷಿಯಂತೆ

ನೀನು ಅತ್ಯಂತ ಪ್ರೀತಿಯಿಂದ ಕರೆದಾಗ
ನಾನು ನೋಡಿದ್ದು ನಿನ್ನನ್ನೇ
ಅಷ್ಟೊಂದು ಆಳವಾಗಿ ನೋಡಿದ್ದು
ನಿನಗೆ ಭಯವಾಗಿದ್ದರೂ, ಸಹಿಸಿ
ನುಡಿದದ್ದು
ಭೂಮಿಯ ಮುಖದ ಮೇಲೆ ಮರ
ಭರವಸೆಯ ಬೇರು ಹರಡಿದಂತೆ
ಮರ ಯಾವತ್ತೂ ಬಡವಾಗುವುದಿಲ್ಲ
ತರಂಗಗಳಿಂದ ಮಿಡಿಯುತ್ತಿರುವ
ನನ್ನ ಕಣ್ಣ ಕೊಳ ಅದಕ್ಕೆ ಸಾಕ್ಷಿ
ಸುಮ್ಮನೆ ನನ್ನಲ್ಲಿ ಜಿಗಿ
ನೀನು ಆಕಾಶದಲ್ಲಿ ತೇಲುತ್ತೀಯ.

ಅಂಕುರ್ ಬೆಟಗೇರಿ
೧೦೬, ಈ.ಎ.ಟಿ. ರಸ್ತೆ, ಬಸವನಗುಡಿ,
ಬೆಂಗಳೂರು - ೫೬೦ ೦೦೪



## ರವೀಂದ್ರನಾಥ ತಾಕೂರರ ದಾಲಿಯಾ ಮತ್ತು ಇತರ ಕಥೆಗಳು

ಅನು : ಶ್ರೀನಿವಾಸ ವಿ. ಸುತ್ರಾವೆ

**ಪುಟ : ೧೪೦** **ಬೆಲೆ : ರೂ. ೬೦**

**ಭಾಗ್ಯಲಕ್ಷ್ಮೀ ಪ್ರಕಾಶನ,** ೮೭, ೩ನೇ ಕ್ರಾಸ್, ೪ನೇ ಬ್ಲಾಕ್ ಬನಶಂಕರಿ ೩ನೇ ಸ್ಟೇಜ್, ಬೆಂಗಳೂರು - ೮೫

ರವೀಂದ್ರನಾಥ ತಾಕೂರರ ಹನ್ನೆರಡು ಪ್ರಸಿದ್ಧ ಕಥೆಗಳನ್ನು ಶ್ರೀನಿವಾಸ ವಿ. ಸುತ್ರಾವೆಯವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಈಗಾಗಲೇ ಬೇರೆ ಬೇರೆ ದೇಶಗಳ ಪ್ರಸಿದ್ಧ ಲೇಖಕರ – ಟಾಲ್‌ಸ್ಟಾಯ್, ಆ್ಯಂಟನ್ ಚೆಕಾಫ್, ಇಬ್ಸನ್‌ರ ಕೆಲ ಕಥೆ, ನಾಟಕಗಳನ್ನು ಅನುವಾದಿಸಿರುವ ಸುತ್ರಾವೆಯವರು ವಿಶ್ವದ ಶ್ರೇಷ್ಠ ಸಾಹಿತ್ಯವನ್ನು ಕನ್ನಡದ ಓದುಗರಿಗೆ ಅನುವಾದದ ಮೂಲಕ ತಲುಪಿಸುವ ಹಂಬಲವುಳ್ಳವರು. ಕವಿ, ನಾಟಕಕಾರ, ವಿಮರ್ಶಕರಾಗಿರುವ ಸುತ್ರಾವೆಯವರು ತಮ್ಮ ಸೃಜನಶೀಲತೆಯನ್ನು ಅನುವಾದದಲ್ಲೂ ಕಾಣಿಸಿರುವುದು ರವೀಂದ್ರರ ಅನುವಾದಿತ ಕಥೆಗಳಲ್ಲಿ ತಿಳಿದುಬರುತ್ತದೆ. ವಸ್ತುವೈವಿಧ್ಯವಿರುವ ಕಥೆಗಳನ್ನು ಆಯ್ಕೆ ಮಾಡಿಕೊಂಡು ಅನುವಾದಿಸಿರುವುದು ರವೀಂದ್ರರ ಕಥಾ ಜಗತ್ತಿನ ಹರವನ್ನು ಪರಿಚಯಿಸುತ್ತದೆ.

## ಅನ್ನ (ಕಥಾಸಂಕಲನ)

ಹನೂರು ಚನ್ನಪ್ಪ



**ಪುಟ : ೧೪೪** **ಬೆಲೆ : ರೂ. ೧೦೦**

**ಅಭಿರುಚಿ ಪ್ರಕಾಶನ,** ನಂ. ೩೮೬, ೧೪ನೆಯ ಮುಖ್ಯರಸ್ತೆ, ೩ನೆಯ ಅಡ್ಡರಸ್ತೆ, ಸರಸ್ವತೀಪುರ, ಮೈಸೂರು - ೯

ಶಿಕ್ಷಕರಾಗಿರುವ ಹನೂರು ಚನ್ನಪ್ಪ ಆರು ವರ್ಷಗಳ ಅವಧಿಯಲ್ಲಿ ಬರೆದ ಕಥೆಗಳು ಇಲ್ಲಿ ಸಂಕಲಿತವಾಗಿವೆ. ದೇವನೂರು ಮಹಾದೇವರ ಕೃತಿಗಳಿಂದ ಪ್ರಭಾವಿತರಾಗಿಯೇ ತಾವು ಬರವಣಿಗೆ ಆರಂಭಿಸಿದ್ದು ಎಂದು ಹೇಳಿಕೊಂಡಿರುವ ಚನ್ನಪ್ಪನವರಿಗೆ ದಲಿತಲೋಕ ತುಂಬ ಪರಿಚಿತವಾದದ್ದು. 'ದಲಿತ ಲೋಕದೊಳಗೆ ದೌರ್ಬಲ್ಯಗಳು ಮಾತ್ರವಲ್ಲ, ಅದರ ಹಿಂದೆ ಇಂದಿಗೂ ಅರಿವಿಗೆ ಬಾರದ ಅದೆಷ್ಟೋ *superiority* ಅಂಶಗಳು ಇವೆ ಎಂಬುದನ್ನು ಕಂಡು-ಕೇಳಿರುವ ನನಗೆ ಅದನ್ನು ದಾಖಲಿಸದ ಹೊರತು ಇತರ ಆದ್ಯತೆಗಳಾವುವೂ ಇಲ್ಲದ ಕಾರಣ ನನ್ನ ಎಲ್ಲ ಕಥೆಗಳು ದಲಿತ ಕೇಂದ್ರಿತ ಕಥೆಗಳೇ ಆಗಿವೆ' ಎಂದವರು ಹೇಳಿಕೊಂಡಿದ್ದಾರೆ. ದೇವನೂರು ಮಹಾದೇವರನ್ನು 'ಪ್ರಾದೇಶಿಕ ಭಾಷಾ ಪಂಪ' ಎಂದು ಕರೆದಿರುವ ಇವರು ತಮ್ಮ ಕಥನ ಶೈಲಿಯನ್ನು ಹೆಚ್ಚೆಚ್ಚು ಮೋಹಕಗೊಳಿಸುವುದರಲ್ಲೇ ಮಗ್ನರಾಗಿರುವಂತೆ ಕಾಣುತ್ತದೆ. ಇಲ್ಲಿನ ಕಥೆಗಳಲ್ಲಿ ಪ್ರಭಾವ ಮತ್ತು ಪ್ರೇರಣೆ ಅನುಕರಣೆಗೆ ಗುರಿಯಾಗಿದೆ.




## ಸ್ಪಂದನ

ನಾ. ದಿವಾಕರ, ಮ. ಶ್ರೀ. ಮುರಳಿ ಕೃಷ್ಣ

**ಪುಟ : ೧೨೦** **ಬೆಲೆ : ರೂ. ೫೦**

**ಸಂಗಾತಿ ವೃಂದ,** ನಂ. ೩೦, ೩ನೇ ಮುಖ್ಯರಸ್ತೆ, ಹನುಮಂತನಗರ, ಬೆಂಗಳೂರು - ೫೬೦ ೦೧೯

ನಾ. ದಿವಾಕರ ಹಾಗೂ ಮ. ಶ್ರೀ. ಮುರಳಿ ಕೃಷ್ಣರ ಲೇಖನಗಳು ಈ ಪುಸ್ತಕದಲ್ಲಿವೆ. ಬದುಕು ಸದಾ ನಿತ್ಯನೂತನವಾದದ್ದು; ಅದು ಸದಾ ಚಲನಶೀಲವಾಗಿರುತ್ತಲೇ ಅನೇಕ ಹೊಸ ಆಯಾಮಗಳಿಗೆ ಕಾರಣವಾಗುತ್ತಿರುತ್ತದೆ. ಭಿನ್ನಾಭಿಪ್ರಾಯಗಳು ಯಾವಾಗಲೂ ಹೊಸ ಸಮಸ್ಯೆಗಳನ್ನು, ಊಹೆಗಳನ್ನು ಹುಟ್ಟುಹಾಕುತ್ತಲೇ ಇರುತ್ತವೆ. ಈ ಎಲ್ಲಕ್ಕೆ ಸ್ಪಂದಿಸುವುದು ಪ್ರಜ್ಞಾವಂತರ ಕರ್ತವ್ಯ. ಈ ನಿಟ್ಟಿನಲ್ಲಿ ಇಲ್ಲಿನ ಇಬ್ಬರು ಲೇಖಕರು ಹೊಸ ವಿದ್ಯಮಾನಗಳಿಗೆ ಸ್ಪಂದಿಸಿದ್ದಾರೆ. 'ಬೌದ್ಧ ಧರ್ಮ ಜೀವ ವಿರೋಧಿ' ಎಂದು ಎಸ್. ಎಲ್. ಭೈರಪ್ಪನವರು ಹೇಳಿದ ಮಾತಿಗೆ ಪ್ರತಿಸ್ಪಂದಿಯಾಗಿ ತಮ್ಮ ಅಧ್ಯಯನಶೀಲತೆಯಿಂದ ವಿಶ್ಲೇಷಿಸಿದ್ದಾರೆ. ಹಾಗೆಯೇ 'ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಕೆ' 'ಮೀಸಲಾತಿ' 'ಕಾವೇರಿ ಸಮಸ್ಯೆ' 'ಟಿಪ್ಪು ದೇಶಪ್ರೇಮಿಯೋ ? ದೇಶದ್ರೋಹಿಯೋ ?' 'ಜಾಗತೀಕರಣ' 'ನೀರಿನ ಖಾಸಗೀಕರಣ' – ಮುಂತಾದ ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿವೆ. ಇವುಗಳಲ್ಲಿ ಕೆಲವು ಹೊಸತು, ಸಂವಾದ, ಜನಾಶಯ, ಆಂದೋಲನ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಸಮಕಾಲೀನ ಬಿಕ್ಕಟ್ಟುಗಳು ಹೇಗೆ ಅಧ್ಯಯನಶೀಲತೆಯ ಶಿಸ್ತನ್ನು ರೂಢಿಸುತ್ತವೆ ಎಂಬುದಕ್ಕೆ 'ಸ್ಪಂದನ' ಸಾಕ್ಷಿಯಾಗುತ್ತದೆ.



## ವಿಶ್ವಭ್ರಾತೃತ್ವದ ಸೂಫಿ ದೂದಪೀರಾಂ

ಎ. ಎಸ್. ಮಕಾನದಾರ, ಎಂ. ಆಯ್. ಕಣಕೆ



**ಪುಟ : xviii+೮+೨೨೨=೨೪೮** **ಬೆಲೆ : ರೂ. ೧೦೦**

**ದೂದಪೀರಾಂ ಪ್ರಕಾಶನ, ಲಕ್ಷ್ಮೇಶ್ವರ**

ಸೂಫಿ ಪಂಥ ಭಾರತದಲ್ಲಿ ಹುಟ್ಟಿತು ಎಂಬುದು ತಿಳಿದ ವಿಚಾರವೆ; ಆದರೆ ಆ ಬಗ್ಗೆ ಹೆಚ್ಚು ವಿಸ್ತಾರದ ಅಧ್ಯಯನ ನಡೆದಿರಲಿಲ್ಲ. ಸೂಫಿಪಂಥದ ಹುಟ್ಟು, ಅದರ ಆಶಯಗಳ ಬಗ್ಗೆ ಕೆಲವೇ ಲೇಖನಗಳು ಪ್ರಕಟಗೊಂಡಿದ್ದವು. ಈ ಪುಸ್ತಕದ ಸಂಪಾದಕರುಗಳಾದ ಎ. ಎಸ್. ಮಕಾನದಾರ ಹಾಗೂ ಎಂ. ಆಯ್. ಕಣಕೆಯವರು ಪುಲಿಗೆರೆಯ ಸೂಫಿ ಸಂತ ದೂದಪೀರಾಂರ ಬಗ್ಗೆ ಮಾಹಿತಿ ಇರುವುದನ್ನು ತಿಳಿದು ಬೇರೆ ಬೇರೆ ಲೇಖಕರಿಗೆ ಈ ಬಗ್ಗೆ ಸಂಶೋಧಿಸಿ ಬರೆಯುವಂತೆ ಪ್ರಚೋದಿಸಿ ಎಲ್ಲ ಲೇಖನಗಳನ್ನು ಒಟ್ಟುಮಾಡಿ ಕೊಟ್ಟಿದ್ದಾರೆ. ಹಿಂದೂ-ಮುಸ್ಲಿಂ ಸಾಮರಸ್ಯ ಕೆಡುತ್ತಿರುವ ಇವತ್ತಿನ ಸಂದರ್ಭದಲ್ಲಿ ದೂದಪೀರಾಂರ ಬಗ್ಗೆ ಅಧ್ಯಯನ ನಡೆಸಿ ಅವರ ತತ್ವಗಳನ್ನು ಸಂಗ್ರಹಿಸಿಕೊಟ್ಟಿರುವುದು ತುಂಬ ಸ್ವಾಗತಾರ್ಹ ಸಂಗತಿ.



## ರಜನೀಶನಿಗೂ ಅರ್ಥವಾಗದ ಕಜ್ಜಿ

ಬಿ. ಆರ್. ನಾಗೇಶ್

**ಪುಟ : ೧೮೨** **ಬೆಲೆ : ರೂ. ೧೨೦**

**ಕರ್ನಾಟಕ ಸಂಘ, ಮುಂಬಯಿ,** ಡಾ|| ಎಂ. ವಿಶ್ವೇಶ್ವರಯ್ಯ ಸ್ಮಾರಕ ಮಂದಿರ, ಮಾಟುಂಗಾ, ಮುಂಬಯಿ - ೪೦೦೦೧೬

ಬಿ. ಆರ್. ನಾಗೇಶ್‌ರವರ ಎರಡನೆಯ ಕಥಾ ಸಂಕಲನ ಇದು. 'ಪತಿವ್ರತೆ ಹೆಂಗಸಾದದ್ದು' ಎಂಬ ತಮ್ಮ ಮೊದಲ ಸಂಕಲನದಲ್ಲಿ ಸಾಕಷ್ಟು ಭರವಸೆ ಮೂಡಿಸಿದ ಇವರು ಈ ಸಂಕಲನದಲ್ಲಿ ಹೊಸ ಪ್ರಯೋಗಗಳನ್ನು ಮಾಡಿರುವುದು ಕಂಡುಬರುತ್ತದೆ. ಕನ್ನಡ ರಂಗಭೂಮಿಯ ಪ್ರಮುಖ ನಿರ್ದೇಶಕರಲ್ಲಿ ಒಬ್ಬರಾಗಿರುವ ಇವರು ನಾಟಕದಲ್ಲಿನ ನಾಟಕೀಯತೆಯನ್ನು ತಮ್ಮ ಕಥೆಗಳಲ್ಲಿ ಫ್ಯಾಂಟಸಿಯನ್ನಾಗಿ ಪರಿವರ್ತಿಸಿಕೊಂಡಿರುವಂತಿದೆ. ಇಲ್ಲಿನ ಇಪ್ಪತ್ತು ಕಥೆಗಳಲ್ಲಿ ಫ್ಯಾಂಟಸಿಯ ಬೇರೆ ಬೇರೆ ಬಗೆಗಳು ಕಾಣಸಿಗುತ್ತವಾದರೂ ಅವು ಇನ್ನಿತರ ಲೇಖಕರು ಬರೆದ ಪ್ರಸಿದ್ಧ ಫ್ಯಾಂಟಸಿ ಕತೆಗಳಷ್ಟು ಪರಿಣಾಮಕಾರಿಯಾಗಿಲ್ಲ. ವೈಕಂ ಮಹಮ್ಮದ್ ಬಷೀರ್, ವಿಲಿಯಂ ಗೋಯಲ್‌ರಂಥವರ ಕಥನ ತಂತ್ರ ಇಲ್ಲಿಲ್ಲ. 'ಫ್ಯಾಂಟಸಿಯನ್ನು ವಾಸ್ತವವೆನ್ನುವಂತೆ ಕತೆಯೊಳಗೆ ತರುವ ಕೌಶಲ ಪಡೆದವರು' ಎಂದು ಬಿ. ಜೆ. ಅಭಿಪ್ರಾಯ ವ್ಯಕ್ತಪಡಿಸಿರುವುದು ಸರಿಯಾಗಿದೆ.

## ವಿಚಾರದ ಬೆಳಕು (ಆಯ್ದ ಲೇಖನಗಳ ಸಂಗ್ರಹ)

ಡಾ|| ಜಿ. ಎನ್. ಉಪಾಧ್ಯ



**ಪುಟ : ೧೬೮** **ಬೆಲೆ : ರೂ. ೧೨೦**

**ಅಭಿಜಿತ್ ಪ್ರಕಾಶನ,** ಎ/೪೦೪, ವಿನಾಯಕ ಆಶಿಶ್, ಎಮ್.ಎಮ್. ಎಮ್. ರಸ್ತೆ, ಪಿ ಎಂಡ್ ಟಿ ಕಾಲೋನಿ ಹತ್ತಿರ, ಮುಳುಂದ (ಪಶ್ಚಿಮ), ಮುಂಬಯಿ - ೮೦

ಮುಂಬೈ ಪ್ರಾಂತ್ಯದಲ್ಲಿ ಅರಳಿದ ಪ್ರತಿಭೆಗಳನ್ನು ಕನ್ನಡಿಗರಿಗೆ, ಕರ್ನಾಟಕದಲ್ಲಿ ಮಹತ್ತರವಾದುದನ್ನು ಸಾಧಿಸಿದ ಪ್ರತಿಭೆಗಳನ್ನು ಮುಂಬೈ ಕನ್ನಡಿಗರಿಗೆ ಪರಿಚಯಿಸುವ ಲೇಖನಗಳು 'ವಿಚಾರದ ಬೆಳಕು' ಪುಸ್ತಕದಲ್ಲಿವೆ. ಬೆನ್ನುಡಿ ಬರೆದಿರುವ ಕೆ. ರಘುನಾಥ್ ಹೇಳುವಂತೆ ಈ ಪುಸ್ತಕದಲ್ಲಿನ ಎಲ್ಲ ಲೇಖನಗಳಲ್ಲಿ 'ಸಾಂಸ್ಕೃತಿಕ ರಾಯಭಾರಿತ್ವ'ದ ಲಕ್ಷಣಗಳಿವೆ. ಪು.ತಿ.ನ., ಕೆ. ವಿ. ಸುಬ್ಬಣ್ಣ, ದುಂಡಿರಾಜ್‌ರ ಸಾಧನೆಯ ವಿಭಿನ್ನ ಮಗ್ಗಲುಗಳನ್ನು ಮುಂಬೈ ಕನ್ನಡಿಗರಿಗೆ ಪರಿಚಯಿಸಿದಂತೆಯೆ, ಕರ್ನಾಟಕಕ್ಕೆ ಅಷ್ಟೇನೂ ಪರಿಚಯವಲ್ಲದ ದಿವಾಣಜಿ, ಮಿತ್ರಾ ವೆಂಕಟ್ರಾಜ್, ಎಂ. ಬಿ. ಕುಕ್ಯನ್‌ರನ್ನು ಪರಿಚಯಿಸಿದ್ದಾರೆ. ಸಂಸ್ಕೃತಿ ಸಿಂಚನ, ಕೃತಿ ನೋಟ, ಸಾಧಕರು – ಹೀಗೆ ೩ ಭಾಗಗಳಾಗಿ ವಿಂಗಡಿಸಿಕೊಂಡು ಪ್ರತಿಯೊಂದು ಭಾಗದಲ್ಲಿಯೂ ಮೌಲಿಕವೆನಿಸುವ ಲೇಖನಗಳನ್ನು ಒಟ್ಟುಮಾಡಿದ್ದಾರೆ. ಇಲ್ಲಿನ ಲೇಖನಗಳಲ್ಲಿ 'ಪುಟ್ಟ ಕರ್ನಾಟಕ'ವಿದೆ ಎಂದು ಹಂಪ. ನಾಗರಾಜಯ್ಯ ಮುನ್ನುಡಿಯಲ್ಲಿ ಹೇಳಿದ್ದಾರೆ. ಸಾಮಾನ್ಯವಾಗಿ ಇಂಥ ಪುಸ್ತಕಗಳು ಪ್ರಶಂಸಾಪರವಾಗಿರುವುದೇ ಹೆಚ್ಚು. ಆದರೆ ಜಿ. ಎನ್. ಉಪಾಧ್ಯರವರು ಈ ಅಪಾಯದಿಂದ ತಪ್ಪಿಸಿಕೊಂಡು ತಮ್ಮ ವಿಚಿಕಿತ್ಸಕ ಗುಣದಿಂದ ಲೇಖನಗಳನ್ನು ಬರೆದಿದ್ದಾರೆ.

ಎನ್. ಪಿ. ಮಹೇಶ್




# ಮುಕ್ತಾಯಕ್ಕ ಮತ್ತು ಗಜಲ್ ಗಮಲು

ಡಾ|| ಮೀನಾಕ್ಷಿ ಬಾಳಿ

**ಅ**ಪ್ಪ ಶಾಂತರಸರಿಂದ ಪ್ರತಿಭೆ ಮತ್ತು ಗಜ಼ಲ್ ಎರಡನ್ನೂ ಬಳುವಳಿಯಾಗಿ ಪಡೆದುಕೊಂಡ ಎಚ್. ಎಸ್. ಮುಕ್ತಾಯಕ್ಕ ಕನ್ನಡ ಕಾವ್ಯಲೋಕದಲ್ಲೊಬ್ಬ ಅಪರೂಪದ ಸಾಹಿತಿ. ಎರಡೇ ವರ್ಷಗಳ ಅಂತರದಲ್ಲಿ ಎರಡು ಗಜ಼ಲ್ ಸಂಕಲನಗಳನ್ನು ರಚಿಸಿದ್ದಾರೆ. ಮೊದಲ ಕೃತಿಯಲ್ಲಿ ನಲವತ್ತು, ಎರಡನೇ ಕೃತಿಯಲ್ಲಿ ಮೂವತ್ತೈದು ಅಂದರೆ ಒಟ್ಟು ಎಪ್ಪತ್ತೈದು ತಾಜಾ ಗುಲದಸ್ತಾಗಳ ಕಾವ್ಯಗುಚ್ಛಗಳನ್ನು ನೀಡಿದ್ದಾರೆ. ಇವುಗಳಲ್ಲಿ ಒಂದೆರಡು ಪುನರಾವರ್ತನೆಗೊಂಡಿವೆ.

ಮೈಫಿಲ್, ಮೈಖಾನಾ, ಮಧುಬಟ್ಟಲು, ಸಾಕಿ, ಶೃಂಗಾರದ ಮದೋನ್ಮತ್ತ ಕಾವ್ಯ ಪರಿಕರಗಳು ಕನ್ನಡ ಕಾವ್ಯಾಸಕ್ತರ ಪಾಲಿಗೆ ಒಂದು ಹೊಸ ಅನುಭವ. ಸಂಸ್ಕೃತ ಕಾವ್ಯದ ಶೃಂಗಾರ, ಇಂಗ್ಲಿಷ್ ಕಾವ್ಯದ ರೊಮ್ಯಾಂಟಿಸಿಜ಼ಂ ಎರಡನ್ನೂ ಕಸಿಮಾಡಿದ ಆಕಾರ ತಳೆದ ಕನ್ನಡ ಕಾವ್ಯಪ್ರಪಂಚಕ್ಕೆ ಉರ್ದು ಕಾವ್ಯದ ಇಷ್ಕ್ (ಪ್ರೀತಿ) ಯಾ ಮೊಹಬ್ಬತ್ ಕೂಡಾ ಹೊಸದೊಂದು ಪರಿಕರವೇ ಹೌದು. ಮುಕ್ತಾರ ಗಜ಼ಲ್‌ಗಳು ಪ್ರೇಮ, ವಿರಹ, ಹುಡುಕಾಟದೊಂದಿಗೆ ಮೈದುಂಬಿಕೊಂಡು ಆಪ್ತತೆ ನೀಡುತ್ತವೆ. ಜಾಗತೀಕರಣದ ಗೌಜು, ಗದ್ದಲ, ನಿತಾಂತ ಉಮ್ಮಳದ ನಡುವೆ ಇವುಗಳ ಓದೇ ಹೊಸ ಹುಮ್ಮಸ್ಸು, ಒಂದಷ್ಟು ಖುಷಿ, ಆಹ್ಲಾದಗಳನ್ನು ನೀಡುತ್ತದೆ. ಐಟಿ. ಇಂಟರ್‌ನೆಟ್, ಲೈವ್‌ಬ್ಯಾಂಡ್, ಕಾಲ್‌ಸೆಂಟರ್, ಮೊಬೈಲ್ ಚಾಟ್‌ನಂತಹ ಹತ್ತಾರು ವಿದ್ಯುನ್ಮಾನ ಜಾಲಗಳಲ್ಲಿ ಹದಿಹರೆಯದ ಕಿಶೋರಿ ಕಣ್ಮನಗಳು ಬೇಕಾಬಿಟ್ಟಿ ಬಿಕರಿಯಾಗುತ್ತಿರುವ ಈ ಹೊತ್ತಲ್ಲಿ ಮುಕ್ತಾರ ಗಜ಼ಲ್‌ಗಳು ಕ್ಲಾಸಿಕಲ್ ಪ್ರೇಮದ ಆಪ್ಯಾಯಮಾನ ಪಲಕುಗಳೊಂದಿಗೆ ಅರಳಿಕೊಂಡು ಬೆಚ್ಚನೆಯ ಭಾವ ತಂದುಕೊಡುತ್ತವೆ. ಖಾಲಿಯಾಗಿದೆ ಮನಸ್ಸು; ಹೇಳಲು ಏನೂ ಇಲ್ಲ; ಹೇಳಬೇಕಾದರೂ ಏಕೆ? ಎಂದೆಲ್ಲಾ ಅಂದುಕೊಳ್ಳುತ್ತಿರುವ ಯುವ ಪೀಳಿಗೆಗೆ ಈ ಗಜ಼ಲ್‌ಗಳು ಒಂದು ಬಗೆಯ ಆರ್ದ್ರತೆಯನ್ನು ತುಂಬಿಕೊಡುತ್ತವೆ. ಬದುಕ ಬೀದಿಯನ್ನು ಶೃಂಗರಿಸಿಕೊಳ್ಳುವ ಬಯಕೆ ತುಂಬುತ್ತವೆ. ಏಕೆಂದರೆ ಇಲ್ಲಿ ಫ್ಯಾಷನ್ ಎನಿಸಬಹುದಾದ ತುಡಿತವಿದೆ. ದಣಿವರಿಯದ ಮನುಷ್ಯಸಂಬಂಧಗಳ ಹುಡುಕಾಟವಿದೆ. ಪ್ರೇಮ ತರುವ ಸಿಹಿಯಾತನೆ, ದುಃಖವಾದರೂ ಬೇಕೆನಿಸುವ 'ಮತ್ತು', ತುಂಬಿದಷ್ಟು ತುಂಬಿಕೊಳ್ಳಬೇಕೆನ್ನುವ ಧಾವಂತ, ವಿರಹ, ಅಂತಃಕರುಣೆ ಏನೆಲ್ಲ ಬದುಕ ಪಾತ್ರೆ ಶೃಂಗಾರಗೊಳ್ಳುವ ಭಾವದ ತುಣುಕುಗಳಿವೆ. ಉದಾಹರಣೆಗಾಗಿ ಒಂದನ್ನು ಗಮನಿಸಬಹುದು.

> *ಇದೇನಿದು ಅವನ ತೋಳದಿಂಬಿಲ್ಲದೆ ನಿದ್ದೆಯೆ ಬಾರದು*
> *ಅಂತೆಯೆ ಆ ಬಾಹುಗಳಲ್ಲಿ ನಲುಗುವುದ ಮೋಹಿಸಿದ್ದೇನೆ*
> *ಕರಿಚಿಟ್ಟೆಯಾಗಿ ನಾವು ಕಡಲ ಮೇಲೆ ಹಾರಿ ಹೋಗೋಣ*
> *ಈ ವಿಶ್ವ ಸೀಮೆಯ ನಾ ಮೀರುವುದು ಮೋಹಿಸಿದ್ದೇನೆ*

ಈ ಮುಕ್ಕಾಗದ ಅಪರಂಪಾರ ಪ್ರೀತಿಯೇ ಇಲ್ಲಿಯ ಗಜ಼ಲ್‌ಗಳ ಜೀವಾಳ. ಮುಕ್ತಾ ಅವರ ಗಜ಼ಲ್‌ಗಳ ವೈಶಿಷ್ಟ್ಯವನ್ನು ಕುರಿತು ಗಮನಿಸುವ ಪೂರ್ವದಲ್ಲಿ ಉರ್ದು ಭಾಷೆ ಮತ್ತು ಆ ಭಾಷೆಯಲ್ಲಿರುವ ಗಜ಼ಲ್ ಎಂಬ ಕಾವ್ಯರೂಪ ಕುರಿತಂತೆ ಒಂದೆರಡು ಮಾತುಗಳು ಅವಶ್ಯವೆಂದು ತೋರುತ್ತದೆ.

ಉರ್ದು, ಮುಟ್ಟಿದರೆ ಮುದುಡಿಕೊಳ್ಳುವುದೇನೋ ಎಂಬಂಥ ಅತ್ಯಂತ ಸೂಕ್ಷ್ಮ ಭಾವ ಸಂವೇದಿ ಗುಣ ಮತ್ತು ಲಯ ಎರಡನ್ನು ಜತನವಾಗಿರಿಸಿಕೊಂಡಿರುವ ಅಪ್ಪಟ ಭಾರತೀಯ ಭಾಷೆ. ಅದರಲ್ಲೂ ಹೈದ್ರಾಬಾದ್ ಕರ್ನಾಟಕ ಪ್ರದೇಶದ 'ದಖನಿ ಉರ್ದು' ಇದೆಯಲ್ಲ, ಇದು ಆರ್ದ್ರತೆ ಮತ್ತು ಗಾಂಭೀರ್ಯಗಳ ಸಂಗಮದಲ್ಲಿ ಅರಳಿದೆ. ಮೃದು ಮೃದಲ ಪದಃಪುಂಜ, ಶ್ರೀಮಂತ ಭಾವಾಭಿವ್ಯಕ್ತಿ, ಉಚ್ಚಾರಣೆಯ ಧ್ವನಿಕಾಕು, ಮೊಗಲಶಾಹಿಯ ದರಿಯಾದಿಲ್‌ನ ಗಾಂಭೀರ್ಯ – ಈ ಎಲ್ಲ ಅಂಶಗಳು ಅದನ್ನು ಕಾವ್ಯಾಲಯಕ್ಕೆ ಬೇಕಾದಂತೆ ನಾದಿ ಮಿದ್ದು ಹದಗೊಳಿಸಿವೆ. ತತ್ಕಾರಣವಾಗಿಯೇ, ಉರ್ದು ಗಜ಼ಲ್ ರೂಪಗಳಲ್ಲಿ ಅರ್ಥಯತಿ, ನಿಯತಯತಿಯೊಂದಿಗೆ ಪ್ರಾಸವನ್ನು ಭಾವದ ಓಘಕ್ಕೆ ಧಕ್ಕೆ ಬರದಂತೆ ಕಾಪಾಡಿಕೊಳ್ಳಲು ಸಾಧ್ಯವಾಗಿದೆ.

ಗಜ಼ಲ್ ಉರ್ದು ಕಾವ್ಯಲೋಕದ ಶಿರ ಮಣಿ. ಅದರ ರೂಪ, ವಸ್ತು, ಛಂದೋಲಯ ಎಲ್ಲವುಗಳಲ್ಲೂ ಒಂದು ಬಗೆಯ ಗತ್ತು ಗೈರತ್ತು ಇರುತ್ತದೆ. ಗಜ಼ಲ್ ಕಾವ್ಯಪ್ರಕಾರದ ಉರ್ದು ಭಾಷಿಕ ಸ್ವರೂಪ, ವೈಶಿಷ್ಟ್ಯ ಮತ್ತು ಪ್ರಯೋಗಗಳನ್ನು ಕುರಿತು ಮುಕ್ತಾಯಕ್ಕ ತಮ್ಮ ಎರಡೂ ಕೃತಿಗಳಲ್ಲಿ ದೀರ್ಘವಾದ ಮತ್ತು ಮೌಲಿಕವಾದ ಪ್ರಸ್ತಾವನೆ ಬರೆದು ಉಪಕರಿಸಿದ್ದಾರೆ. ಈ ಪ್ರಸ್ತಾವನೆ ಕಾವ್ಯ ಪ್ರವೇಶಿಕೆಗೆ ಅರ್ಥಪೂರ್ಣ ಚಾಲನೆಯಾಗಿರುವಂತೆ ಸಾಹಿತ್ಯ ಚರಿತ್ರೆ, ವಿಮರ್ಶೆಯಂಥ ಅಕೆಡೆಮಿಕ್ ಶಿಸ್ತುಗಳಿಗೂ ಚಾಲನೆ ನೀಡುವ ಅವಶ್ಯಕತೆಯಿದೆ. ಏಕೆಂದರೆ, ಕನ್ನಡಕ್ಕೆ ತೀರ ಹೊಸರೂಪವೆನಿಸಿರುವ ಇದನ್ನು ಸಹೃದಯರು ತಪ್ಪು ತಪ್ಪಾಗಿ ಗ್ರಹಿಸುವ ಅಥವಾ ವ್ಯಾಖ್ಯಾನಿಸುವ ಅಪಾಯ ಇದ್ದೇ ಇರುತ್ತದೆ. ಇದನ್ನು ಕವಿ ಶಾಂತರಸ ಮತ್ತು ಮುಕ್ತಾಯಕ್ಕ ಇಬ್ಬರೂ ತಮ್ಮ ಗಜ಼ಲ್ ಸಂಕಲನಗಳ ಪ್ರಸ್ತಾವನೆಗಳಲ್ಲಿ ಎತ್ತಿ ತೋರಿಸಿ 'ಭಾವಗೀತೆ' ಯಾ 'ಪ್ರೇಮಗೀತೆ' ಗಜ಼ಲ್ ಯಾಕಾಗುವುದಿಲ್ಲ ಎಂಬುದನ್ನು ಗಜ಼ಲ್ ರೂಪಲಾಸ್ಯ, ಛಂದೋಲಯಗಳನ್ನು ಸ್ಥೂಲವಾಗಿ ವಿವರಿಸಿ ಖಚಿತಪಡಿಸಿದ್ದಾರೆ. ಅಂತೆಯೇ ಗಜ಼ಲ್ ರಚನಾಂಗಗಳಾದ ಮತ್ಲಾ, ಕಾಫಿಯಾ, ರದೀಫ್, ಮಕ್ತಾ ಮುಂತಾದವುಗಳ ವಿನ್ಯಾಸ ಮತ್ತು ಭಾಷಿಕ ಲಯದ ಛಂದೋ ಆಕಾರಗಳನ್ನು ಕುರಿತ ವಿದ್ವತ್ಪೂರ್ಣ ಚರ್ಚೆ ಅಧ್ಯಯನಕ್ಕೆ ಆಕರವಾಗುವಂತೆ ಮಂಡಿಸಿದ್ದಾರೆ. ಉರ್ದು ಕಾವ್ಯ ಪ್ರಕಾರ

*ಗಜ಼ಲ್ ಉರ್ದು ಕಾವ್ಯಲೋಕದ ಶಿರಮಣಿ. ಅದರ ರೂಪ, ವಸ್ತು, ಛಂದೋಲಯ ಎಲ್ಲವುಗಳಲ್ಲೂ ಒಂದು ಬಗೆಯ ಗತ್ತು ಗೈರತ್ತು ಇರುತ್ತದೆ. ಗಜ಼ಲ್ ಕಾವ್ಯಪ್ರಕಾರದ ಉರ್ದು ಭಾಷಿಕ ಸ್ವರೂಪ, ವೈಶಿಷ್ಟ್ಯ ಮತ್ತು ಪ್ರಯೋಗಗಳನ್ನು ಕುರಿತು ಮುಕ್ತಾಯಕ್ಕ ತಮ್ಮ ಎರಡೂ ಕೃತಿಗಳಲ್ಲಿ ದೀರ್ಘವಾದ ಮತ್ತು ಮೌಲಿಕವಾದ ಪ್ರಸ್ತಾವನೆ ಬರೆದು ಉಪಕರಿಸಿದ್ದಾರೆ. ಈ ಪ್ರಸ್ತಾವನೆ ಕಾವ್ಯಪ್ರವೇಶಿಕೆಗೆ ಅರ್ಥಪೂರ್ಣ ಚಾಲನೆಯಾಗಿರುವಂತೆ ಸಾಹಿತ್ಯ ಚರಿತ್ರೆ, ವಿಮರ್ಶೆಯಂಥ ಅಕೆಡೆಮಿಕ್ ಶಿಸ್ತುಗಳಿಗೂ ಚಾಲನೆ ನೀಡುವ ಅವಶ್ಯಕತೆಯಿದೆ.*




ಮುಂದಿನ ಪುಟಕ್ಕೆ

# ಒಂದು ಜನಪದ ತ್ರಿಪದಿ




ನಮ್ಮ ಜನಪದ ಕಾವ್ಯ ಪರಂಪರೆಗೆ ಬಡ ಜನತೆಯ ಸಾಂಸ್ಕೃತಿಕ ಬದುಕಿನ ಅಪಾರ ಹಿನ್ನೆಲೆ ಇದೆ. ಅದರಲ್ಲಿ ಹೆಚ್ಚಿನ ಭಾಗ ಹುಟ್ಟಿದ್ದು ಊಳಿಗಮಾನ್ಯ ವ್ಯವಸ್ಥೆಯ ಕಾಲಘಟ್ಟದಲ್ಲಿ. ವರ್ಗ- ವರ್ಣ ವ್ಯವಸ್ಥೆ ಹುಟ್ಟುವ ಮೊದಲಿನ ಕನ್ನಡ ಸಮಾಜದ 'ಜನಪದ' ಉಳಿದಿರುವ ಸಾಧ್ಯತೆ ತೀರ ಕಡಿಮೆ.

ಇಲ್ಲಿ ಬಡವರ ಸಂಕಟದ ಆಳವನ್ನು ಕೇಳುಗರ ಮನ ಕಲಕುವಂತೆ ಮುಟ್ಟಿಸುವ ಒಂದು ಸಣ್ಣ ರಚನೆಯನ್ನು ವಿಶ್ಲೇಷಣೆಗೆ ಎತ್ತಿಕೊಳ್ಳಲಾಗಿದೆ. ಆ ತ್ರಿಪದಿ ಇದು–

*ಬಡವರು ಸತ್ತರೆ ಸುಡಲಿಕೆ ಸೌದಿಲ್ಲ*
*ಒಡಲ ಬೆಂಕೀಲಿ ಹೆಣ ಬೆಂದು / ಮಾದೇವಾ*
*ಬಡವರಿಗೆ ಸಾವು ಕೊಡಬೇಡ*

ಹೆಣಗಳನ್ನು ಸಂಸ್ಕರಿಸುವ ಎರಡು ಪದ್ಧತಿಗಳು ನಮ್ಮ ನಾಡಿನಲ್ಲಿ ಪ್ರಚಲಿತ. ಹುಗಿಯುವುದು ಇಲ್ಲವೇ ಸುಡುವುದು. ಸೌದೆ ದಕ್ಷಿಣ ಕರ್ನಾಟಕದಲ್ಲಿ ಬಳಕೆಯಲ್ಲಿದೆ. ಹಾಗಾಗಿ ಹೆಣಗಳನ್ನು ಸುಡುವ ಪದ್ಧತಿ ಇರುವ ದಕ್ಷಿಣ ಕರ್ನಾಟಕದ ಜನಪದರ ಮಧ್ಯೆ ಈ ತ್ರಿಪದಿ ಹುಟ್ಟಿದೆ.

ಇಲ್ಲಿ ಎರಡು ಬೆಂಕಿಗಳ ಪ್ರಸ್ತಾಪವಿದೆ. ಒಂದು ಸುಡಲಾರದಾಗಿದ್ದ ಒಳಗಿನ ಬೆಂಕಿ; ಇನ್ನೊಂದು ಸುಡಲು ಬೇಕಿದ್ದ ಹೊರಗಿನ ಬೆಂಕಿ. ಒಳಗಿನ ಬೆಂಕಿ ಅನಗತ್ಯ, ಹೊರಗಿನ ಬೆಂಕಿ ಅನಿವಾರ್ಯ. ಅನಿವಾರ್ಯವಾಗಿದ್ದ ಹೊರಗಿನ ಬೆಂಕಿಯನ್ನು ಪಡೆಯುವ ಸಾಧ್ಯತೆಯಿಲ್ಲದ ಅಸಹಾಯಕತೆ, ಕಡು ಬಡತನ, ಒಳಗಿನ ಬೆಂಕಿಯನ್ನು ಹೊರಗೆಳೆದು ತಂದು ಸಂಸ್ಕರಿಸುವ ಅಗತ್ಯ ಕ್ರಿಯೆಯನ್ನು ಪೂರೈಸಲು ಆಶಿಸುತ್ತಿದೆ. ಇದು ಎಂಥ ವಿಪರ್ಯಾಸ, ಭಯಾನಕ! ಹೊರಗಿನ ಬೆಂಕಿ ಇಲ್ಲದ್ದಕ್ಕಾಗಿ ಒಳಗಿನ ಬೆಂಕಿ ಹೊತ್ತಿಕೊಂಡಿದೆ. ಇದು ಹೊತ್ತಬಾರದಾಗಿದ್ದ ಬೆಂಕಿ. ಅದು ಒಳಗನ್ನು ಸುಡುವುದ ಬಿಟ್ಟು ಹೊರಗೆ ಬಂದು ಹೆಣವನ್ನಾದರೂ ಸುಡಬೇಕಿದೆ. ಆದರೆ ಅಯ್ಯೋ ಅದೂ ಅಸಾಧ್ಯ! ಅದು ಒಳಗನ್ನೇ ಸುಡುವುದರ ಮೂಲಕ ಬದುಕನ್ನು ಅಸಹ್ಯವಾಗಿಸುತ್ತಿದೆ.

ಹೆಣ ಸುಡಲು ಅನಿವಾರ್ಯವಿರುವ ಸೌದೆಯನ್ನು ಕೊಳ್ಳಲಿಕ್ಕೂ ಗತಿ ಇಲ್ಲದ ಬಡವರು ಅನುಭವಿಸುವ ಸಂಕಟದ ಪರಮಾವಧಿಯನ್ನು ಬಿಚ್ಚಿಡುವ ಈ ಧ್ವನಿಪೂರ್ಣ ನುಡಿ ಕಾವ್ಯಭೂಮತ್ವಕ್ಕೆ ಉತ್ತಮ ನಿದರ್ಶನ.

ಒಡಲ ಬೆಂಕಿಯಿಂದ ಹೆಣ ಸುಡಬೇಕೆನ್ನುವುದು ಬರೀ ಕಲ್ಪನೆ. ಅದು ಅಸಾಧ್ಯ. ಸತ್ತವರ ನಿಕಟ ಸಂಬಂಧಿಗಳೂ ಕಡು ಬಡವರೂ ಆದ 'ಜೀವಂತ ವ್ಯಕ್ತಿ'ಗಳ ನೋವಿನ ಆಳ ಅಸದಳ. ಇದು ಕಟು ಸತ್ಯ. ಈ ಸತ್ಯವನ್ನು ಮನಗಾಣಿಸಬೇಕಿರುವುದೇ ಈ ನುಡಿಯ ಉದ್ದೇಶ. 'ಒಡಲ ಬೆಂಕಿ'ಯೆಂಬ ಅಮೂರ್ತ, ಅವ್ಯಕ್ತ, ಆಂತರಿಕ ವಸ್ತುವಿನಿಂದ 'ಹೊರಗಿನ ಹೆಣ'ವೆಂಬ ಮೂರ್ತ, ವ್ಯಕ್ತ, ಬಹಿರಂಗ ವಸ್ತುವನ್ನು ಸಂಸ್ಕರಿಸಬೇಕಿದೆ.

ಅಸಹಾಯಕತೆಯೇ ದೈವದ ನಂಬುಗೆಗೆ ಕಾರಣ. ಅಂತೆಯೇ 'ಮಹಾದೇವಾ' ಎಂಬ ಆರ್ತ ಕೂಗು. 'ಬಡವರಿಗೆ ಸಾವು ಕೊಡಬೇಡಾ' ಎಂಬ ಮಾತಂತೂ ಘನಕ್ಕೆ ಘನ. ಸತ್ತರೆ ಸಂಸ್ಕರಿಸುವುದಕ್ಕೂ ಗತಿ ಇಲ್ಲದ ಬಡವರಿಗೆ ಸಾವೇ ಬೇಡ ಎಂಬ ನಿರ್ಣಯ ಸರಿ ಎನಿಸಿದರೂ ಅದಕ್ಕೆ ಪರ್ಯಾಯವಾಗಿ 'ಬದುಕು ಕೊಡು' ಎಂಬುದೇ ಉತ್ತರವೆ? ಸಾವೂ ಬೇಡ, ಬದುಕೂ ಬೇಡ ಇದೇ ನಿಜವಾದ ಸ್ಥಿತಿ ಅಲ್ಲವೇ? ಸಾವಿನಲ್ಲೂ ಅಗತ್ಯ ವಸ್ತುಗಳಿಲ್ಲದಿರುವಾಗ ಬದುಕುವುದರಲ್ಲೇನಿದೆ ಸಾರ್ಥಕತೆ? ಆದರೆ ಕಾವ್ಯ ಏಕೆ 'ಸಾವು ಕೊಡಬೇಡ' ಎನ್ನುತ್ತೆ? ಸಾವಿನ ಸಂಕಟದ ಅತಿರೇಕವನ್ನು ದಾಟಿ ತಲುಪುವ ನಿರ್ಣಯ 'ಸಾವು ಕೊಡಬೇಡ' ಎಂದು. ಇದರರ್ಥ 'ಬದುಕು ಕೊಡು' ಎಂದೂ ಅಲ್ಲ. ಏಕೆಂದರೆ ಬದುಕುವುದರಿಂದಲೇ ಅಲ್ಲವೇ ಈ ಪರಮಾವಧಿ ಸಂಕಟದ ಅನುಭವ?

**ಎಸ್. ಎಸ್. ಹಿರೇಮಠ**
ಪ್ರಾಂಶುಪಾಲ, ಕೊಟ್ಟೂರೇಶ್ವರ ಕಾಲೇಜ, ಕೊಟ್ಟೂರು, ಬಳ್ಳಾರಿ ಜಿಲ್ಲೆ

---

*ಹಿಂದಿನ ಪುಟದಿಂದ*

ಗಳಾದ ಗಝಲ್, ಷೇರ್ ಶಾಯರಿ, ರುಬಾಯ್, ಕವ್ವಾಲಿ ಮುಂತಾದವುಗಳು ಅಕ್ಷರದ ಮೂಲಕ ಓದುವ ಅಥವಾ ಮುದ್ರಿಸುವ ವಿದ್ಯಮಾನಗಳಿಗೆ ಪೂರ್ತಿ ದಕ್ಕುವುದೇ ಇಲ್ಲ. ಮೈಫಿಲ್‌ನ ಆಪ್ತವಾತಾವರಣದ ನಡುವೆ ವಿಶಿಷ್ಟ ಗಮಕ ಮತ್ತು ಹಾಡುಗಾರಿಕೆಯ ದಾಟಿ ಧರತಿ, ಕಲಾರಸಿಕರ ಸುಬಾನ್ ಅಲ್ಲಾ, ಬೆಳ್ಳಂ ಬೆಳಗಿನ ಶಮಾ, ಸಾಕಿ ಇವೇ ಒಂದು ಅನುಪಮ ಲೋಕ. ಇದನ್ನೆಲ್ಲಾ ಕನ್ನಡ ಭಾಷಿಕ ವಲಯ ಮತ್ತು ಕಲಾಲೋಕಕ್ಕೆ ತರುವುದಾದರೆ ಅದೊಂದು ಅದ್ಭುತ ಪ್ರಯೋಗವೇ ಆದೀತು. ಆದ್ದರಿಂದಲೇ ಮುಕ್ತಾ ಒಂದು ಭಾಷೆಯ ಸಾಹಿತ್ಯ ಕೃತಿಗಳನ್ನು ಇನ್ನೊಂದು ಭಾಷೆಗೆ ಅನುವಾದಿಸಿದಂತೆ ಒಂದು ಭಾಷೆಯ ವಿಶಿಷ್ಟ ಮಟ್ಟ, ಕಾವ್ಯ ಪ್ರಕಾರಗಳನ್ನು ಇನ್ನೊಂದು ಭಾಷೆಯಲ್ಲಿ ಕಟ್ಟುವುದು ಕಷ್ಟದ ಕೆಲಸವೆಂದು ಉರ್ದುವಿನ ಕಾವ್ಯ ಮೈಫಿಲ್‌ಗಳನ್ನು ಕಂಡವರಿಗೆ ಮುಕ್ತಾ ಅವರ ಈ ಮಾತಿನ ಸತ್ಯ ಮನವರಿಕೆಯಾಗದಿರದು. ಆದರೂ ಈ ಕಷ್ಟದ ಕೆಲಸವನ್ನು ಶಾಂತರಸ ಮತ್ತು ಮುಕ್ತಾಯಕ್ಕ ಇಬ್ಬರೂ ಪಣತೊಟ್ಟು ದಣಿವಿಲ್ಲದ ಪ್ರಯೋಗಗಳ ಮೂಲಕ ಸಾಧಿಸಿಕೊಂಡು ಬರುತ್ತಿದ್ದಾರಲ್ಲ, ಅದಕ್ಕಾಗಿ ಅವರಿಬ್ಬರೂ ಅಭಿನಂದನಾರ್ಹರು.

ಅಸಂಖ್ಯ ಹತಾಶೆಗಳ ನಡುವೆಯೂ ಪ್ರೇಮ ಹುಟ್ಟಿಸುವ ವಾಂಛೆ ಗಾಬರಿ ಹುಟ್ಟಿಸುವಂಥದು. ಗಝಲ್‌ಕಾರ್ತಿ ಮುಕ್ತಾ ತಮ್ಮ ಕೃತಿಗಳುದ್ದಕ್ಕೂ ಈ ಅಂಶವನ್ನು ಹರಡುವ ಪ್ರಯತ್ನಮಾಡಿದ್ದಾರೆ. ಅವರೇ ಹೇಳುವಂತೆ,

*''ಯಾವ ನೋವಿನಲ್ಲಿ ಹೇಗೆ ಇರುವೆನೆಂದು ಈ ಜಗಕ್ಕೇನು ಗೊತ್ತು*
*ಯಾರಿಗೂ ಲೆಕ್ಕ ನೀಡಬೇಕಿಲ್ಲ ಏಳು ಬಟ್ಟಲು ತುಂಬು ಸಾಕಿ''*
*ಯಾರ ನೋವುಗಳನರಿಯುವುದು ಯಾರಿಗೂ ಬೇಕಾಗಿಲ್ಲ*
*ಎಲ್ಲರೂ ನನ್ನವರಲ್ಲವೆನ್ನುವುದನು ತಿಳಿಯದೆ ಹೋದೆ.*

ಹೀಗೆ, ಈ ಬದುಕು ನಿರ್ದಯಿ. ಆದರೂ ಅದರೊಂದಿಗಿನ ಸಖ್ಯ ಮಾತ್ರ ಕವಿಯೊಬ್ಬ ನಿಗಂಟಿದ ಕಾವ್ಯದ ತುಡಿತದಂತೆಯೆ ಇದೆ. ನೂರು ಭ್ರಮೆ ಅಸಂಖ್ಯ ಸುಳ್ಳುಗಳ ನಡುವೆಯೂ 'ಬದುಕು' ಮಾತ್ರ ಪರಮ ಸತ್ಯವಾಗಿ ಗೋಚರಿಸುತ್ತದೆ. ನಿರಾಕರಣೆಗಳ ನಡುವೆಯೂ ಅದನ್ನು ಪ್ರೀತಿಸುವ ಛಲ ಗಝಲ್‌ಕಾರ್ತಿಯನ್ನು ಉನ್ನತ ದಾರ್ಶನಿಕ ನಿಲುವಿಗೇರಿಸಿದೆ. ಅಂಥದೊಂದು ಸೆಳಕು ಹೀಗಿದೆ :

*ಕೊನೆಗೂ ನಾನು ಹೇಗೆ ಬದುಕಬೇಕೆಂಬುದನ್ನೀಗ ತಿಳಿದಿದ್ದೇನೆ*
*ಕಾಡು ಹೂ ಕಾಡು ತಿಂಗಳಂತೆ ಬಾಳಬೇಕೆಂಬುದನ್ನು ಅರಿತಿದ್ದೇನೆ*
*ಹೇಗಿದ್ದರೂ ಏನು ಮಾಡಿದರೂ ಸರಿ ಈ ಜಗವು ಮೆಚ್ಚುವುದಿಲ್ಲ*
*ನಶ್ವರ ಆದರೆ ಸುಂದರ ಬದುಕ ಪ್ರೀತಿಸುವುದ ಮನಗಂಡಿದ್ದೇನೆ.*
*ಕಾಡು ಹಕ್ಕಿ ಚುಕ್ಕಿ ನೆಲ ಎಲ್ಲವನ್ನು ಎದೆತುಂಬಿ ನೋಡುತ್ತೇನೆ*
*ಬದುಕುವುದೇ ನಿಜವೆಂದಾದಾಗ ಚಂದವಿರಲು ಕಲಿತಿದ್ದೇನೆ.*

ಹೀಗೆ ಮುಕ್ತಾ ಬದುಕನ್ನು ತುಂಬಾ ಆಳವಾಗಿ ಪ್ರೀತಿಸುತ್ತಾರೆ. ಎಂತಲೇ ಖಾಸಗಿ ಪ್ರೀತಿಯೂ ಮೊದಮೊದಲು ಒಂದು ರಿಪಿ, ವರಾತವಾದಂತೆ ಕಂಡರೂ ಕಾಲ ಪಕ್ವವಾದಂತೆ ಖಾಸಗೀತನವನ್ನು ಮೀರಿ ಒಟ್ಟು ಮನುಷ್ಯಸಂಬಂಧಗಳ ಅನ್ವೇಷಣೆಯಾಗಿ, ತನ್ಮೂಲಕ ಜೀವದ್ರವ್ಯದ ತಾತ್ವಿಕ ಹೊಳಹಾಗಿ ಗರಿಬಿಚ್ಚಿಕೊಳ್ಳುತ್ತದೆ. ಇಲ್ಲಿಂದಲೇ ಜೀವನವನ್ನು ಇತರ ಮಗ್ಗಲುಗಳಲ್ಲಿ; ಮುಖ್ಯವಾಗಿ ಸ್ವಕೇಂದ್ರಿತ ನೆಲೆಯಿಂದ ಮೇಲೇರಿ ಸಮೂಹಕೇಂದ್ರಿತ ಹಿತಚಿಂತನೆಯ ಆಶಯವಾಗಿ ನೋಡುವ ಪರಿ ಸಿದ್ಧಿಸುತ್ತದೆ. ತಾನು ಮತ್ತು 'ತನ್ನವನ' ಸ್ಥಾಯಿ ಮತ್ತು ಸಂಚಾರಿ ಭಾವಗಳೆಲ್ಲವೂ ತಮ್ಮತನಗಳ ಹಂಗುಹರಿದು ದೇದೀಪ್ಯಮಾನವಾಗಿ ಜಗದಗಲ ವ್ಯಾಪಿಸಿಕೊಳ್ಳಲು ತವಕಿಸುತ್ತವೆ.

*ನಾವು ಶ್ರೀ ಸಾಮಾನ್ಯರು ಮುಖವಿಲ್ಲದವರು*
*ಸಮಸ್ಯೆಗಳ ಸುಳಿಯಲ್ಲಿ ಸಿಲುಕಿ ಒದ್ದಾಡುವವರು*
*ಶ್ರೀಮಂತಿಕೆ ವೈಭವ ಕನಸಿನಲ್ಲಿ ಕಂಡರೂ*
*ದನಗಣತಿ ಜನಗಣತಿಗಾಗಿ ದುಡಿಯುವವರು*
*ನಾವು ಸಾಮಾನ್ಯರು ನಮ್ಮನ್ನು ಸುಲಭವಾಗಿ ಬೇಟೆಯಾಡಬಹುದು*
*ಒಮ್ಮೆ ಎಚ್ಚೆತ್ತರೆ ಹಿಂದೆ ಸರಿಯದೆ ಕಹಳೆ ಊದುವವರು.*

ನೋಡಿ, ಇಲ್ಲಿನ ತುಡಿತದಲ್ಲಿ ಕಳಕಳಿಯಿದ್ದರೂ ಕಾವ್ಯವಾಗಲು ಸಾಧ್ಯವಾಗಿಲ್ಲ ತಾನೇ. ಮುಕ್ತಾ ಪ್ರೇಮ, ವಿರಹ, ಕಾವ್ಯ, ಬೆಚ್ಚಗಿನ ನೋವು, ಪ್ರಣಯಭಂಗುರತೆ ಇವುಗಳನ್ನು ಕುರಿತು ಬರೆಯುವಾಗ ಕಾವ್ಯದ ಬನಿ ಅದರಲ್ಲೂ ಗಝಲ್‌ನ ಗಮಲು ತನ್ನೆಲ್ಲ ರೂಪ ಲಾವಣ್ಯದೊಂದಿಗೆ ಅವತರಿಸುವಂತೆ ಸಾಮಾಜಿಕ ಕಾಳಜಿಯಲ್ಲಿ ತುಂಬಿಬರುವುದಿಲ್ಲ. ಏಕೆಂದರೆ ಅವರ ಒಟ್ಟು ಕಾವ್ಯದ ಕ್ಯಾನ್‌ವಾಸೇ ಅಂಥದ್ದು; ತೀರ 'ಸ್ವ'ದ ನೆಲೆಯಲ್ಲಿ ವಿಹರಿಸುವಂಥದು.

**ಡಾ|| ಮೀನಾಕ್ಷಿ ಬಾಳಿ**
ಕೇರಾಫ್ ನೀಲಾ ಕೆ. ೧೨/೧ಸಿ, ಪಿ.ಡಬ್ಲ್ಯೂ. ಕ್ವಾರ್ಟರ್ಸ್, ಜೇವರ್ಗಿ ಕಾಲೋನಿ, ಗುಲಬರ್ಗಾ - ೨



ಪ್ರಸ್ತುತವಿದೆ
ಹಿಂದೆಂದಿಗಿಂತಲೂ
ಉತ್ತಮವಾದ ಹೊಸ
ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ ಸಂತೂರ್

ನಿಮಗೆಂದೇ ವಿಶೇಷವಾಗಿ

FCB◆ULKA42940

HOSATHU Kannada Monthly / February 2006 Rs. 12 RNI Regn. No. KARKAN/1999/614 REGD. CPMG / KA / BGE – 7 / 2006-08
Licenced to post without prepayment. Licence No. WPP-14 Posted at Bangalore PSO on the 3rd of every month

ಕನ್ನಡದಲ್ಲೊಂದು ಅಪೂರ್ವ ಸಾಧನೆ

ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

# ನವಕರ್ನಾಟಕ
# ಜ್ಞಾನ-ವಿಜ್ಞಾನ ಕೋಶ

## ಜ್ಞಾನ-ವಿಜ್ಞಾನ ತಂತ್ರಜ್ಞಾನದ ಸರಳ ಸಚಿತ್ರ ನಿರೂಪಣೆ




ಡೆಮ್ಮಿ ¼ ಆಕಾರದ 740 ಪುಟಗಳು
(ವಿಷಯ ಸೂಚಿ ಸೇರಿ)

ಪ್ರಧಾನ ಸಂಪಾದಕರು
ಪ್ರೊ॥ ಎಂ. ಎ. ಸೇತುರಾವ್
ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್

ಜನಪ್ರಿಯ ಮೂರನೇ ಮುದ್ರಣ

ಸಲಹಾ ಮಂಡಳಿ ಸದಸ್ಯರು : ಪ್ರೊ॥ ಜೆ. ಆರ್. ಲಕ್ಷ್ಮಣರಾವ್, ಪ್ರೊ॥ ಅಡ್ಯನಡ್ಕ ಕೃಷ್ಣಭಟ್ ಶ್ರೀ ಕೊಳ್ಳೇಗಾಲ ಶರ್ಮ, ಡಾ॥ ಕೆ. ವಿ. ವೆಂಕಟರಾಮು, ಶ್ರೀ ಸಿ. ಆರ್. ಕೃಷ್ಣರಾವ್

ನಾಲ್ಕು ಸಂಪುಟಗಳಲ್ಲಿ... 33 ಪರಿಣತ ವಿಜ್ಞಾನ ಲೇಖಕರ

- 824 ಲೇಖನಗಳು
- 1,586 ವರ್ಣಚಿತ್ರಗಳು
- 150 ವಿಜ್ಞಾನಿಗಳ ಪರಿಚಯ
- 328 ಮಾಹಿತಿ ಅಂಕಣಗಳು
- 31 ನಿಮಗೆ ತಿಳಿದಿರಲಿ ಅಂಕಣಗಳು
- ನೊಬೆಲ್ ಪ್ರಶಸ್ತಿ ವಿಜೇತರು




**ಹೊಸತು**
ಮಾಸಪತ್ರಿಕೆಗೆ ಮೂರು ವರ್ಷದ ಚಂದಾ ಹಣ ರೂ. 300/- ನೀಡಿ ಜ್ಞಾನ-ವಿಜ್ಞಾನ ಕೋಶದ ಬೆಲೆಯ ಮೇಲೆ 20% ರಿಯಾಯಿತಿ ಪಡೆಯಿರಿ




4 ಸಂಪುಟಗಳ
ಒಟ್ಟು ಬೆಲೆ : ರೂ. 1800

ಕೆಲವು ಅಭಿಪ್ರಾಯಗಳು

ಅನೇಕ ಶ್ರೇಷ್ಠ ಕೃತಿಗಳನ್ನು ಕನ್ನಡಕ್ಕೆ ಕೊಟ್ಟಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆ ಈಗ ಭಾರತ ಸ್ವಾತಂತ್ರ್ಯದ ಸುವರ್ಣೋತ್ಸವದ ನೆನಪಿಗಾಗಿ ಇನ್ನೊಂದು ದೊಡ್ಡ ಯೋಜನೆಯನ್ನು ಕಾರ್ಯರೂಪಕ್ಕೆ ತಂದಿದೆ. ಅದೇ ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ. ಕರ್ನಾಟಕದ ಮಟ್ಟಿಗಂತೂ ಖಾಸಗಿ ನೆಲೆಯಲ್ಲಿ ಇದು ಪ್ರಥಮ ಪ್ರಯತ್ನ. - ಕರ್ಮವೀರ, 10-5-98

ವಿಜ್ಞಾನ ಮಾಹಿತಿಗಳ ವಾಹಿನಿಯ ನಡುವೆ ಅಲ್ಲಲ್ಲಿ ನೀಡಿರುವ 'ನಿಮಗೆ ತಿಳಿದಿರಲಿ' ವಿಭಾಗವು ಅನೇಕ ಸಾರ್ವತ್ರಿಕ ಆಸಕ್ತಿಯ ವಿಷಯಗಳ ಪರಿಚಯ ನೀಡುವುದರ ಜೊತೆಗೆ ಆ ವಿದ್ಯಮಾನಗಳ ಹಿಂದೆ ಅಡಗಿರುವ ಮೂಲ ವೈಜ್ಞಾನಿಕ ತತ್ವಗಳನ್ನು ತಿಳಿಸಿಕೊಡುತ್ತದೆ. ಇದು ವಿದ್ಯಾರ್ಥಿಗಳಿಗೂ, ಸಾಮಾನ್ಯ ಓದುಗರಿಗೂ ಆಸಕ್ತಿದಾಯಕ. - ಕನ್ನಡಪ್ರಭ, 26-4-98

ಇದೊಂದು ಮರಿ ವಿಶ್ವಕೋಶ. ಕನ್ನಡದಲ್ಲಿ ವಿಜ್ಞಾನ ವಾಙ್ಮಯ ಸಾಕಷ್ಟು ಪ್ರೌಢ ಸ್ಥಿತಿ ಐದಿರುವುದಕ್ಕೆ ಮಾನಕ.... ಕನ್ನಡದ ಹಿರಿಮೆ ಗರಿಮೆ ಬಗ್ಗೆ ಕೃತಾರ್ಥತೆ, ನವಕರ್ನಾಟಕದವರ ಬಗ್ಗೆ ಕೃತಜ್ಞತೆ. - ಜಿ. ಟಿ. ನಾರಾಯಣರಾವ್, ವೆಬ್‌ಸೈಟ್‌ನಲ್ಲಿ

ಈ ಶತಮಾನದ ಮಹತ್ವದ ಪ್ರಕಟಣೆಗಳಲ್ಲಿ ಮೈಲುಗಲ್ಲಾದ ನಿಮ್ಮ ಪ್ರಯತ್ನವನ್ನು ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು ಅಭಿನಂದಿಸುತ್ತದೆ ಮತ್ತು ಶುಭ ಹಾರೈಸುತ್ತದೆ. - ಡಾ॥ ಡಿ. ಕೆ. ಮಹಾಬಲರಾಜು, ಡಾ॥ ಎ. ಟಿ. ಪಾಟೀಲ್




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ಸಂಖ್ಯೆ : 5159
ಬೆಂಗಳೂರು - 560 001. ದೂರವಾಣಿ : 22203580, 30578022. ಫ್ಯಾಕ್ಸ್ : 30578023
e-mail : nkp@bgl.vsnl.net.in website : www.navakarnatakabooks.com
ಶಾಖೆಗಳು : ■ ಬೆಂಗಳೂರು - 9 ■ ಮಂಗಳೂರು - 1 ■ ಮೈಸೂರು - 24 ■ ಗುಲ್ಬರ್ಗಾ - 2

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna
© All rights reserved. Reproduction in